## ದಯವಿಟ್ಟು ಗಮನಿಸಿ

ಪ್ರತಿ ಪುಸ್ತಕಕ್ಕೂ ಮುಖ ಬೆಲೆಯ ಶೇ. ೨೦ರಷ್ಟು ರಿಯಾಯಿತಿ ನೀಡಲಾಗುವುದು.



ಶೇ. ೩೩ರಷ್ಟು ರಿಯಾಯಿತಿಯಿದೆ. ಒಂದು ಸಾವಿರ ರೂಪಾಯಿಗಳಿಗೆ ಮೇಲ್ಪಟ್ಟು ಪುಸ್ತಕಗಳನ್ನು ಖರೀದಿಸಬೇಕು.



ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ಪ್ರಕಟಿಸುತ್ತಿರುವ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ಕ್ಕೆ ಚಂದಾದಾರರಾಗಿರಿ.

| | | |
|---|---|---|
| ಬಿಡಿ ಪ್ರತಿ | - | ೩೦-೦೦ |
| ವಾರ್ಷಿಕ ಚಂದಾ | - | ೧೦೦-೦೦ |
| ಆಜೀವ ಚಂದಾ | - | ೩೦೦-೦೦ |

# ಅನಿಕೇತನ

## ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ

ಅಕ್ಟೋಬರ್ - ಡಿಸೆಂಬರ್ - ೨೦೦೫

*ಸಂಪಾದಕ*

**ಡಾ. ಎಂ.ಎಸ್. ಶೇಖರ್**



**ಕರ್ನಾಟಕ ಸಾಹಿತ್ಯ ಅಕಾಡೆಮಿ**

ಕನ್ನಡ ಭವನ, ಜೆ.ಸಿ. ರಸ್ತೆ

ಬೆಂಗಳೂರು - ೫೬೦ ೦೦೨

ದೂರವಾಣಿ : ೨೨೨೧ ೧೭೩೦

ANIKETHANA : A Literary Journal (Quarterly)
Edited by : **Dr. M.S. Shekar,** HOD, Dept of Kannada, Mysore University, P.G. Centre, Hemagangothri, Hassan - 573 201
Published by : **V.N. Mallikarjunaswamy,** Registrar, Karnataka Sahithya Academy, Kannada Bhavana, J.C. Road, Bangalore - 02

Pages : xii + 134

Registration No. 45646/88

ಸಂಪುಟ : ೧೭

ಸಂಚಿಕೆ : ೨

ಪ್ರತಿಗಳು : ೧೨೦೦

ಪುಟಗಳು : xii + ೧೩೪

ಪ್ರಧಾನ ಸಂಪಾದಕರು
**ಗೀತಾ ನಾಗಭೂಷಣ**
ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ

ಪ್ರಕಾಶಕರು
**ವಿ.ಎನ್. ಮಲ್ಲಿಕಾರ್ಜುನಸ್ವಾಮಿ**
ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು - ೫೬೦ ೦೦೨

**ಬಿಡಿ ಪ್ರತಿ : ರೂ. ೩೦/-**
**ವಾರ್ಷಿಕ ಚಂದಾ : ರೂ. ೧೦೦/-**
**ಆಜೀವ ಚಂದಾ : ರೂ. ೩೦೦/-**

ಮುಖಪುಟ ಕಲೆ : **ಕೆ.ಟಿ. ಶಿವಪ್ರಸಾದ್**
ರಕ್ಷಾಪುಟ ವಿನ್ಯಾಸ : **ಅನಿತಾ**

ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

# ಸಂಚಿಕೆಯ ಮುನ್ನ...

ಮೌಲಿಕವಾದ ಸಾಹಿತ್ಯ ಸಂಚಿಕೆಯನ್ನು ರೂಪಿಸುವಾಗ ಗುಣಾತ್ಮಕವಾದ ಬರಹಗಳಿಗಾಗಿ ತಡಕಾಡುತ್ತಲೆ ಇರಬೇಕಾಗುತ್ತದೆ. ಸದಭಿರುಚಿಯ ಲೇಖಕರುಗಳನ್ನು ಬೆನ್ನಟ್ಟದೆ ಇದ್ದರೆ ಅದು ಆಗುವುದೆ ಇಲ್ಲ. ಇದು ಕೊಂಚ ತ್ರಾಸದ ಕೆಲಸವೂ ಹೌದು. ಹಾಗಾಗಿ ಈ ಸಂಚಿಕೆ ಬರಲು ಸ್ವಲ್ಪ ತಡವಾಗಿದೆ. ಇದಕ್ಕಾಗಿ ಅನಿಕೇತನ ಓದುಗರ ಕ್ಷಮೆ ಇರಲಿ. ಈ ಮುಂಚೆ ಒಂದು ಸಂಯುಕ್ತ ಸಂಚಿಕೆಯು ಸೇರಿದ ಹಾಗೆ ಮೂರು ಸಂಚಿಕೆಗಳ ಬಗ್ಗೆ ಅನಿಕೇತನ ಓದುಗ ಬಳಗ ಮೆಚ್ಚುಗೆಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದೆ. ಸದಭಿರುಚಿಯನ್ನು ಕಾಯ್ದುಕೊಳ್ಳುವಲ್ಲಿ ಮೌಲಿಕವಾದ ಈ ಅಭಿಪ್ರಾಯಗಳು ಮುಖ್ಯವೆನಿಸುತ್ತವೆ. ನಮ್ಮ ಅಕಾಡೆಮಿಯ ಅಧ್ಯಕ್ಷರು, ಸದಸ್ಯರುಗಳು ಹಾಗೂ ಆಡಳಿತ ವರ್ಗದವರೆಲ್ಲರೂ ಸಹ; ಸಂಚಿಕೆಗಳ ಬಗ್ಗೆ ಬಂದಿರುವ ಒಳ್ಳೆಯ ಅಭಿಪ್ರಾಯಗಳನ್ನು ನನಗೆ ತಿಳಿಸುತ್ತಲೆ, ಮೆಚ್ಚುಗೆಯ ಮಾತಗಳನ್ನಾಡಿದ್ದಾರೆ. ಇವರೆಲ್ಲರ ಪ್ರೋತ್ಸಾಹ ಅಭಿಪ್ರಾಯಗಳು ಸಂಚಿಕೆಯನ್ನು ಸೂಕ್ಷ್ಮ ನೆಲೆಯಲ್ಲಿ ರೂಪಿಸಲು ಸಾಧ್ಯವಾಗುತ್ತಿದೆ. ಹಾಗಾಗಿ ಅವರಿಗೆಲ್ಲ ನನ್ನ ಕೃತಜ್ಞತೆಗಳು. ಸಂಚಿಕೆಗಳು ಇನ್ನಷ್ಟು ಗುಣಾತ್ಮಕವಾಗಿ ಬರಬೇಕೆಂಬ ವಿಷಯದಲ್ಲಿ ನನ್ನದೊಂದು ಸಣ್ಣ ಅತೃಪ್ತಿ ಇದ್ದೆ ಇರುತ್ತದೆ. ಬಹುಶಃ ಆ ಬಗೆಯ ನನ್ನ ಅತೃಪ್ತಿಯೆ ಸಂಚಿಕೆಗಳು ಮೌಲಿಕವಾಗಿ ಬರಲು ಸಾಧ್ಯವಾಗುತ್ತಿದೆ ಅನ್ನಿಸುತ್ತದೆ.

ನನ್ನ ಸಂಪಾದಕತ್ವದಲ್ಲಿ ಬರುತ್ತಿರುವ ಈ ಸಂಚಿಕೆ ನಾಲ್ಕನೆಯದು. ಜಗತ್ತಿನ ಬೇರೆ ಬೇರೆ ಭಾಷೆಯ ಕತೆ, ಲೇಖನ ಹಾಗೂ ಕವಿತೆಗಳ ಅನುವಾದಗಳನ್ನೊಳಗೊಂಡ ಈ ಸಂಚಿಕೆ ವಿಶ್ವಪ್ರಸಿದ್ಧಿಯಾದ ಚಿತ್ರಕಲಾವಿದರ ಬಗೆಗಿನ ಲೇಖನವನ್ನು ಒಳಗೊಂಡಿದೆ. ಖ್ಯಾತ ಫ್ರೆಂಚ್ ಸೂಕ್ತಿಧಾರ ಲರೋಷ್‌ಫೋಕ್‌ನ ಸಾರೋಕ್ತಿಗಳನ್ನು ಒಳಗೊಂಡಿರುವುದು ವಿಶೇಷವೆನಿಸುತ್ತಿದೆ. ಜೊತೆಗೆ ಕನ್ನಡ ಸಾಹಿತ್ಯ ಪರಂಪರೆಯ ವೈವಿಧ್ಯತೆಯ, ಸೂಕ್ಷ್ಮ ಬರಹಗಳನ್ನೊಳಗೊಂಡ ಈ ಸಂಚಿಕೆ, ನಮ್ಮ ಅನಿಕೇತನ ಓದುಗರಿಗೆ ಒಳ್ಳೆಯ ಅಭಿರುಚಿಯನ್ನುಂಟು ಮಾಡಬಹುದೆನಿಸುತ್ತದೆ.

ಅನುವಾದ ಭಾಗದಲ್ಲಿ; ಬದುಕಿನ ಸಂಕೀರ್ಣತೆಯನ್ನೊಳಗೊಂಡ ತಣ್ಣನೆಯ ವಿಷಾದವನ್ನುಟ್ಟಿಸುವ, ತುಂಬು ಮಹತ್ವದ ಬರಹಗಳಿವೆ. ಲ್ಯಾಟೀನ್ ಅಮೇರಿಕಾದ

ಸ್ಪ್ಯಾನೀಸ್ ಭಾಷೆಯ ಮಾಂತ್ರಿಕ ವಾಸ್ತವ ಮಾರ್ಗದಲ್ಲಿ ಕತೆಗಳನ್ನು ಬರೆದು ಹೆಸರಾದ, ಜಾರ್ಜ್ ಲೂಯಿ ಬೊರೇಸ್‌ನ 'ದಿ ಡ್ಯೂಯೆಲ್' ಕಥೆಯನ್ನು, ಸೂಕ್ಷ್ಮ ಸಂವೇದನೆಯ ಲೇಖಕ ಡಾ. ಕೆ. ಪುಟ್ಟಸ್ವಾಮಿ ಅವರು ಅನುವಾದಿಸಿಕೊಟ್ಟಿದ್ದಾರೆ. ಕಾದಾಟ ಕೂಡ ಒಂದು ಯಜ್ಞದಂತೆ ಚಿತ್ರಿತವಾಗಿರುವ ಈ ಕಥೆಯಲ್ಲಿ 'ಮನುಷ್ಯರಿಗಿಂತ ವಸ್ತುಗಳು ದೀರ್ಘ ಕಾಲ ಬದುಕುತ್ತವೆ. ಯಾರಿಗೆ ಗೊತ್ತು. ಈ ಚಾಕುಗಳು ಮತ್ತೆ ಮುಖಾಮುಖಿಯಾಗಬಹುದು' ಎಂದು ಮುಕ್ತಾಯವಾಗುವ ಈ ಕಥೆ, ಮನುಷ್ಯನ ಆಲೋಚನ ಕ್ರಮವನ್ನೆ ಬದಲಿಸುವಂತಿದೆ. ತೆಲುಗಿನ ಪ್ರಸಿದ್ಧ ಕಥೆಗಾರ ಚಾಂಗಟಿ ತುಳಸಿ ಅವರ 'ಯಾಷ್-ಟ್ರೇ' ಕಥೆಯನ್ನು ನಮ್ಮ ಪ್ರಸಿದ್ಧ ಬಂಡಾಯ ಕಥೆಗಾರರಾದ ಕುಂ. ವೀರಭದ್ರಪ್ಪ ಅವರು ಅನುವಾದಿಸಿಕೊಟ್ಟಿದ್ದಾರೆ. ಕಳಚಿಹೋದ ಬದುಕಿನ ಬಗ್ಗೆ ಮರುಕವನ್ನುಟ್ಟಿಸುವ ಈ ಕಥೆ ವಿಶೇಷವೆನಿಸುತ್ತದೆ. ಪಿ.ಎನ್. ಮೆಡ್‌ವೆಡೀವ್ ಮತ್ತು ಎಂ. ಬಖ್ತಿನ್ ಅವರ ಸಾಹಿತ್ಯ ಇತಿಹಾಸದ ಗುರಿಗಳು ಕಾರ್ಯಗಳು ಮತ್ತು ವಿಧಾನಗಳು ಲೇಖನವನ್ನು ಇಂಗ್ಲಿಷ್ ಉಪನ್ಯಾಸಕರಾದ ಡಾ. ರಾಜೀವ ಪೂರ್ಣಚಂದ್ರ ಅವರು ಅನುವಾದಿಸಿದ್ದಾರೆ. ಬದುಕು ಮತ್ತು ಸಾಹಿತ್ಯಕ ಸಂಬಂಧದ ಹಿನ್ನೆಲೆಯಲ್ಲಿ ಈ ಲೇಖನ ಉಪಯುಕ್ತವಾದುದ್ದಾಗಿದೆ. ಹಿಂದಿಯ ಪ್ರಖ್ಯಾತ ಲೇಖಕರೂ ಜ್ಞಾನಪೀಠ ಪ್ರಶಸ್ತಿ ವಿಜೇತರೂ ಆದ ಫಣೀಶ್ವರನಾಥ ರೇಣು ಅವರ 'ಇತಿಹಾಸ, ಧರ್ಮ ಹಾಗೂ ಮನುಷ್ಯ' ಎಂಬ ಕಥೆಯನ್ನು ಡಾ. ಕಾಶೀನಾಥ ಅಂಬಲಿಗೆ ಅವರು ಅನುವಾದಿಸಿಕೊಟ್ಟಿದ್ದಾರೆ. ಫ್ರೆಂಚ್‌ನ ಪ್ರಸಿದ್ಧ ಲೇಖಕರಾದ ಲರೋಷ್ ಪೋಕೊನ ಸಾರೋಕ್ತಿಗಳನ್ನು ಈ ಸಂಚಿಕೆ ಒಳಗೊಂಡಿರುವುದು ತುಂಬ ಮಹತ್ವದ್ದೆನಿಸುತ್ತದೆ. ಈ ಸಾರೋಕ್ತಿಗಳನ್ನು ಹಿರಿಯ ಅನುವಾದಕರಾದ ವಿ. ಶ್ರೀನಿವಾಸ ಅವರು ಅನುವಾದಿಸಿಕೊಟ್ಟಿದ್ದಾರೆ. ಬದುಕಿನ ಬಗ್ಗೆ ಅರಿವನ್ನು, ವಿವೇಕವನ್ನು ತಿಳಿಸಿಕೊಡುವ ಈ ಸಾರೋಕ್ತಿಗಳು, ನಮ್ಮ ಕ್ರಾಂತಿಕಾರಿ ಕವಿ ಸರ್ವಜ್ಞನ ತ್ರಿಪದಿಗಳನ್ನು ನೆನಪಿಸುವಂತಿವೆ. 'ವಿಮರ್ಶೆಯ ಭಾಷೆ' ಎಂಬ ಐ.ಎ. ರಿಚರ್ಡ್ಸ್‌ನ ಮಹತ್ವದ ಲೇಖನವನ್ನು ಇಂಗ್ಲಿಷ್ ಉಪನ್ಯಾಸಕರಾದ ಬಿ.ಎನ್. ಶ್ರೀಕೀರ್ತಿ ಅವರು ಅನುವಾದಿಸಿದ್ದಾರೆ.

ಇಂಡಿಯಾದ ಮೊಟ್ಟಮೊದಲ ಜ್ಞಾನಪೀಠ ಪ್ರಶಸ್ತಿಯನ್ನು ಪಡೆದ ಹಿರಿಯ ತಲೆಮಾರಿನ ಪ್ರಖ್ಯಾತ ಮಲೆಯಾಳಂ ಮಹಾಕವಿ ಜಿ. ಶಂಕರಕುರುಪ್ ಅವರ 'ಶಿವತಾಂಡವ' ಎಂಬ ಮಹತ್ವದ ಕವಿತೆಯನ್ನು ಹಿರಿಯ ಅನುವಾದಕರಾದ ಕೆ.ಕೆ. ನಾಯರ್ ಅವರು ಅನುವಾದಿಸಿದ್ದಾರೆ. ಪಂಜಾಬಿ ಮೂಲದ ದಲಿತ ಕವಿ ಶ್ರೀ ಬಲಭೀರ ಮಾಧೋಪುರಿ ಅವರ ಕವಿಯ ಆಸೆ ಎಂಬ ಕವಿತೆಯನ್ನು ಹೆಚ್. ನಾಗರಾಜಪ್ಪ ಅವರು ಅನುವಾದಿಸಿದ್ದಾರೆ. ತಮಿಳಿನ ಅಬ್ದುಲ್ ರೆಹಮಾನ್ ಅವರ 'ಪದ ಪ್ರಕರಣ' ಕವಿತೆಯನ್ನು ಶ್ರೀ ಕೃಷ್ಣಭಟ್ ಅರ್ತಿಕಜೆ ಅವರು ಅನುವಾದಿಸಿದ್ದಾರೆ. ಈ ಕವಿತೆ ಸಾಮರಸ್ಯದ ದೃಷ್ಟಿಯಿಂದ ಮಹತ್ವದ್ದೆನಿಸುತ್ತದೆ.

ಸಂಚಿಕೆಯ ಎರಡನೆಯ ಭಾಗದಲ್ಲಿ ಮಹಾಕವಿಗಳಾದ ಪಂಪ ಮತ್ತು ರನ್ನ ಅವರುಗಳ ಸೃಷ್ಟಿಯಲ್ಲಿ ಅಹಿಂಸಾ ಪ್ರತಿಪಾದನೆ ಹೇಗೆ ಮೂಡಿಬಂದಿದೆ ಎಂಬುದನ್ನು, ಸೂಕ್ಷ್ಮಸಂವೇದನೆಯ ಹಿರಿಯ ಲೇಖಕರಾದ ಪ್ರೊ. ಕೃಷ್ಣಮೂರ್ತಿ ಹನೂರು ಅವರು ತಮ್ಮ ಲೇಖನದಲ್ಲಿ ವಿಶ್ಲೇಷಿಸಿದ್ದಾರೆ. ಹೈದರಾಬಾದ್ ಕರ್ನಾಟಕದ ಅಪರೂಪದ ಕತೆಗಾರರಾದ ರಾಜಶೇಖರ ನೀರಮಾನ್ವಿ ಅವರ 'ಹಂಗಿನರಮನೆಯ ಹೊರಗೆ' ಕಥಾ ಸಂಕಲನವನ್ನು ಕುರಿತಂತೆ; ಹಿರಿಯ ವಿದ್ವಾಂಸರಾದ ಪ್ರೊ. ವಿ.ಜಿ. ಪೂಜಾರ್ ಅವರು ತುಂಬ ಅರ್ಥಪೂರ್ಣವಾಗಿ ವಿಶ್ಲೇಷಿಸಿದ್ದಾರೆ. ಹಿರಿಯ ಕವಿ ಪಂಜೆಯವರ ಕಾವ್ಯವನ್ನು ಅಮೃತ ಸೋಮೇಶ್ವರ ಅವರು ಪರಿಚಯಿಸಿರುವುದು ಉಪಯುಕ್ತವಾದುದ್ದಾಗಿದೆ.

ಡಾ. ಸಣ್ಣರಾಮ ಅವರ ಅಂಬೇಡ್ಕರ್ ಮತ್ತು ಕುವೆಂಪು ಎಂಬ ಲೇಖನ ವೈಚಾರಿಕ ಹಿನ್ನೆಲೆಯಲ್ಲಿ ಮಹತ್ವದ್ದಾಗಿದೆ. ಜೀಶಂಪ ಅವರ ಕತೆಗಳನ್ನು ಕುರಿತಂತೆ ಡಾ. ಶಂಕರ್ ಅವರ ಲೇಖನ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತೆ ಗೀತಾ ನಾಗಭೂಷಣ ಅವರ ಬದುಕು ಕಾದಂಬರಿ ಕುರಿತ ಲೇಖನಗಳು ಹೊಸ ಅರಿವನ್ನುಂಟು ಮಾಡುತ್ತವೆ. ಡಾ. ಟಿ. ಸುಬ್ರಹ್ಮಣ್ಯಂ ಅವರ ಸೀಮನ್-ದ-ಬೊವಾನನ್ನು ಕುರಿತ ಲೇಖನ ಹೊಸ ಬಗೆಯದಾಗಿದೆ. ಪ್ರಖ್ಯಾತ ಕಲಾವಿದ ಡಾಲಿಯನ್ನು ಕುರಿತ ಪೂರ್ಣಿಮಾದೇವಿ ಲೇಖನ-ವಿಭಿನ್ನವಾದುದ್ದಾಗಿದೆ. ಕಾ.ತ. ಚಿಕ್ಕಣ್ಣನವರ ಕತೆಗಳನ್ನು ಕುರಿತ ಎಚ್. ದಂಡಪ್ಪ ಅವರ ಲೇಖನ, ಜನಪದ ರಾಮಾಯಣ ಮತ್ತು ಮಹಾಭಾರತ ಕುರಿತ ಡಾ. ಪುಟ್ಟಸ್ವಾಮಿ ಅವರ ಲೇಖನ ಯಶವಂತ ಚಿತ್ತಾಲರ ಕಥಾಸಂಕಲವೊಂದನ್ನು ಕುರಿತ ಹಂಗರಹಳ್ಳಿ ಪ್ರಭಾಕರ್ ಇವರುಗಳ ಲೇಖನಗಳನ್ನು ಕೂಡ ಈ ಸಂಚಿಕೆ ಒಳಗೊಂಡಿದೆ.

ಹಾಗೆಯೆ ನಮ್ಮ ಸೂಕ್ಷ್ಮ ಸಂವೇದನೆಯ ಮಹತ್ವದ ಕವಿಗಳಾದ ಪ್ರೊ. ಎಚ್. ಗೋವಿಂದಯ್ಯ, ಮಾಲತಿ ಪಟ್ಟಣಶೆಟ್ಟಿ, ಹಾ.ಮ. ಕನಕ, ಅನುಪಮಾ ಅವರುಗಳ ಕವಿತೆಗಳು ಈ ಸಂಚಿಕೆಯಲ್ಲಿ ಸೇರ್ಪಡೆಯಾಗಿರುವುದು ವಿಶೇಷ ಎನಿಸುತ್ತದೆ.

ಹೀಗೆ; ಈ ಸಂಚಿಕೆಯಲ್ಲಿರುವ ಎಲ್ಲ ಬರಹಗಳು ಕೂಡ ಓದುಗರಿಗೆ ಸದಭಿರುಚಿಯನ್ನು ಉಂಟು ಮಾಡುವಂತಿವೆ. ಹಾಗಾಗಿ ಇದಕ್ಕೆ ಕಾರಣರಾಗಿರುವ ಈ ಸಂಚಿಕೆಯ ಎಲ್ಲ ಹಿರಿ-ಕಿರಿಯ ಲೇಖಕ ಮಿತ್ರರುಗಳಿಗೂ, ಸಂಚಿಕೆಯ ಮುಖಪುಟ ಕಲೆಗಾಗಿ ತಮ್ಮ ಚಿತ್ರಕಲೆಯನ್ನು ನೀಡಿರುವ ಬದುಕಿನ ಬಗ್ಗೆ ತಮ್ಮದೇ ಆದ ವಿಶಿಷ್ಟ ಒಳನೋಟಗಳಿರುವ, ದಟ್ಟ ಮನುಷ್ಯ ಪ್ರೀತಿಯ ನಾಡಿನ ಪ್ರಖ್ಯಾತ ಚಿತ್ರಕಲಾವಿದರಾದ ಕೆ.ಟಿ. ಶಿವಪ್ರಸಾದ್-ಇವರೆಲ್ಲರಿಗೂ ನನ್ನ ನೆನಕೆಗಳು.

ಎಂದಿನಂತೆ; ಸಂಚಿಕೆಯು ರೂಪುಗೊಳ್ಳುವಲ್ಲಿ ಎಲ್ಲ ಬಗೆಯ ಸಹಕಾರ ನೀಡುತ್ತಿರುವ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಿಗೂ, ರಿಜಿಸ್ಟ್ರಾರ್ ಅವರಿಗೂ ಹಾಗೂ ಅಕಾಡೆಮಿಯ ಎಲ್ಲ ಸಿಬ್ಬಂದಿಗಳಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಈ ಬಗೆಯ ಒಳ್ಳೆಯ ಅಭಿರುಚಿಯ ಬರಹಗಳನ್ನು ನಮ್ಮ ಅನಿಕೇತನ ಓದುಗರು ಎಂದಿನ ಸಹೃದಯತೆಯಿಂದ ಸ್ವೀಕರಿಸುತ್ತಾರೆಂಬ ವಿಶ್ವಾಸದಿಂದ, ಓದುಗರ ಮತ್ತು ಲೇಖಕರುಗಳೆಲ್ಲರ ಪ್ರತಿಕ್ರಿಯೆಯನ್ನು ಸ್ವಾಗತಿಸುತ್ತ ಈ ನನ್ನ ಸಂಚಿಕೆಯ ಮುನ್ನ ಮಾತುಗಳನ್ನು ಮುಗಿಸುವೆ.

**ಡಾ. ಎಂ.ಎಸ್. ಶೇಖರ್**
ಸಂಪಾದಕ

# ಪರಿವಿಡಿ

## ಭಾಗ - ೧

# ಪೈಪೋಟಿ

ಸ್ಪ್ಯಾನೀಸ್ ಮೂಲ : ಜಾರ್ಜ್ ಲೂಯಿ ಬೋರೆಸ್
ಅನುವಾದ : ಡಾ. ಕೆ. ಪುಟ್ಟಸ್ವಾಮಿ

ಬೆಳಿಗ್ಗೆ ಪತ್ರಿಕೆಗಳನ್ನು ಓದುವವರು ಸಾಮಾನ್ಯವಾಗಿ ತಮ್ಮ ಸುತ್ತಲಿನ ಜಂಜಾಟವನ್ನು ಮರೆಯಲೆಂದು ಅಥವಾ ದಿನದ ಯಾವುದೇ ವೇಳೆಯಲ್ಲಿ ಮಾತನಾಡಲು ಏನಾದರೊಂದು ಮಾಹಿತಿ ಇರಲೆಂದು ಓದುತ್ತಾರೆ. ಆದ್ದರಿಂದ ಒಂದು ಕಾಲಕ್ಕೆ ಸಾಕಷ್ಟು ದೊಡ್ಡ ಸುದ್ದಿಯಾಗಿ, ಪ್ರಸಿದ್ಧಿಯಾಗಿ ಮೆರೆದ ಮಾನೆಕೊ ಯುರಿಯೇಟ್ ಮತ್ತು ಡಂಕನ್ ನಡುವಣ ಪ್ರಕರಣವನ್ನು ಎಲ್ಲರೂ ಮರೆತಿದ್ದರೆ ಆಶ್ಚರ್ಯಪಡಬೇಕಿಲ್ಲ. ಅಥವಾ ನೆನಪಿದ್ದರೂ ಅದೊಂದು ಕನಸಿನಂತೆ ಭಾಸವಾಗುತ್ತದೆ. ಅದೂ ಅಲ್ಲದೆ ಈ ಘಟನೆ ನಡೆದಿದ್ದು ೧೯೧೦ರಲ್ಲಿ. ಧೂಮಕೇತುವೊಂದು ಅಪ್ಪಳಿಸಿದ ವರ್ಷ. ಯಾವುದೋ ಶತಮಾನದ ಸಂಭ್ರಮ. ಆ ನಂತರ ನಾವು ಸಾಕಷ್ಟು ಕಳೆದುಕೊಂಡಿದ್ದೇವೆ. ಈ ಕಥಾನಾಯಕರಿಬ್ಬರೂ ಸತ್ತಿದ್ದಾರೆ. ಆ ಘಟನೆಗೆ ಸಾಕ್ಷಿಯಾದವರು ಮೌನವ್ರತಕ್ಕೆ ಶರಣಾದರು. ಆ ವಿಧಿಯಾಚರಣೆಯ ಮಹತ್ವವನ್ನರಿತ ನಾನು, ಆ ಬಗ್ಗೆ ಏಳೆಂಟು ವರ್ಷ ರಮ್ಯಭಾವನೆಯಲ್ಲಿ ಬೆಳೆದ ನಾನು ಸಹ ಆ ಮೌನವ್ರತದ ಪ್ರಮಾಣವಚನಕ್ಕೆ ಕೈ ಎತ್ತಿದೆ. ನಾನು ಪ್ರಮಾಣ ಮಾಡಿದ್ದನ್ನು ಇತರರು ಗಮನಿಸಿದರೋ ಇಲ್ಲವೋ ಅಥವಾ ಅವರು ತಮ್ಮ ವ್ರತಕ್ಕೆ ಅಂಟಿಕೊಂಡರೋ ಇಲ್ಲವೋ ತಿಳಿಯದು. ಅದೇನೇ ಇರಲಿ, ಕಾಲವು ಅನಿವಾರ್ಯವಾಗಿ ತರುವ ಭಿನ್ನತೆಯನ್ನು ಅರಗಿಸಿಕೊಂಡು ಉತ್ತಮ ಅಥವಾ ಕೆಟ್ಟ ಬರವಣಿಗೆಯಲ್ಲಿ ಮೂಡಿದ ಆ ಕಥೆ ಇಲ್ಲಿದೆ ನೋಡಿ.

ಲಾಫಿನರ್, ನನ್ನ ಸೋದರ ಸಂಬಂಧಿ, ಆ ಸಂಜೆ ಆತ ತನ್ನ ಕೆಲವು ಸ್ನೇಹಿತರಿಗೆ ಸೇರಿದ ಲಾರೆಲ್ ಎಂಬ ಹಳ್ಳಿಯ ಮನೆಗೆ ನನ್ನನ್ನು ಕರೆದೊಯ್ದ. ಆ ಸಂಜೆ ಅಲ್ಲಿ ಬೆಂಕಿಯಲ್ಲಿ ಮಾಂಸ ಉರಿದು ತಿನ್ನುವ ಔತಣವಿತ್ತು. ಆ ಸ್ಥಳ ಎಲ್ಲಿದೆ ಎಂದು ನನಗೆ ಹೇಳಲಾಗದು. ಉತ್ತರ ದಿಕ್ಕಿಗಿರುವ

ಯಾವುದಾದರೊಂದು ನಗರದಿಂದ ದೂರವಾದ ಪ್ರಶಾಂತವಾದ, ಊರೆಂದು ತಿಳಿಯೋಣ. ವಿಶಾಲವಾದ ಬ್ಯೂನಸ್ ಐರೀಸ್‌ನ ನಗರ ಅಥವಾ ಅದರ ಸುತ್ತಲಿನ ಹುಲ್ಲುಗಾವಲಿನ ಲಕ್ಷಣವಿಲ್ಲದ ನದಿಯ ಇಳಿಜಾರಿನಲ್ಲಿರುವ ಒಂದು ಸ್ಥಳವಾಗಿತ್ತು. ರೈಲು ಪ್ರಯಾಣ ದೀರ್ಘವಾಗಿದ್ದು ನನಗೆ ಅಂತ್ಯವಿಲ್ಲದ ಪಯಣದಂತೆ ಕಂಡಿತು. ಅಲ್ಲದೆ ಮಕ್ಕಳಿಗೆ ಕಾಲ ನಿಧಾನವಾಗಿ ಚಲಿಸುತ್ತದೆ. ಆ ಹಳ್ಳಿಯ ಮನೆಯ ಮುಖ್ಯದ್ವಾರವನ್ನು ದಾಟಿದಾಗ ನಿಸರ್ಗದ ಅನೇಕ ಮೂಲರೂಪಗಳು ಗ್ರಹಿಕೆಗೆ ಬಂದವು. ಬೇಯಿಸಿದಾಗ ಹೊಂಬಣ್ಣಕ್ಕೆ ತಿರುಗಿದ ಮಾಂಸದ ಮರಗಳು, ನಾಯಿಗಳು, ಉರಿಯುತ್ತಿರುವ ಕಟ್ಟಿಗೆ ಮತ್ತು ಮನುಷ್ಯರನ್ನು ಒಟ್ಟುಗೂಡಿಸುವ ಬೆಂಕಿಯ ವಾಸನೆಗಳು ಬಡಿದವು.

ಅತಿಥಿಗಳು ಸುಮಾರು ಹನ್ನೆರಡು ಜನರಿದ್ದರು. ಎಲ್ಲರೂ ವಯಸ್ಕರೇ. ನನಗೆ ನಂತರ ತಿಳಿದಂತೆ ಅತ್ಯಂತ ಕಿರಿಯನಾಗಿದ್ದ ಅತಿಥಿಯ ವಯಸ್ಸು ಮೂವತ್ತಾಗಿತ್ತು. ಮುಂದೆ ಅವರಾಡುತ್ತಿದ್ದ ಮಾತುಗಳಿಂದ ತಿಳಿದದ್ದೆಂದರೆ ಅವರೆಲ್ಲರಿಗೂ ನನಗಿಂತ ಹೆಚ್ಚು ವಿಷಯಗಳು ತಿಳಿದಿತ್ತೆಂದು ಗೊತ್ತಾಯಿತು. ಅನೇಕ ವಿಷಯಗಳಲ್ಲಿ ನಾನು ಹಿಂದುಳಿದಿದ್ದೆ. ರೇಸು ಕುದುರೆಗಳು, ನಿಪುಣ ದರ್ಜಿಗಳು, ಮೋಟಾರು ಕಾರುಗಳು ಮತ್ತು ದುಬಾರಿ ವೇಶ್ಯೆಯರು, ಇವರೆಲ್ಲರ ಬಗ್ಗೆ ಅವರು ತಿಳಿದವರಾಗಿದ್ದರು. ಯಾರೂ ನನ್ನ ಸಂಕೋಚದ ಸ್ವಭಾವಕ್ಕೆ ಘಾಸಿ ಮಾಡಲಿಲ್ಲ. ಯಾರೂ ನನ್ನ ಬಗ್ಗೆ ಹೆಚ್ಚು ಗಮನವನ್ನು ನೀಡಲಿಲ್ಲ. ಕುರಿಯನ್ನು ಸರಿಯಾಗಿ ಚರ್ಮ ಸುಲಿದು ಬೇಯಿಸಲು ನಿಗದಿ ಮಾಡಿದ್ದ ಆಳು ಅದನ್ನು ನಿಧಾನವಾಗಿ ಮತ್ತು ಕುಶಲತೆಯಿಂದ ಸಿದ್ಧಪಡಿಸುತ್ತಿದ್ದದ್ದು ನಮ್ಮನ್ನು ಊಟದ ಕೋಣೆಯಲ್ಲಿ ಕಾಯುವಂತೆ ಮಾಡಿತ್ತು. ಖರ್ಜೂರದ ಮದ್ಯ ಸೇವನೆ ಅವ್ಯಾಹತವಾಗಿ ನಡೆದಿತ್ತು. ಅಲ್ಲೊಂದು ಗಿಟಾರ್ ಇತ್ತು. ನನ್ನ ಸೋದರ ಸಂಬಂಧಿ ಪಕ್ಕದ ರಾಷ್ಟ್ರ ಉರುಗ್ವೇಯ ಸಾಹಸಿಯೊಬ್ಬನನ್ನು ಕುರಿತು ಏಲಿಯಾಸ್ ರೇಗ್ಯುಲೇಸ್ ಹಾಡಿದ್ದ ಲಾವಣಿಗಳನ್ನು ಹಾಡಿದ. ಹಾಗೆಯೇ ಜುನೀನ್ ಬೀದಿಯ ವೇಶ್ಯಾಗೃಹವೊಂದರಲ್ಲಿ ಲುನ್ ಫಾರ್ಡೋನ ದಿನಗಳಲ್ಲಿ ನಡೆದ ಚಾಕುವಿನ ಕಾಳಗಕ್ಕೆ ಸಂಬಂಧಿಸಿದ ಪ್ರಾಂತ್ಯಭಾಷೆಯಲ್ಲಿ ರಚನೆಗೊಂಡ ಕೆಲವು ಪದ್ಯಗಳನ್ನು ಹಾಡಿದ್ದು ನೆನಪಿದೆ. ಕಾಫಿ ಮತ್ತು ಹವಾನಾ ಸಿಗಾರ್‌ಗಳನ್ನು ಊಟದ ಕೋಣೆಗೆ ತಂದರು. ಹಿಂದಕ್ಕೆ ಹೊರಡುವ ಚಿಂತೆ ಯಾರಿಗೂ ಇರಲಿಲ್ಲ. ಬಹಳ ಹೊತ್ತಾಯಿತು ಎಂಬ ಭಯ ಇದ್ದಕ್ಕಿದ್ದಂತೆ ನನ್ನಲ್ಲಿ ಮೂಡಿತು. ಗಡಿಯಾರದ ಕಡೆ ನೋಡಲು ಧೈರ್ಯ ಬರಲಿಲ್ಲ. ಈ ಬೆಳೆದವರ ನಡುವೆ ಹುಡುಗತನದ ಏಕಾಂಗಿತನವನ್ನು ಮರೆಮಾಚುವ ಸಲುವಾಗಿ ರುಚಿಸದಿದ್ದರೂ ಒಂದೆರಡು ಗ್ಲಾಸ್ ಮದ್ಯ ಸೇವಿಸಿದೆ. ಯೂರಿಯೇಟ್ ಇದ್ದಕ್ಕಿದ್ದಂತೆ ಇಬ್ಬರು ಆಡುವ ಪೋಕರ್ ಇಸ್ಪಿಟಾಟ ಆಡಲು ಡಂಕನ್‌ನನ್ನು ಆಹ್ವಾನಿಸಿದ. ಯಾರೋ ಒಬ್ಬ ಇಬ್ಬರಾಟವನ್ನು ಆಕ್ಷೇಪಿಸಿದ. ಇಬ್ಬರೇ ಆಡಿದರೆ ಕಳೆಗಟ್ಟುವುದಿಲ್ಲ ಎಂದು ನಾಲ್ವರು ಆಡಲು ಹೇಳಿದ. ಡಂಕನ್ ಒಪ್ಪಿದ. ಆದರೆ ಯೂರಿಯೇಟ್ ಮೊಂಡತನದಿಂದ ಇಬ್ಬರೇ ಆಡಲು ಒತ್ತಾಯಿಸಿದ. ಆ ಮೊಂಡುತನ ನನಗೆ ಅಂದು ಅರ್ಥವಾಗಲಿಲ್ಲ. ಮತ್ತೆಂದೂ ನಾನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಿಲ್ಲ. ಕಾಲ ಕಳೆಯುವ ಉದ್ದೇಶದಿಂದ ಒಬ್ಬರೇ ಆಡುವ ಟ್ರುಕೊ ಇಸ್ಪೀಟಾಟ ಬಿಟ್ಟರೆ, ನನಗೆ ಬೇರಾವ ಬಗೆಯ ಇಸ್ಪೀಟ್ ಆಟ ರುಚಿಸುತ್ತಿರಲಿಲ್ಲ. ಯಾರ ಗಮನಕ್ಕೂ ಬಾರದಂತೆ ನಾನು ಹೊರನಡೆದೆ. ಊಟದ ಕೋಣೆಯಲ್ಲಿ ಮಾತ್ರ ಬೆಳಕಿತ್ತು. ಶಬ್ದ ತುಂಬಿದ, ಅಪರಿಚಿತವಾದ ಮತ್ತು ಹಳೆಯ ಕತ್ತಲ ಮನೆ. ಪ್ರವಾಸಿಯೊಬ್ಬನಿಗೆ ಹೊಸ ದೇಶ ದಿಕ್ಕುಗೆಡಿಸುವುದಕ್ಕಿಂತ ಇಂಥ ಮನೆ ಬಾಲಕನೊಬ್ಬನನ್ನು ಹೆಚ್ಚು ದಿಗಿಲು ಬೀಳಿಸುತ್ತದೆ. ಒಂದೊಂದೇ

ಹೆಜ್ಜೆ ಇಡುತ್ತಾ ಕೋಣೆಗಳನ್ನು ಅನ್ವೇಷಿಸುತ್ತಾ ಹೋದೆ. ಅಲ್ಲೊಂದು ಬಿಲಿಯರ್ಡ್ಸ್‌ನ ಕೋಣೆಯಿತ್ತು. ಆಯತಾಕಾರ ಮತ್ತು ವಜ್ರಾಕಾರದ ಗಾಜಿನ ಕಟ್ಟುಗಳ ಕಲಾಕೃತಿಗಳ ಗ್ಯಾಲರಿಯೊಂದಿತ್ತು. ಒಂದೆರಡು ತೂಗು ಕುರ್ಚಿಗಳು, ಮತ್ತೊಂದು ಕಿಟಕಿ. ಬೇಸಿಗೆಯ ಮನೆ (Summer home) ಯೆಂಬುದನ್ನು ಈ ವಸ್ತು ಸ್ವರೂಪಗಳೇ ಬಿಂಬಿಸುತ್ತಿದ್ದವು. ಆ ಕತ್ತಲಲ್ಲಿ ನಾನು ದಾರಿ ತಪ್ಪಿದೆ. ಮನೆಯ ಮಾಲೀಕ ಅವನ ಹೆಸರನ್ನು ಇಷ್ಟು ವರ್ಷಗಳ ನಂತರ ಜ್ಞಾಪಿಸಿಕೊಳ್ಳುತ್ತಿದ್ದೇನೆ. ಅಸೆವಡೇ ಅಥವಾ ಅಸೆಬೆಲ್ ಇರಬೇಕು-ಕೊನೆಗೆ ದಾರಿಗೆ ಅಡ್ಡ ಸಿಕ್ಕಿದ. ನನ್ನ ಮೇಲಿನ ಕರುಣೆಯಿಂದಲೋ ಅಥವಾ ತಾನು ಸಂಗ್ರಹಿಸಿದ ವಸ್ತುಗಳನ್ನು ತೋರಿಸುವ ಹೆಮ್ಮೆಯಿಂದಲೋ ಆತ ನನ್ನನ್ನು ಹಳೆಯ ವಸ್ತುಗಳನ್ನು ಪ್ರದರ್ಶನಕ್ಕಿಟ್ಟಿದ್ದ ಕ್ಯಾಬಿನೆಟ್ ಹತ್ತಿರ ಕರೆದೊಯ್ದ. ದೀಪವನ್ನು ಹೊತ್ತಿಸಿದ ನಂತರ ಆ ಕ್ಯಾಬಿನೆಟ್ ತುಂಬ ನಾನು ಉಕ್ಕಿನ ಮಿಂಚನ್ನು ಕಂಡೆ. ಒಂದಾನೊಂದು ಕಾಲದಲ್ಲಿ ಕಾದಾಡುವವರ ಕೈಯಲ್ಲಿ ಮೆರೆದಿದ್ದ ಚಾಕುಗಳ ಸಂಗ್ರಹ ಅದು. ಉತ್ತರ ದಿಕ್ಕಿನಲ್ಲಿ ಪೆರ್ಗಾಮಿನೋ ನಗರದ ಸುತ್ತಲೂ ತನಗೊಂದಿಷ್ಟು ಭೂಮಿಯಿದ್ದು, ಆ ಪ್ರಾಂತ್ಯಕ್ಕೆ ಹೋಗಿ ಬರುವಾಗ ಮಾಡಿದ ಚಾಕುಗಳ ಸಂಗ್ರಹ ಇದೆಂದು ಆತ ಹೇಳಿದ. ಆತ ಕ್ಯಾಬಿನೆಟ್ ತೆರೆದ. ಆಯುಧಗಳಿಗೆ ಅಂಟಿಸಿದ ಲೇಬಲ್ ನೋಡದೆಯೇ ಪ್ರತಿಯೊಂದು ಚಾಕುವಿನ ಮಾಹಿತಿಯನ್ನು ನೀಡತೊಡಗಿದ. ಅವುಗಳ ಮಾಹಿತಿಯೆಲ್ಲವೂ ದಿನಾಂಕ ಮತ್ತು ಪ್ರಾಂತ್ಯದ ಹೆಸರು ಬಿಟ್ಟರೆ ಒಂದೇ ಬಗೆಯದಾಗಿತ್ತು. ಈ ಆಯುಧಗಳಲ್ಲಿ ಜುವಾನ್ ಮೊರೀರಾನ ಕಠಾರಿ ಇದೆಯೇ ಎಂದು ಕೇಳಿದೆ. ಜುವಾನ್ ಮೊರೀರಾ ತನ್ನ ಕಾಲದಲ್ಲಿ ಕಾದಾಡುವ ಸಾಹಸಿಗಳ ಮಾದರಿಯಂತಿದ್ದ. ಮಾಲೀಕ ಅವನ ಕಠಾರಿಯಿಲ್ಲವೆಂದು ಹೇಳಿದ. ಆದರೆ ಅವನು ಬಳಸಿದ ಕಠಾರಿಯನ್ನೆ ಹೋಲುವ, ಹಿಡಿಯಲ್ಲಿ ಅರ್ಧ ಚಂದ್ರಾಕೃತಿಯ ಅಡ್ಡಪಟ್ಟಿಗಳಿರುವ ಕಠಾರಿಯನ್ನು ತೋರಿಸುವುದಾಗಿ ಹೇಳಿದ. ಆ ವೇಳೆಗೆ ಕೋಪೋದ್ರಿಕ್ತ ಮಾತುಗಳ ಶಬ್ದ ಅವನನ್ನು ತಡೆಯಿತು. ಕ್ಯಾಬಿನೆಟ್ ಅನ್ನು ತಕ್ಷಣವೇ ಮುಚ್ಚಿ ಹೊರಡಲು ಅನುವಾದ. ನಾನು ಆತನನ್ನು ಹಿಂಬಾಲಿಸಿದೆ.

ಮೋಸ ಮಾಡುತ್ತಿದ್ದಾನೆಂದು ಆರೋಪಿಸುತ್ತಾ ಯೂರಿಯೇಟ್ ತನ್ನ ಎದುರಾಳಿಯ ವಿರುದ್ಧ ಅಲ್ಲಿ ಕೆಂಡ ಕಾರುತ್ತಿದ್ದ. ಉಳಿದವರೆಲ್ಲರೂ ಇಬ್ಬರು ಆಟಗಾರರ ಸುತ್ತಲೂ ನಿಂತಿದ್ದರು. ಅಲ್ಲಿದ್ದ ಎಲ್ಲರಿಗಿಂತಲೂ ಡಂಕನ್ ಎತ್ತರದ ಆಳಾಗಿದ್ದ. ಭುಜ ದುಂಡಾಕಾರದವಾಗಿದ್ದರೂ ಒಳ್ಳೆಯ ಅಂಗಸೌಷ್ಠವವಿತ್ತು. ಅವನ ಮುಖ ನಿರ್ಭಾವುಕವಾಗಿತ್ತು. ಅವನ ಕೂದಲು ಬಿಳಿ ಬಣ್ಣಕ್ಕೆ ಹತ್ತಿರವಾಗಿತ್ತು. ಮಾನೆಕೊ ಯೂರಿಯೇಟ್‌ನ ಸಿಡುಕು ಸ್ವಭಾವ ಎದ್ದು ಕಾಣುತ್ತಿತ್ತು. ರೆಡ್ ಇಂಡಿಯನ್ ಮೂಲದಿಂದಾಗಿ ಕಪ್ಪಾಗಿದ್ದ. ತೆಳ್ಳನೆಯ ಮೀಸೆ ಬಿಟ್ಟಿದ್ದ. ಎಲ್ಲರೂ ಕುಡಿದಿದ್ದಾರೆ ಎನ್ನುವುದು ಸ್ಪಷ್ಟವಾಗಿತ್ತು. ನೆಲದ ಮೇಲೆ ಖಾಲಿ ಮಾಡಿದ ಎರಡು-ಮೂರು ಶೀಷೆಗಳಿದ್ದವು. ಅನೇಕ ಚಲನಚಿತ್ರಗಳನ್ನು ನೋಡಿದ ಪ್ರಭಾವವೋ ಏನೋ ನನಗೆ ಅಂದು ಕಂಡಿದ್ದು ಈಗ ನೀಡುತ್ತಿರುವ ಚಿತ್ರವನ್ನು ನೆನಪಿಗೆ ತರುತ್ತಿದೆ. ಯೂರಿಯೇಟ್‌ನ ಬೈಗುಳಗಳು ಸುರಿಯುವುದು ಕಡಿಮೆಯಾಗಲಿಲ್ಲ. ಆರಂಭದಲ್ಲಿ ಕೂರಂಬಿನಂತಿದ್ದವು. ಬರುಬರುತ್ತಾ ಅಶ್ಲೀಲವಾಗತೊಡಗಿದವು. ಅದನ್ನು ಕೇಳಿಸಿಕೊಳ್ಳದವನಂತೆ ಡಂಕನ್ ಕುಳಿತಿದ್ದ. ಕೊನೆಗೆ ಆಯಾಸದಿಂದ ಮುಷ್ಟಿಯನ್ನು ಯೂರಿಯೇಟ್ ಕಡೆ ಗುದ್ದಿದ. ನೆಲಕ್ಕೆ ಬಿದ್ದ ಯೂರಿಯೇಟ್ ಈ ದೌರ್ಜನ್ಯವನ್ನು ಸಹಿಸುವುದಿಲ್ಲವೆಂದು ಹೇಳುತ್ತಾ ಡಂಕನ್‌ಗೆ ಕಾದಾಟಕ್ಕೆ ಆಹ್ವಾನ ನೀಡಿದ.

ಡಂಕನ್ ಆಗುವುದಿಲ್ಲವೆಂದ. "ನಿನ್ನನ್ನು ಕಂಡರೆ ನನಗೆ ಭಯ" ಎಂದು ಕಿರಿಚಾಯಿಸಿದ. ಎಲ್ಲರೂ ಗಹಗಹಿಸಿ ನಕ್ಕರು.

ಯೂರಿಯೇಟ್ ಎದ್ದು ನಿಲ್ಲುತ್ತಾ "ನಿನ್ನೊಡನೆ ಕಾದಾಡಲೇಬೇಕು, ಈ ಕ್ಷಣ" ಎಂದ. ಯಾರೋ ಒಬ್ಬ (ಅವನನ್ನು ಕ್ಷಮಿಸಿಬಿಡಿ) ಆಯುಧಗಳಿಗೇನೂ ಕೊರತೆಯಿಲ್ಲ ಎಂದು ಸಲಹೆ ನೀಡಿದ.

ಯಾರು ಹೋಗಿ ಕ್ಯಾಬಿನೆಟ್ ಬಾಗಿಲು ತೆರೆದರೋ ನನಗೆ ಗೊತ್ತಿಲ್ಲ. ಮಾನೆಕೊ ಯೂರಿಯೇಟ್ ಅಲ್ಲಿದ್ದ ಉದ್ದನೆಯ, ಸುಂದರವಾದ ಮತ್ತು ಅರ್ಧಚಂದ್ರಾಕೃತಿಯ ಅಡ್ಡಪಟ್ಟಿಯುಳ್ಳ ಕಠಾರಿಯನ್ನೇ ಆರಿಸಿಕೊಂಡ. ಡಂಕನ್ ಅನ್ಯಮನಸ್ಕನಾಗಿ ಮರದ ಹಿಡಿಯಿದ್ದ, ಅಲುಗಿನ ಮೇಲೆ ಸಣ್ಣ ವೃಕ್ಷದ ಮುದ್ರೆಯಿದ್ದ ಚಾಕುವನ್ನು ಆರಿಸಿಕೊಂಡ. ಮಾನೆಕೊ ರಕ್ಷಣಾತ್ಮಕವಾಗಿ ಕಾದಾಡಲು ಉದ್ದದ ಖಡ್ಗ ಆರಿಸಿಕೊಂಡಿದ್ದಾನೆಂದು ಯಾರೋ ಉದ್ಗರಿಸಿದರು. ಆತನ ಕೈ ನಡುಗುತ್ತಿದ್ದದ್ದು ಯಾರಲ್ಲೂ ಅಚ್ಚರಿ ಮೂಡಿಸಲಿಲ್ಲ. ಆದರೆ ಅದೇ ರೀತಿ ಡಂಕನ್ ಕೈ ಸಹ ನಡುಗುತ್ತಿದ್ದದ್ದು ಅಚ್ಚರಿ ತರಿಸಿತ್ತು.

ಕಾದಾಡುವ ಸಮರ ವೀರರು ಅತಿಥಿಯಾಗಿರುವ ಮನೆಗೆ ಗೌರವ ತೋರಿಸಬೇಕು. ಆದ್ದರಿಂದ ಮನೆಯಿಂದ ಹೊರಗೆ ಕಾದಾಡಬೇಕೆಂಬುದು ಸಂಪ್ರದಾಯ. ನಾವೆಲ್ಲ ಅರ್ಧ ವಿನೋದ, ಅರ್ಧ ಗಾಂಭೀರ್ಯದಿಂದ ಹೊರಗಿನ ಚಳಿಯ ಕತ್ತಲನ್ನು ಹೊಕ್ಕೆವು. ನಾನು ಕುಡಿದು ಚಿತ್ತಾಗಿರಲಿಲ್ಲ. ಆದರೆ ಸಾಹಸದ ಮನೋಭಾವನೆಯಿಂದ ಉನ್ಮಾದದಲ್ಲಿ ತೇಲುತ್ತಿದ್ದೆ. ಯಾರಾದರೊಬ್ಬರು ಸಾಯಲಿ ಎಂಬ ಉತ್ಕಟ ಬಯಕೆ ಮೂಡಿಬಂತು. ಹಾಗಾದಾಗ ನಾನು ಆ ಘಟನೆ ಬಗ್ಗೆ ಮುಂದೆ ಎಲ್ಲರಿಗೂ ಹೇಳಬಹುದು ಮತ್ತು ಸದಾ ನೆನಪಿನಲ್ಲಿಟ್ಟುಕೊಳ್ಳಬಹುದಾಗಿತ್ತು. ಆ ಕ್ಷಣದಲ್ಲಿ ಉಳಿದವರು ವಯಸ್ಸಿನಲ್ಲಿ ನನಗಿಂತ ದೊಡ್ಡವರೇನಲ್ಲ ಎನಿಸಿತು. ಅದೇ ವೇಳೆ ಯಾವುದೋ ತೀವ್ರವಾದ ಸೆಳೆತವೊಂದು ನಮ್ಮನ್ನೆಲ್ಲ ಎಳೆದೊಯ್ಯುತ್ತಿದ್ದು ಅದು ತನ್ನಲ್ಲೇ ಮುಳುಗುಸಿಕೊಳ್ಳುತ್ತದೆ ಎಂಬ ಭಾವನೆ ಸುತ್ತುವರಿಯಿತು. ಮೊನೆಕೊ ಮಾಡಿದ ಆಪಾದನೆಯಲ್ಲಿ ಯಾರೂ ಎಳ್ಳಷ್ಟೂ ಸತ್ಯ ಕಂಡಿರಲಿಲ್ಲ. ಮದ್ಯದಿಂದ ಉಲ್ಬಣಗೊಂಡ ಹಳೆಯ ವೈರವೊಂದರ ಫಲಶ್ರುತಿ ಅದೆಂದು ಎಲ್ಲರೂ ಭಾವಿಸಿದ್ದರು.

ಬೇಸಿಗೆಯ ಮನೆಯನ್ನು ಹಿಂದಿಕ್ಕುತ್ತಾ, ಮರಗಳ ಬೊಡ್ಡೆಗಳನ್ನು ದಾಟುತ್ತಾ ನಾವೆಲ್ಲ ಹೊರನಡೆದವು. ಯೂರಿಯೇಟ್ ಮತ್ತು ಡಂಕನ್ ಪರಸ್ಪರ ಅರಿವಿಲ್ಲದವರಂತೆ ಮುಂದಿದ್ದರು. ಉಳಿದ ನಾವೆಲ್ಲರೂ ತೆರೆದ ಲಾನ್‌ನ ಅಂಚಿಗೆ ನಿಂತೆವು. ಚಂದ್ರನ ಬೆಳಕಿನಲ್ಲಿ ಡಂಕನ್ ಆ ಹುಲ್ಲು ಬಯಲಿನಲ್ಲಿ ನಿಂತು ಅಧಿಕಾರವಾಣಿಯಿಂದ "ಇದು ತಕ್ಕನಾದ ಸ್ಥಳ" ಎಂದು ಹೇಳಿದ.

ಏನು ಮಾಡಬೇಕೆಂಬ ಖಚಿತ ಅರಿವಿಲ್ಲದೆ ಆ ಇಬ್ಬರೂ ಮಧ್ಯದಲ್ಲಿ ನಿಂತರು. ಧ್ವನಿಯೊಂದು ಕೇಳಿಬಂತು "ಆಯುಧಗಳನ್ನು ಬಿಡಿ, ಮುಷ್ಟಿಯಲ್ಲೇ ಕಾದಾಡಿ".

ಆದರೆ ಆ ವೇಳೆಗೆ ಅವರಿಬ್ಬರೂ ಕಾದಾಡಲು ಆರಂಭಿಸಿದ್ದರು. ಅವರು ಎದುರಾಳಿಯನ್ನು ಗಾಯಗೊಳಿಸಿಬಿಡುತ್ತೇನೆಂಬ ಭಯದಿಂದೆಂಬಂತೆ ಅಡ್ಡಾದಿಡ್ಡಿ ಗುದ್ದಾಡುತ್ತಿದ್ದರು. ಆರಂಭದಲ್ಲಿ ಆಯುಧಗಳ ಅಲುಗಿನ ಚಲನೆಯನ್ನು ಗಮನಿಸುತ್ತಿದ್ದರು. ಅನಂತರ ಅವರ ಕಣ್ಣುಗಳು ಪರಸ್ಪರ ಕೀಲೈಸಿದವು. ಯೂರಿಯೇಟ್ ತನ್ನ ಸಿಟ್ಟನ್ನು ಕೊಡವಿಕೊಂಡಿದ್ದ. ಡಂಕನ್ ತನ್ನ ನಿರಾಸಕ್ತಿಯನ್ನು

ಬಿಟ್ಟಿದ್ದ. ಒಂದು ವಿಧದಲ್ಲಿ ಅಪಾಯ ಎನ್ನುವುದು ಅವರ ದೇಹ ಮನಸ್ಸನ್ನು ಹೊಕ್ಕು ಅವರ ರೂಪವನ್ನು ಮಾರ್ಪಡಿಸಿತ್ತು. ಅವರಿಬ್ಬರೂ ಹುಡುಗರಾಗಿರಲಿಲ್ಲ. ಕಾದಾಡುತ್ತಿದ್ದ ಯೋಧರಾಗಿದ್ದರು. ಆ ಕಾದಾಟ ಉಕ್ಕಿನ ಅಲಗುಗಳ ಅಡ್ಡಾದಿಡ್ಡಿ ಬಡಿದಾಟದಂತ್ತಿತ್ತು. ಆ ಕಾದಾಟವು ಚದುರಂಗದಾಟವೇನೋ ಎಂಬಂತೆ ಅದರ ಪ್ರತಿಯೊಂದು ಚಲನೆಯನ್ನು ಗಮನಿಸುತ್ತಿದ್ದೆ. ಬಹಳ ವರ್ಷಗಳ ನಂತರ ಈ ಘಟನೆಯನ್ನು ನೆನಪಿಸಿಕೊಳ್ಳುತ್ತಿದ್ದೇನೆ. ಆ ಸರಿದ ಕಾಲ ಬಹುಶಃ ನಾನು ಕಂಡ ದೃಶ್ಯವನ್ನು ಉತ್ಪ್ರೇಕ್ಷೆ ಮಾಡಿರಬಹುದು ಅಥವಾ ಮಸುಕುಗೊಳಿಸಿರಬಹುದು. ಈ ಕಾದಾಟ ಎಷ್ಟು ಹೊತ್ತು ನಡೆಯಿತೋ ನನಗೆ ಗೊತ್ತಾಗಲಿಲ್ಲ. ಕಾಲದ ಸಾಮಾನ್ಯ ಅಳತೆಯ ಕಕ್ಷೆಯ ಹೊರಗೆ ಕೆಲವು ಘಟನೆಗಳು ನಡೆಯುವುದು ಸುಳ್ಳಲ್ಲ.

ರಕ್ಷಣೆಗೆ ಗುರಾಣಿಯಿರಲಿಲ್ಲ. ಚಾಕು, ಕಠಾರಿಯ ಬೀಸನ್ನು ತಡೆಯಲು ಅವರು ಮುಂದೋಳನ್ನೇ ಅಡ್ಡ ಹಿಡಿಯುತ್ತಿದ್ದರು. ಅವರ ತೋಳನ್ನು ಮುಚ್ಚಿದ್ದ ಬಟ್ಟೆ ಬಹುಬೇಗನೆ ಹರಿದು ಚಿಂದಿಯಾಗಿ ನೇತಾಡತೊಡಗಿತು. ರಕ್ತದಿಂದ ತೋಯ್ದ ಆ ಚಿಂದಿಗಳು ಕರ್ರಗಾಗತೊಡಗಿದವು. ಈ ರೀತಿಯ ಕತ್ತಿವರಸೆಯಲ್ಲಿ ಅವರಿಗೆ ಪರಿಶ್ರಮವಿಲ್ಲವೆಂದು ನಾವು ಆರಂಭದಲ್ಲಿ ಭಾವಿಸಿದ್ದು ತಪ್ಪೆನಿಸಿತು. ಅವರಿಬ್ಬರೂ ಆರಂಭದಿಂದ ಕಾದಾಟವನ್ನು ಚನ್ನಾಗಿಯೇ ನಿರ್ವಹಿಸಿದ್ದರು. ಗಿಡ್ಡನೆಯ ಚಾಕು ಹಿಡಿದಿದ್ದ ಡಂಕನ್ ತನ್ನ ಆಯುಧದ ಅನಾನುಕೂಲತೆಯನ್ನು ಪರಿಹರಿಸಿಕೊಳ್ಳಲು ಎದುರಾಳಿಗೆ ನಿಕಟವಾಗಿರಲು ಪ್ರಯತ್ನಿಸುತ್ತಿದ್ದ. ಎದುರಾಳಿಗೆ ಬೀಸಿ ಹೊಡೆಯಲು ಉದ್ದದ ಕಠಾರಿ ಹಿಡಿದಿದ್ದ ಯೂರಿಯೇಟ್ ಹಿಂದಕ್ಕೆ ಹೆಜ್ಜೆಯಿಡುತ್ತಿದ್ದ.

ಆಯುಧಗಳ ಕ್ಯಾಬಿನೆಟ್ ಬಗ್ಗೆ ಗಮನಸೆಳೆದಿದ್ದ ಧ್ವನಿಯೇ ಮತ್ತೆ ಉದ್ಗರಿಸಿತು. "ಅವರಿಬ್ಬರು ಪರಸ್ಪರ ಕೊಂದುಬಿಡುತ್ತಾರೆ! ನಿಲ್ಲಿಸಿ".

ಆದರೆ ಅವರಿಬ್ಬರನ್ನು ಬಿಡಿಸಲು ಯಾರೊಬ್ಬರೂ ಧೈರ್ಯ ತಾಳಲಿಲ್ಲ. ಯೂರಿಯೇಟ್ ತೊಡರಿಸಿಬಿದ್ದ. ಡಂಕನ್ ಅವನ ಮೇಲೆ ಏರಿಹೋದ. ಯೂರಿಯೇಟ್‌ನ ಆಯುಧ ಡಂಕನ್‌ನ ಮುಖದೆಡೆಗೆ ಚಲಿಸಿತು. ಇದ್ದಕ್ಕಿದ್ದಂತೆ ಅದರ ಅಲಗು ಚಿಕ್ಕದಾಗುತ್ತಿರುವಂತೆ ಕಂಡಿತು. ಅದು ಎತ್ತರದ ಡಂಕನ್‌ನ ಎದೆಯನ್ನು ಸೀಳಿ ಹೊಕ್ಕಿತ್ತು. ಡಂಕನ್ ಹುಲ್ಲಿನ ಮೇಲೆ ಅಂಗಾತನಾದ. ಆ ಕ್ಷಣದಲ್ಲಿ ಸಣ್ಣ ದನಿಯಲ್ಲಿ ಆತ ಹೇಳಿದ್ದು - "ಎಂಥ ವಿಚಿತ್ರ. ಎಲ್ಲವೂ ಕನಸಿನಂತಿದೆ".

ಆತ ತನ್ನ ಕಣ್ಣುಗಳನ್ನು ಮುಚ್ಚಲಿಲ್ಲ. ಅಲುಗಾಡಲೂ ಇಲ್ಲ. ನಾನು ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ಕೊಲ್ಲುವುದನ್ನು ಕಂಡೆ.

ಮೊನೆಕೊ ಯೂರಿಯೇಟ್ ಶವದ ಕಡೆ ಬಾಗಿ ಜೋರಾಗಿ ಅಳುತ್ತಾ ತನ್ನನ್ನು ಕ್ಷಮಿಸುವಂತೆ ಬೇಡಿಕೊಂಡ. ಈಗಿನ ವರ್ತನೆ ಆತನ ನಡವಳಿಕೆಗೆ ಮೀರಿದ್ದಾಗಿತ್ತು. ಒಂದು ಅಪರಾಧವನ್ನು ಎಸಗಿದ್ದಕ್ಕೆ ಅವನಿಗೆ ಹೆಚ್ಚು ವಿಷಾದವಾಗಿರಲಿಲ್ಲ. ಒಂದು ಅರ್ಥಹೀನ ಕೃತ್ಯವನ್ನು ಜಾರಿಗೊಳಿಸಿದ್ದು ಆತನನ್ನು ಹೆಚ್ಚು ಘಾಸಿಗೊಳಿಸಿತ್ತೆಂದು ಈಗ ನನಗನಿಸುತ್ತಿದೆ.

ನನಗೆ ಮತ್ತೆ ನೋಡಬೇಕೆನಿಸಲಿಲ್ಲ. ನನ್ನ ತೀವ್ರವಾದ ಭಯಕ್ಕೆ ಸಾಕಾರಾವಾಗಿತ್ತು. ಅದು

ನನ್ನನ್ನು ದಿಗ್ಭ್ರಮೆಗೊಳಿಸಿತ್ತು. ಡಂಕನ್‌ನ ಎದೆಯಿಂದ ಕಠಾರಿಯನ್ನು ಹೊರಗೆಳೆಯಲು ಸಾಕಷ್ಟು ಕಷ್ಟಪಡಬೇಕಾಯಿತೆಂದು ಎಷ್ಟೋ ದಿನಗಳ ನಂತರ ಲಾಫಿನರ್ ನನಗೆ ಹೇಳಿದ.

ಅಲ್ಲೇ ಒಂದು ತಾತ್ಕಾಲಿಕ ಸಮಿತಿ ರೂಪುಗೊಂಡಿತು. ಸಮಿತಿಯ ಸದಸ್ಯರು ಹೆಚ್ಚು ಸುಳ್ಳು ಹೇಳಬಾರದೆಂದು ನಿರ್ಧರಿಸಿದರು. ಚಾಕು-ಕಠಾರಿಯ ದ್ವಂದ್ವಯುದ್ಧವನ್ನು ಕತ್ತಿ ಕಾಳಗದ ದರ್ಜೆಗೇರಿಸಲು ತೀರ್ಮಾನಿಸಿದರು. ನಾಲ್ವರು ಈ ನಿರ್ಣಯವನ್ನು ಅನುಮೋದಿಸಲು ಮುಂದೆ ಬಂದರು. ಅಸೆವೆಲ್ ಅವರಲ್ಲೊಬ್ಬ. ಬ್ಯೂನಸ್ ಐರಿಸ್‌ನಲ್ಲಿ ಏನನ್ನು ಬೇಕಾದರು ದೃಢಪಡಿಸಬಹುದು. ಅಂಥದಕ್ಕೆಲ್ಲ ಯಾರಾದರೊಬ್ಬ ಗೆಳೆಯ ನೆರವಿಗೆ ಬರುತ್ತಿದ್ದ.

ಅತಿಥಿಗಳು ಆಟವಾಡುತ್ತಿದ್ದ ಮಹಾಗನಿ ಮರದ ಮೇಜಿನ ಮೇಲೆ ಒಂದು ಕಟ್ಟು ಇಂಗ್ಲೀಷ್ ಕಾರ್ಡು ಮತ್ತು ನೋಟಿನ ರಾಶಿ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಅದನ್ನು ನೋಡುವ ಅಥವಾ ಮುಟ್ಟುವ ಧೈರ್ಯ ಯಾರಿಗೂ ಬರಲಿಲ್ಲ.

ಆ ನಂತರದ ವರ್ಷಗಳಲ್ಲಿ, ಈ ಘಟನೆಯ ವಿವರವನ್ನು ಕೆಲವು ಗೆಳೆಯರಿಗೆ ಹೇಳಬೇಕೆಂದುಕೊಂಡೆ, ಆದರೆ ಒಂದು ರಹಸ್ಯವನ್ನು ಬಹಿರಂಗಗೊಳಿಸುವುದಕ್ಕಿಂತ ಅದರ ಸಂರಕ್ಷಣೆಯಲ್ಲೇ ಹೆಚ್ಚಿನ ಸಂತೋಷವಿರುತ್ತದೆಂದು ನನಗೆ ಯಾವತ್ತೂ ಅನ್ನಿಸುತ್ತಿತ್ತು. ಆದರೆ ೧೯೨೯ರಲ್ಲಿ ಒಂದು ಆಕಸ್ಮಿಕ ಮಾತುಕತೆಯಲ್ಲಿ ಈ ಘಟನೆಯ ಬಗೆಗಿನ ನನ್ನ ಸುದೀರ್ಘ ಮೌನಕ್ಕೆ ಇದ್ದಕ್ಕಿದ್ದಂತೆ ಗುಂಡಿಕ್ಕಬೇಕಾಯಿತು. ನಿವೃತ್ತ ಪೊಲೀಸ್ ಕ್ಯಾಪ್ಟನ್ ಡಾನ್ ಜೋಸ್ ಒಲೆವ್ ಅವರು ನದಿಯಾಚೆಗಿನ ರೆಟಿರೋ ಪ್ರಾಂತ್ಯದ ಜನರು ಚಾಕುಗಳನ್ನು ಕೈಯಲ್ಲಿ ಹಿಡಿದು ನೈಪುಣ್ಯದಿಂದ ಕಾದಾಡುತ್ತಿದ್ದ ಸಾಹಸಗಳನ್ನು ಮೆಲುಕು ಹಾಕುತ್ತಿದ್ದರು. ಒಬ್ಬನನ್ನು ಕೊಲ್ಲಬೇಕೆಂದು ಬಯಸಿದರೆ, ಈ ಆಟದ ನಿಯಮಗಳಿಗೆ ಯಾವುದೇ ಬೆಲೆಯಿರುತ್ತಿರಲಿಲ್ಲ. ಈಗ ನೀನು ವೇದಿಕೆಯ ಮೇಲೆ ನೋಡಿದ ಕಠಾರಿ ಕಾಳಗ ಪ್ರದರ್ಶನದ ರೂಪಕ್ಕೆ ಬಂದ ನಂತರ ಚಾಕುವಿನ ಕಾದಾಟಗಳು ಕಡಿಮೆಯಾಗಿವೆ ಅಥವಾ ಇಲ್ಲವೆಂದೇ ಹೇಳಬಹುದೆಂದು ಆತ ಹೇಳಿದ. ನಾನು ಅಂಥ ಕಾಳಗವೊಂದನ್ನು ನೋಡಿದ್ದೇನೆಂದು ಹೇಳಿ ಇಪ್ಪತ್ತು ವರ್ಷಗಳ ಹಿಂದೆ ನಡೆದ ಆ ಘಟನೆಯ ವಿವರವನ್ನು ತೆರೆದಿಟ್ಟೆ. ಆತ ಗಂಭೀರವಾಗಿ ತೀವ್ರ ನಿಗಪಿಟ್ಟು ಆಲಿಸಿದ "ಯೂರಿಯೇಟ್ ಮತ್ತು ಏನು ಆ ಇನ್ನೊಬ್ಬನ ಹೆಸರು....ಇಬ್ಬರೂ ಆ ಹಿಂದೆ ಕಠಾರಿ ಹಿಡಿದಿರಲಿಲ್ಲ ಎಂದು ನಿನಗೆ ಖಾತ್ರಿಯಿದೆಯೇ ? ಬಹುಶಃ ಅವರು ತಮ್ಮ ತಂದೆಯ ದನಗಾವಲಿನಲ್ಲಿ ಈ ಕತ್ತಿ ಕಾಳಗದ ಒಂದೆರಡು ವರಸೆ ಕಲಿತಿರಬಹುದು" ಎಂದು ಹೇಳಿದ.

"ನನಗೇನೂ ಹಾಗನ್ನಿಸುವುದಿಲ್ಲ. ಆ ರಾತ್ರಿ ಅಲ್ಲಿದ್ದ ಪ್ರತಿಯೊಬ್ಬರೂ ಪರಸ್ಪರ ಚೆನ್ನಾಗಿ ಬಲ್ಲವರಾಗಿದ್ದರು. ಆದರೆ ಆ ಇಬ್ಬರೂ ಕಾದಾಡಿದ ವಿಧಾನ ಅವರೆಲ್ಲರನ್ನೂ ಬೆರಗುಗೊಳಿಸಿತು" ಎಂದು ಉತ್ತರಿಸಿದೆ.

ದೀರ್ಘವಾಗಿ ಆಲೋಚನೆ ಮಾಡುತ್ತಿರುವವನ ರೀತಿಯಲ್ಲಿ ಒಲೆವ್ ತನ್ನದೇ ಆದ ಪ್ರಶಾಂತ ರೀತಿಯಲ್ಲಿ ಮುಂದುವರೆಸಿದ "ಒಂದು ಆಯುಧದ ಹಿಡಿಯಲ್ಲಿ ಅರ್ಧ ಚಂದ್ರಾಕೃತಿಯ ಅಚ್ಚುಪಟ್ಟಿಯಿತ್ತಲ್ಲವೆ! ಆ ರೀತಿಯ ಎರಡು ಪ್ರಸಿದ್ಧ ಕಠಾರಿಗಳಿದ್ದವು. ಒಂದು ಮೊರೀರಾಗೆ ಸೇರಿದ್ದು, ಮತ್ತೊಂದು ಜುವಾನ್ ಅಲ್ಮಾಡನದು. ಅಲ್ಮಾಡ ಟಪಲೆಕೆನ್‌ನ ದಕ್ಷಿಣ ಪ್ರಾಂತ್ಯದವನು"

ಏನೋ ಒಂದು ಭಾವ ನನ್ನ ನೆನಪಿನಲ್ಲಿ ಜೀವ ಪಡೆಯುತ್ತಿರುವಂತೆ ಭಾಸವಾಯಿತು. ಒಲೆವ್ ಮುಂದುವರಿಸಿದ "ನೀನು ಮರದ ಹಿಡಿಯ ಚಾಕುವಿನ ಬಗ್ಗೆ, ಅದೇ ಸಣ್ಣ ಮರದ ಮುದ್ರೆಯಿದ್ದ ಹಿಡಿಯ ಚಾಕುವಿನ ಬಗ್ಗೆ ಹೇಳಿದೆ. ಅಂಥವು ಸಾವಿರಾರು ಇವೆ. ಆದರೆ ಒಂದು ಮಾತ್ರ-"

ಒಂದು ಕ್ಷಣ ಮಾತು ನಿಲ್ಲಿಸಿ ಮತ್ತೆ ಮುಂದುವರೆಸಿದ "ಸೆನರ್ ಅಸಿವೆಡೊಗೆ ಪೆರ್ಗಾಮಿನೋ ಸುತ್ತು ದೊಡ್ಡ ಆಸ್ತಿಯಿದೆ. ಅಲ್ಲಿ ಇಂಥದೆ ಒಬ್ಬ ಒರಟು ಸಾಹಸಿ ಇದ್ದ. ಅವನ ಹೆಸರು ಜುವಾನ್ ಆಲ್ಮಂಜಾ ಅಂತ. ಘಟನೆ ನಡೆದದ್ದು ಶತಮಾನ ಆರಂಭವಾಗುವ ಮುನ್ನ. ತನ್ನ ಹದಿನಾಲ್ಕನೇ ವಯಸ್ಸಿನಲ್ಲಿ ಅವನು ಈ ಚಾಕುಗಳಲ್ಲಿ ಒಂದನ್ನು ಆರಿಸಿ ಅದರಿಂದ ಒಬ್ಬನನ್ನು ಕೊಂದ. ಅದು ತನ್ನ ಅದೃಷ್ಟದ ನಿಶಾನೆಯೆಂದು ತಿಳಿದು ಅದನ್ನೇ ಖಾಯಂ ಆಗಿ ಇಟ್ಟುಕೊಂಡ. ಜುವಾನ್ ಅಲ್ಮಂಡಾ ಮತ್ತು ಜುವಾನ್ ಆಲ್ಮಂಜಾ ಇಬ್ಬರ ನಡುವೆ ಪೈಪೋಟಿಯಿತ್ತು. ಅವರಿಬ್ಬರೂ ಅನೇಕ ವರ್ಷ ಪರಸ್ಪರ ಹುಡುಕಾಡುತ್ತಿದ್ದರು. ಆದರೆ ಅವರಿಬ್ಬರೂ ಎಂದೂ ಮುಖಾಮುಖಿಯಾಗಿರಲಿಲ್ಲ. ಜುವಾನ್ ಅಲ್ಮಂಜಾ ಯಾವುದೇ ಒಂದು ಚುನಾವಣೆಯಲ್ಲಿ ನಡೆದ ಜಗಳದಲ್ಲಿ ಸಿಡಿದು ಬಂದ ಗುಂಡಿಗೆ ಬಲಿಯಾದ. ಇನ್ನೊಬ್ಬ ಲಾಸ್ ಫ್ಲಾರೆಸ್‌ನ ಆಸ್ಪತ್ರೆಯ ಹಾಸಿಗೆಯಲ್ಲಿ ಸಹಜವಾಗಿ ಕೊನೆಯುಸಿರೆಳದನೆಂದು ಕಾಣುತ್ತದೆ".

ಆನಂತರ ಮತ್ತೇನನ್ನು ಹೇಳಲಿಲ್ಲ. ನಾವಿಬ್ಬರೂ ನಮಗಿಷ್ಟದ ತೀರ್ಮಾನ ತೆಗೆದುಕೊಳ್ಳಲು ಅದರಿಂದ ಅನುವಾಯಿತು.

ಅಂದು ಅಲ್ಲಿದ್ದ ಒಂಬತ್ತು ಅಥವಾ ಹತ್ತು ಮಂದಿ-ಯಾರೊಬ್ಬರೂ ಈಗ ಬದುಕಿಲ್ಲ ಬಿಡಿ-ನನ್ನ ಕಣ್ಣಿಂದ ಕಂಡ ದೃಶ್ಯವನ್ನು, ಅಂದರೆ ಇದ್ದಕ್ಕಿದ್ದಂತೆ ಕಠಾರಿಯ ತಿವಿತ, ರಾತ್ರಿಯಾಕಾಶದಡಿ ಅಂಗಾತ ಮಲಗಿದ ದೇಹವನ್ನು ಕಂಡಿರಲಾರರು. ಆದರೆ ನಾವು ನೋಡುತ್ತಿದ್ದದ್ದು ಬಹುಶಃ ಇನ್ನೊಂದು ಕಥೆಯು, ಒಂದು ಹಳೆಯ ಕಥೆಯ ಅಂತ್ಯವನ್ನು. ಡಂಕನ್‌ನನ್ನು ಕೊಂದವನು ಮೊನೆಕೊ ಯೂರಿಯೇಟ್ ಎಂಬ ಬಗ್ಗೆ ನನಗೆ ಸಂಶಯ ಮೂಡತೊಡಗಿತು. ಅಥವಾ ನಂಬಲಾಗದ ರೀತಿಯಲ್ಲಿ ಅಂದು ಕಾದಾಡಿದವರು ಮನುಷ್ಯರಲ್ಲ. ಆಯುಧಗಳೇ ಕಾದಾಡಿರಬೇಕು ಎನಿಸುತ್ತದೆ. ಯೂರಿಯೇಟ್ ಕಠಾರಿಯನ್ನು ಹಿಡಿದಾಗ ಅವನ ಕೈ ಕಂಪಿಸಿದ ಹಾಗೆಯೇ ಡಂಕನ್ ಕೈ ನಡುಗಿದ ದೃಶ್ಯವಿನ್ನೂ ನನಗೆ ನೆನಪಿದೆ. ಕ್ಯಾಬಿನೆಟ್‌ನಲ್ಲಿ ಅಕ್ಕಪಕ್ಕ ಇದ್ದ ಆಯುಧಗಳು ಕಾದಾಡುವವರು ಮುಟ್ಟಿದ ಕೂಡಲೆ ದೀರ್ಘ ಕಾಲದ ನಿದ್ರೆಯ ನಂತರ ಎಚ್ಚೆತ್ತಂತೆ ಅವರ ಕೈಕಂಪಿಸಿದವು. ಗುರಾಣಿಗಳು ಧೂಳು ಹಿಡಿದಿದ್ದರೂ, ಆ ಕಠಾರಿಗಳಿಗೆ-ಮನುಷ್ಯರ ಆಯುಧಗಳಿಗೆಲ್ಲ, ಕಠಾರಿಗಳು-ಕಾದಾಡುವ ವಿಧಾನ ತಿಳಿದಿತ್ತು. ಆ ರಾತ್ರಿ ಅವೆರಡು ಉತ್ತಮವಾಗಿಯೇ ಕಾದಾಡಿದವು.

ಮನುಷ್ಯರಿಗಿಂತ ವಸ್ತುಗಳು ದೀರ್ಘಕಾಲ ಬದುಕುತ್ತವೆ. ಯಾರಿಗೆ ಗೊತ್ತು ಈ ಚಾಕುಗಳು ಮತ್ತೆ ಮುಖಾಮುಖಿಯಾಗಬಹುದು. ಈ ಕಥೆ ಇಲ್ಲಿಗೇ ಕೊನೆಯಾಗುತ್ತದೆಂದು ಯಾರಿಗೆ ತಾನೆ ಗೊತ್ತು.

□

# ಯಾಷ್-ಟ್ರೇ

ತೆಲುಗು ಮೂಲ : **ಚಾಂಗಟಿ ತುಳಸಿ**
ಅನುವಾದ : **ಕುಂ. ವೀರಭದ್ರಪ್ಪ**

"ಅಮ್ಮಾ ನಿನ್ ಹುಡುಕ್ಕೊಂಡು ಯಾರೋ ಬಂದಾರೆ !" ಕಮಲ ಕೋಣೆ ಮುಂದೆ ನಿಂತಿದ್ದಳು. ಬೇಸರ ಬಂತು. ಆದಿವಾರ ಹಾಯಾಗಿ ರಿಲ್ಯಾಕ್ಸ್ ಆಗಿ ಕಾಲ ಕಳೆಯಲಿಕ್ಕೆ ಆಸ್ಪದ ಕೊಡದಂತೆ ಬಂದಿರೋದಾದರೂ ಯಾರು ! ಈ ಮನುಷ್ಯರು ಪ್ರಾಣ ತಿಂಥಿದ್ದಾರೆ.

"ಯಾರು ! ಬಂದಿರೋದು ಹೆಂಗಸೋ ! ಗಂಡಸೋ !"

"ಗಂಡಸರು"

ಒಬ್ಬರಾ ! ಇಬ್ರಾ ! ಮುವ್ವರಾ ! ಹೆಸರು ಗಿಸರು ಕೇಳ್ಲಿಕ್ಕಾಗಿಲ್ವೇನು ? ನೋಡೋಕೆ ಹೇಗಿದ್ದಾರೆ ತನ್ನ ಮುಖದ ಮೇಲಿನ ಬೇಸರ, ಸಿಟ್ಟನ್ನು ಕಮಲ ಗಮನಿಸಿದಳು. ಆಕೆಗೆ ಗೊತ್ತು ತನ್ನ ಮೂಡು ಹಾಳಾಗುವುದೆಂದು.

"ಒಬ್ರೇ, ದಪ್ಪಕ್ಕೆ ಎತ್ತರಕ್ಕೆ ! ಒಳ್ಳೆ ರಾಜನ ಥರ ಇದ್ದಾನೆ" ಬಂದವನ ಬಗ್ಗೆ ಹೇಳಿ ಹೆಸರು ತಿಳಿಯುವ ನಿಮಿತ್ತ ಮತ್ತೆ ಹೊರಹೋದಳು.

ಏನಿದೆ ! ಯಾವುದಾದರೂ ಸ್ಟೂಡೆಂಟ್‌ನ ತಂದೆಯೋ, ಅಣ್ಣನೋ ಇದ್ದಾನು ! ಯಾವುದಾದರೂ ಸೀಟಿನ ಸಲುವಾಗಿಯೋ ಹಾಸ್ಟಲ್ ಬಗ್ಗೆ ವಿಚಾರಿಸಲಿಕ್ಕೋ ಬೆಳಗ್ಗೇನೆ ವಕ್ಕರಿಸಿರುವಂತಿದೆ. ರವಿವಾರದ ಬೆಳಗ್ಗೇನೆ ತಲೆಸ್ನಾನ ಮಾಡಿ ಒಂದು ಕಪ್ಪು ಕಾಫಿ ಕುಡಿದು ಆರಾಂ ಛೇರಿನಲ್ಲೊರಗಿ ಕಾವ್ಯಪಠನ ಮಾಡುತ್ತಿರುವಾಗಲೇ ಶಿವ ಪೂಜೇಲಿ ಕರಡಿ ಬಿಟ್ಟಂತೆ ಯಾರೋ ಬಂದುಬಿಡುವುದೇನು ! ಪ್ರಿನ್ಸಿಪಾಲ್‌ಗಿರಿ ಸಿಕ್ಕ ಮೇಲೆ ಪೊಯಟ್ರಿ ಇಲ್ಲ, ಗಿಯಟ್ರಿ ಇಲ್ಲ, ಬದುಕಿನಲ್ಲಿ

ಪೊಯಟ್ರಿ ಇಲ್ಲದಿದ್ದರೂ, ಜವಾಬ್ದಾರಿಗಳ ನಡುವೆ ಬಿಡುವು ಮಾಡಿಕೊಂಡು ಆ ರವಿವಾರವಾದರೂ ಕವಿತೆಗಳನ್ನು ಸ್ವರವೆತ್ತಿ ಹಾಡೋ ಅವಕಾಶ ಇಲ್ಲೆಂದರೆ ಏನು ಮಾಡುವುದು!

"ಹೆಸರು ಕೇಳೋದೇನು ಬೇಡ....ನಾನೇ ಹೋಗ್ತೀನಿ" ಎಂದು ಎದ್ದಳು.

ಮಲಗೋ ಕೋಣೆಯಿಂದ ಡ್ರಾಯಿಂಗ್ ರೂಂಗೆ ಹೋಗುವಾಗ ಡೈನಿಂಗ್ ಟೇಬಲ್ ಮೇಲಿನ ಫ್ಲವರ್ ವೇಜ್‌ನಲ್ಲಿನ ಹೂವು ಸರಿ ಇಲ್ಲದಿದ್ದುದನ್ನು ನೋಡಿ ನಿಂತರು. ಎದ್ದೊಡನೆ ಚೌಕದ ವೇಜ್‌ನ ಸರಿ ಇಟ್ಟಿದ್ದಾಗಿತ್ತು. ಕೊಂಬೆ, ಹೂವು ಬೆಳೆದಿರೋ ಕಾರಣಕ್ಕೆ ಅದರ ಚಂದ ಇಲ್ಲ. ಸ್ಟೆಮ್ ಹೋಲ್ಡರ್‌ನಿಂದ ಕೆಳಭಾಗಗಳನ್ನು ಕತ್ತರಿಸಿ ಮತ್ತೆ ಅದರಲ್ಲಿ ಸೇರಿಸಿಟ್ಟಳು. ಸಣ್ಣ ವ್ಯತ್ಯಾಸದಿಂದಾಗಿ ಎಷ್ಟೊಂದು ಚಂದಾಯಿತು. ತನಗೆ ತಾನೆ ನಗಾಡಿದಳು. ಸಣ್ಣ ಪುಟ್ಟ ವ್ಯತ್ಯಾಸಗಳಿಂದಲೂ ವಸ್ತುವಿನ ಸೊಗಸು ಹೆಚ್ಚದೆ ಇರದು. ಆ ಸ್ವಲ್ಪ ವ್ಯತ್ಯಾಸವಿಲ್ಲದಿದ್ದಲ್ಲಿ ಅದು ಬೆಳೆದು ವಿಕಾರವಾದೀತು. ಹಲವರ ಕೈ ಮಸಿಯಾದರೆ ತಾನೆ ಹಲವರ ಕೈಗಳ ಸೌಂದರ್ಯ ಹೆಚ್ಚಲಿಕ್ಕೆ ಸಾಧ್ಯ !

ಡ್ರಾಯಿಂಗ್ ರೂಂನ ಕರ್ಟನ್ ಸರಿಸಿ ಹೊರಗೆ ಬಂದೊಡನೆ ನೋಡಿ ವಿಗ್ರಹದಂತೆ ನಿಂತು ಬಿಟ್ಟಳು. ಬಂದಿದ್ದ ದೊಡ್ಡ ಮನುಷ್ಯ ನಿಂತೇ ಇದ್ದಾನೆ. ಒಂದು ಕ್ಷಣ ತತ್ತರಿಸಿ ನೀವಾ? ಎಂದಳು.

ಶೇಖರ್ ! ಹದಿನೈದು ವರ್ಷ ! ಒಂದಲ್ಲ ! ಎರಡಲ್ಲ ! ಸುಮಾರು ಹದಿನೈದು ವರ್ಷಗಳ ನಂತರ ತಾನು ನೋಡುತ್ತಿರುವುದು.

'ಗುರ್ತು ಹಿಡಿದ್ರಾ ?' ಎಂದೆ.

ಯಾಕೆ ಗುರ್ತು ಹಿಡಿಯಲಿಲ್ಲ ? ನಿಜವೇ ? ಹದಿನೈದು ವರ್ಷದಲ್ಲಿ ವ್ಯಕ್ತಿ ತುಂಬ ಬದಲಾಗಿದ್ದಾನೆ. ಆಗ ಗುಂಗುರು ಗೂದಲ ಕ್ರಾಪಿತ್ತು. ಈಗ ಮುಂದಲೆ ಬೋಳಾಗಿದೆ. ವಿದೇಶದಲ್ಲಿದ್ದು ಬಂದಿರುವುದರಿಂದ ಗೌರವವರ್ಣ. ನೋಡಿ ದಿಗ್ಭ್ರಮೆಗೊಳ್ಳದೆ ಇರಲಾಗಲಿಲ್ಲ. ಆದರೆ ಅವೇ ಕಣ್ಣು ! ಸುಂದರವಾದ ಕಣ್ಣು ! ಚುರುಕಾದ ಕಣ್ಣುಗಳು ! ಆ ಕಣ್ಣುಗಳನ್ನು ತಾನೆಂದೂ ಮರೆಯಲು ಸಾಧ್ಯವಿಲ್ಲ.

"ಕೂಡಿ....ನಿಂತೇ ಇದ್ದೀರಲ್ಲ" ಎಂದಳು.

ಆತ ತನ್ನತ್ತ ತೀಕ್ಷ್ಣವಾಗಿ ನೋಡುತ್ತಿದ್ದುದನ್ನು ಎದುರಿಸಲಾಗಲಿಲ್ಲ. ತಲೆ ಸ್ನಾನ ಮಾಡಿದ್ದರಿಂದ ಒಣಗಲಿ ಎಂಬ ಕಾರಣಕ್ಕೆ ಬಾಚಿಕೊಂಡಿರಲಿಲ್ಲ. ಸೊಂಟದವರೆಗೆ ಇಳಿಬಿದ್ದಿರುವ ತನ್ನ ನೀಳ ಕೇಶರಾಶಿಯನ್ನು ಆತ ಕದ್ದು ಮುಚ್ಚಿ ನೋಡುತ್ತಿರುವಂತಿದೆ. ತನಗರಿವಿಲ್ಲದಂತೆ ಸೆರಗು ಹೊದ್ದು ತಲೆಗೂದಲನ್ನು ಮರೆ ಮಾಚಿಕೊಂಡಳು.

"ನೀವು ಮೊದಲಿದ್ದಂತೆ ಇರುವಿರಿ. ಸ್ವಲ್ಪ ಕೂಡ ಬದಲಾಗಿಲ್ಲ" ಸೋಫದಲ್ಲಿ ಕೂತುಕೊಳ್ಳುತ್ತ ಹೇಳಿದೆ. ನಿಜ ! ತಾನೊಂಚೂರೂ ಬದಲಾಗಿಲ್ಲ. ಎಲ್ಲರೂ ಹೇಳುವುದು ಇದನ್ನೆ. ನಲವತ್ತು ಆದರೂ ತಲೆಗೂದಲುದುರಿಲ್ಲ, ನೆರೆ ಇಲ್ಲ. ದೇಹ ಬೊಜ್ಜು ಬಂದು ಚೀಲದಂತಾಗಿಲ್ಲ....ತನ್ನ ಮಾರುದ್ದದ ತಲೆಗೂದಲನ್ನು ನೋಡಿದ ಎಲ್ಲರೂ ಹೇಳುತ್ತಿರುವ ಮಾತಿದು. "ಒಂದೇ ಒಂದು

ನೆರೆ ಕೂದಲಿಲ್ಲಾಂದ್ರೆ ನೀವು ಯಾವ ಎಣ್ಣೆ ಹಚ್ಕೊಳ್ತೀರಿ" ಎಂದೂ; ತನ್ನೆಗೆ ಅಂದಿನಿಂದ ಇಂದಿನವರೆಗೆ ಒಂದೇ ಥರ ಇರುವಿರಿ ! ಆಯಾಸವಿಲ್ದೆ ಚಕಚಕಾಂತ ಕೆಲಸಾನೂ ಮಾಡ್ತಿರ್ತೀರಿ. ನಿಮ್ಮಂತೆ ಕೆಲಸ ಮಾಡೋ ಹೆಣ್ಣು ನಮ್ಮನೇಲಿಲ್ಲ ಎಂದೂ ಎಲ್ಲರೂ ತನ್ನನ್ನು ಹೊಗಳುವವರೇ ! ನಲವತ್ತಾಗಿರುವ ತನಗಿನ್ನೂ ಮುವ್ವತ್ತೈದಿರಬೇಕೆಂದುಕೊಳ್ಳುತ್ತಿರುವರು.

ಮುಗಳ್ನಕ್ಕು ಸುಮ್ಮನಾದಳು. ಈತ ಈ ದೇಶಕ್ಕೆ ಯಾವಾಗ ವಾಪಸಾದನೋ ? ದೇಶಕ್ಕೆ ಬಂದವನು ಈ ಊರಿಗೇಕೆ ಬಂದಿರುವನೋ ? ಈ ಊರಿಗೆ ಬಂದವನು ಅವರಿವರನ್ನು ಕೇಳಿಕೊಂಡು ತಮ್ಮ ಮನೆಗೇಕೆ ಬಂದನೋ ? ತನ್ನ ನೆನಪಿರುವುದುಂಟಾ ? ಮರೆಯುವುದು ಕಷ್ಟಕರ ವಿಷಯವೆ? ಅದಕ್ಕಿಂತ ಆಶ್ಚರ್ಯದ ಸಂಗತಿ ಎಂದರೆ ನೀದ ಮನೆಗೆ ಬಂದಿರುವುದು !

ಮೊದ್ಲು ಪತ್ರ ಬರೆದು ತಿಳಿಸಿ ಬರೋಣ ಅಂದ್ಕೊಂಡಿದ್ದೆ. ಆದರೆ ಬರೆಯಲಾಗ್ಲಿಲ್ಲ ನೀವ ಬಂದುಬಿಟ್ಟೆ. ನೀವೀ ಊರಲ್ಲಿ ಪ್ರಿನ್ಸಿಪಾಲಾಗಿರೋದು, ಸ್ವಂತ ಮನೆ ಕಟ್ಟಿಸಿಕೊಂಡಿಲ್ಲೇ ಸೆಟಲ್ ಆಗಿರೋ ವಿಷಯವನ್ನು ಬಾಬು ತಿಳಿಸಿದ. ನಿನ್ನೆ ರಾತ್ರೀನೆ ಟ್ರೇನಲ್ಲಿ ಬಂದೆ"

"ಬಾಬು ಅಂದ್ರೆ !"

"ಅದೇ ನಮ್ಮ ರಾಮಶಾಸ್ತ್ರಿ"

ಬಾಬು ಅಂದರೆ ಮೊದಲು ಯಾರೋ ಅಂದುಕೊಂಡಿದ್ದಳು. ರಾಮಶಾಸ್ತ್ರಿ ! ಹೌದು. ಅವನನ್ನು ಎಲ್ಲರೂ ಕರೆಯುವುದು ಬಾಬು ಅಂತಾನೆ.

"ಓಹ್ ! ರಾಮಶಾಸ್ತ್ರಿಯವರಾ ! ಅವರೀಗ ಎಲ್ಲಿದ್ದಾರೆ !"

ಬೊಂಬಾಯಲ್ಲಿದ್ದಾನೆ ! ಅವನೂ ಜೊತೇಲಿ ಬರ್ತೀನಂದ. ಆದ್ರೆ ಅಷ್ಟೀಗೆ ಬರಲಿಕ್ಕಾಗ್ಲಿಲ್ಲ.

ರಾಮಶಾಸ್ತ್ರೀನೆ ಶೇಖರ್‌ನ ತನಗೆ ಇಂಟ್ರಡ್ಯೂಸ್ ಮಾಡಿಸಿದ್ದು. ಹ್ಯಾಂಡ್‌ಸಮ್ ಇಂಜಿನಿಯರ್ ಅಂತ. ಶೇಖರ್‌ನನ್ನು ಅಪ್ಪ ಅಮ್ಮ ಕಂಡು ಎಷ್ಟೋ ಸಂತೋಷಪಟ್ರು....ಅವರೊಂದೇ ಅಲ್ಲ ! ತಾನು ಕೂಡ ಮೈಮರೆತದ್ದುಂಟು.

ಅನಂತರ ರಾಮಶಾಸ್ತ್ರಿ ಎಲ್ಲಿದ್ದಾನೋ ! ಏನು ಮಾಡಿಕೊಂಡಿದ್ದಾನೋ ! ತಾನು ತಲೆ ಕೆಡಿಸಿಕೊಳ್ಳಲಿಲ್ಲ. ಅದರ ಅಗತ್ಯಾನು ಬೀಳಲಿಲ್ಲ. ಶೇಖರ್‌ನೊಂದಿಗೆ ಶಾಸ್ತ್ರಿ ಕೂಡ ತನ್ನ ಬದುಕಿನಿಂದ ನೇಪಥ್ಯಕ್ಕೆ ಸರಿದುಬಿಟ್ಟರು. ತಾನೆಲ್ಲಿ ಇದ್ದೀನಿ....ಮನೆ ಮಾಡಿಕೊಂಡಿರೋದಿದೆಲ್ಲ ಬೊಂಬಾಯಿ ಯಲ್ಲಿರೋ ರಾಮಶಾಸ್ತ್ರಿಗೆ ಹೇಗೆ ಗೊತ್ತಾಯಿತೆಂಬುದೇ ಆಶ್ಚರ್ಯದ ಸಂಗತಿ ! ಶೇಖರ್ ರಾಮಾಶಾಸ್ತ್ರಿಯಿಂದ ಎಲ್ಲಾ ತಿಳಿದುಕೊಂಡೇ ತಾನಿಲ್ಲಿಗೆ ಬಂದಿರುವಂತಿದೆ. ಹದಿನೈದು ವರ್ಷದ ಹಿಂದೆ ನಡೆದ ಘಟನೆಗಳು ತೀರಾ ನಿನ್ನೆ ಮೊನ್ನೆ ನಡೆದ ಘಟನೆಗಳೆಂಬಂತೆ ತನ್ನ ಕಣ್ಣ ಮುಂದಿರುವವು.

ಕಮಲಾ ! ಓಹ್ ಕಮಲಾ ಕೂಗಿದಳು.

ಶೇಖರ್ ನಕ್ಕ "ನೀವು ಬದಲಾಗಿಲ್ಲ. ಕಮಲಾ ಓ ಕಮಲಾ ! ಓ ಎಂಬ ಪದ ಬಳಸದೇನೆ ಕರೆಯೋಕೆ ನಿಮ್ಗೆ ಬರೊಲ್ವಲ್ಲ !"

ಶೇಖರ್ ಎಲ್ಲಾ ನೆನಪಿಟ್ಟುಕೊಂಡಿರುವಂತಿದೆ. ಈ ಬಗ್ಗೆ ಅಣ್ಣ ಎಚ್ಚರಿಕೆ ನೀಡಿದ್ದ. "ಅಣ್ಣಾ! ಓ ಅಣ್ಣಾ ಎಂದು ಕರೆಯೋ ಈಕೆ ಮುಂದೆ ಶೇಖರ್ ! ಓ ಶೇಖರ್ ಎಂದು ಕರಿತಿರ್ತಾಳೆ ಹುಷಾರಿರಿ" ಎಂದು ನಗೆಯಾಡಿದ್ದ. ಆ ಶೇಖರ್ ನಕ್ಕ ! ತನಗೆ ನಗಲಾಗಿರಲಿಲ್ಲ. ಆ ವಿಷಯ ನೆನಪಾಗಿ ನೋವಾಯಿತು. ಶೇಖರ್ ! ಓ ಶೇಖರ್ ಎಂದು ಕೂಗುವ ಪ್ರಸಂಗವೇ ಬರಲಿಲ್ಲ. ದೊಡ್ಡವರ ಭಾಷೆಯಲ್ಲಿ ಯೋಗ ಬರಲಿಲ್ಲ. ಹದಿನೈದು ವರ್ಷಗಳ ನಂತರ ಮಧ್ಯವಯಸ್ಕಳಾಗಿರುವ ತನಗೆ ಶೇಖರ್ ಕೇವಲ ಪರಿಚಯಸ್ಥ ಮಾತ್ರ. ಇನ್ನೊಂದಿಲ್ಲ. ಅಂದಮೇಲೆ ತಾನೇಕೆ ಮನಸ್ಸಿಗೆ ನೋವು ಮಾಡಿಕೊಳ್ಳುವುದು ? ಆ ನೋವು ಚಕ್ಕಳಿಗುಳ್ಳಿ ಇಡುತ್ತ ಅಮ್ಮಾ ಎಂದು ನುಗ್ಗಿಬಂತು.

ಕಮಲ ಬಂದಳು.

"ಎರಡು ಕಪ್ಪು ಕಾಫಿ ತಗೊಂಡ್ಬಾ" ಎಂದಾಕೆಗೆ ಹೇಳಿದಳು.

"ಎಷ್ಟ್ ವರ್ಷಾದ್ವು ನಿಮ್ಮ ಕೈಯಿಂದ ಕಾಫಿ ಕುಡಿಯದೆ ! ಕಮಲಳ ಕೈಯಿಂದ ಕಾಫೀನ ಕೊಡಿಸ್ತಿದಾರೇನು !" ಎಂದ ಶೇಖರ್.

ತಾನು ಮಾಡುತ್ತಿದ್ದ ಕಾಫಿ ಅದ್ಭುತ ಎಂದು ಶೇಖರ್ ಹೊಗಳಿದ್ದುಂಟು. ಇವನೊಂದೇ ಅಲ್ಲ, ಅಣ್ಣ ಮತ್ತವನ ಗೆಳೆಯರೂ ಹಾಗೆ ಅನ್ನುತ್ತಿದ್ದುದುಂಟು. ಈಗಲೂ ಕೆಲವು ಗೆಳೆಯರು "ಕಮಲಳ ಕಾಫಿ ಬೇಡ....ನೀವು ಮಾಡೋ ಕಾಫಿ ಬೇಕು" ಎಂದು ಅಡುಗೆ ಮನೇಲಿ ಖುದ್ದ ನಿಂತು ಕಾಫಿ ಮಾಡಿಸಿಕೊಳ್ಳುವುದೂ ಉಂಟು. ನಿಮ್ಮ ಕೈಯ ಕಾಫಿ ಕುಡಿಯೋಣ ಎಂದು ಕೇಳುತ್ತಿರುವ ಈ ಶೇಖರ್‌ನೊಳಗೆ ಆ ಶೇಖರ್ ಗೋಚರಿಸತೊಡಗಿದ. ಕಾಲ ಎಂಥ ಬದಲಾವಣೆ ತರುತ್ತಿರುವುದಲ್ಲ. ಎಷ್ಟೋ ವರ್ಷಗಳ ನಂತರ ಹುಡುಕಿಕೊಂಡು ಬಂದಿರುವ ಶೇಖರ್‌ಗೆ ತಾನು ಕಾಫಿ ಮಾಡಿ ಕೊಡುವುದೆಂದರೇನು ! ಮೈ ಉರಿಯಿತು ! ಸ್ವಾರ್ಥಿ ! ಮಾತನ್ನುಳಿಸಿಕೊಳ್ಳದ ಅನಾಗರಿಕ ! ಎಲ್ಲರೂ ತಲಾ ಒಂದೊಂದು ರೀತಿಯಲ್ಲಿ ತೆಗಳಿದ್ದುಂಟು.

ಈಗ ಹದಿನೈದು ವರ್ಷಗಳ ನಂತರ ! ನಲವತ್ತಾಗಿರುವಾಗ ! ಪ್ರಿನ್ಸಿಪಾಲ್ ಆಗಿರುವಾಗ ನೋಷನಲ್ ಸ್ಟೇಟಸ್ ಇರುವ ತನ್ನ ಮನೆಗೆ ಬಂದ ಅತಿಥಿಯನ್ನು ಗೌರವಿಸಿ ಕಳಿಸಬೇಕು. ಇಷ್ಟು ವರ್ಷಗಳ ಅಂತರವಿರದಿದ್ದಲ್ಲಿ ತಾನು ಬಾಯಿಗೆ ಬಂದಂತೆ ಬಯ್ದು ಕಳಿಸದೆ ಇರುತ್ತಿರಲಿಲ್ಲ. ಈಗ ತನ್ನಲ್ಲಿ ಸಿಟ್ಟು ಸೆಡವು ಇಲ್ಲ. ಬಯ್ಯೋದು ಮರ್ಯಾದಸ್ಥರ ಲಕ್ಷಣವಲ್ಲ. ಅದರ ಅಗತ್ಯವೂ ಇಲ್ಲ.

ತಾನೆ ಎದ್ದು ಒಳಗೆ ಹೋಗುವಾಗ ನಿಮ್ಮನೇನ ನಾನು ನೋಡಬೌದಾ ? ಅಥವಾ ಡ್ರಾಯಿಂಗ್ ರೂಂನಲ್ಲೇ ಕೂತಿರಬೇಕಾ ಎನ್ನುತ್ತಾ ಅವನು ಎದ್ದು ನಿಂತ.

ಅಮ್ಮನವರ ಮನೆಗೆ ಬಂದು ಹೋಗುವವರು ಯಾರೂ ಇಲ್ಲ. ಆಕೆ, ಆಕೆಯ ಪುಸ್ತಕಗಳು, ಆಕೆಯ ಕಾಲೇಜು, ಆಕೆಯ ಕೈತೋಟದ ಗಿಡಗಳು....ಇವು ಬಿಟ್ಟರೆ ಬೇರೊಂದು ಪ್ರಪಂಚ ಆಕೆಗಿಲ್ಲ....ಆಗೊಮ್ಮೆ ಈಗೊಮ್ಮೆ ಆಕೆಯ ಅಣ್ಣ ಬರುವುದುಂಟು. ಪರಿಸ್ಥಿತಿ ಹೀಗಿರುವಾಗ ಬಂದಿರುವ ದೊಡ್ಡ ಮನುಷ್ಯ ಹೀಗೆ ಮಾತಾಡುತ್ತಿರುವನಲ್ಲ....ಎಂದು ಮುಂತಾಗಿ ಕಮಲ ಯೋಚಿಸುತ್ತಿರಬಹುದು. ಆಕೆಗೇನು ಗೊತ್ತು ! ಒಂದು ಕಾಲದಲ್ಲಿ ಇದೇ ಈ ದೊಡ್ಡ ಮನುಷ್ಯ ಅಮ್ಮನವರ ಬದುಕಿನೊಂದಿಗೆ ಚೆಲ್ಲಾಟವಾಡಿ ತುಂಬ ವರ್ಷಗಳಾದ ಮೇಲೆ ಬಂದಿರುವನೆಂಬುದು.

"ಬನ್ನಿ ಒಳಗಡೆ....ಮನೆ ನೋಡಬೌದಾ ಅಂತ ಕೇಳ್ತಿದೀರಲ್ಲ !" ಎಂದು ಅವನೊಂದಿಗೆ ಒಳಗಡೆ ಹೋದಳು. ಮರ್ಯಾದೆ ಗೌರವ ಇವೆಲ್ಲ ಮುಖದ ಮೇಲೆ ಸದಾ ಅಂಟಿರುತ್ತವೆ. ಮನಸ್ಸಿನೊಳಗೆ ನಡೆಯುವ ಘರ್ಷಣೆಗೂ, ಮುಖದ ಭಾವನೆಗಳಿಗೂ ಸಂಬಂಧವಿಲ್ಲ.

ತನ್ನ ಮನೆಯನ್ನೂ, ತನ್ನನ್ನೂ ಶೇಖರ್ ನೋಡಲೇಬೇಕು. ಆಗ ತನ್ನನ್ನು ತಿರಸ್ಕರಿಸಿ ಹೋಗೇಬಿಟ್ಟ. ಸ್ವಂತ ಕಾಲ ಮೇಲೆ ನಿಂತು ಮದಿದು ಬದುಕುತ್ತಿರುವ ತನ್ನನ್ನು ; ಸ್ಟೇಟಸ್ ರೈಜ್ ಮಾಡಿಕೊಂಡಿರೋ ತನ್ನನ್ನು ನೋಡಲಿ ! ತನ್ನವರು ಹಣವಂತರಲ್ಲದಿದ್ದುದರಿಂದ : ಕೇಳಿದಷ್ಟು ದುಡ್ಡು ಕೊಡಲಿಲ್ಲದ ಕಾರಣದಿಂದ ತನ್ನನ್ನು ಬಿಟ್ಟು ಶೇಖರ್ ಯಾವುದೋ ಓದಿಕೊಂಡಿರವ ಕುರೂಪಿಯನ್ನು ಮದುವೆಯಾದ. ಆಕೆ ಓದದೇ ಇದ್ದರೆ ಏನು ! ಆಕೆ ತನ್ನ ಸೆರಗಿಗೆ ಬಂಗಾರ ಕಟ್ಟಿಕೊಂಡಿದ್ದಳಲ್ಲ. ಆಕೆಯ ಸೆರಗು ಹಿಡಿದು ಇಂಗ್ಲೆಂಡಿಗೆ ಹೋದ. ದೊಡ್ಡ ಇಂಜನಿಯರಾಗಿ ಅಲ್ಲೇ ಸೆಟ್ಲ್ ಆಗಿರುವನೆಂದು ಯಾರೋ ಹೇಳಿದರು. ದಂಪತಿಯೊಂದಿಗೆ ಇಂಡಿಯಾಕ್ಕೆ ಬಂದಿರಬಹುದು. ಹಾಗೆ ದೇಶ ಸುತ್ತಾಡಿಕೊಂಡು ತನ್ನ ಮನೆಗೂ ಬಂದುಬಿಟ್ಟಿರುವನು.

ಶೇಖರ್ ಇಂಗ್ಲೆಂಡಿಗೆ ಹೋದ ವಿಷಯ ತಿಳಿದು ಮನೆಯವರೆಲ್ಲರೂ ಅವನನ್ನು ಬಯ್ದರು. ಮಾತಲ್ಲಿ ಮಾತಿಲ್ಲದವನು ತಮ್ಮ ಹುಡುಗೀನ ಮದುವೆಯಾಗ್ತೀನಿ ಅಂತ ಹೇಳಬೇಕಾಗಿತ್ತು, ನಮ್ಮ ಹುಡುಗೀನ ಕಾಣೋ ಸಲುವಾಗಿ ದಿನಂಪ್ರತಿ ಬೆಳಿಗ್ಗೆ ಸಂಜೆ ಯಾಕೆ ತಪ್ಪದೆ ಹಾಜರಾಗ್ತಿದ್ದ. ಎಲ್ಲಾ ದುಡ್ಡು....ದುಡ್ಡಿನ ಮಹಿಮೆ....ಹೀಗೆ ತಲಾ ಒಂದೊಂದು ಮಾತು. ದುಡ್ಡೇ ಬೇಕೆಂದು ಹಠ ಹಿಡಿದಿದ್ದ ಪಕ್ಷದಲ್ಲಿ ಇರೋ ಒಂದು ಮನೇನ ಮಾರಿಯಾದರೂ ಕೊಡುತ್ತಿದ್ದೆನಲ್ಲ....ಎಂದು ಅಪ್ಪ ಹಣೆ ಹಣೆ ಚಚ್ಚಿಕೊಂಡರು. ಮೊದಲು ಶೇಖರ್‌ನ ಪರಿಚಯಿಸುವಾಗ ವರದಕ್ಷಿಣೆ, ವರೋಪಚಾರದ ಗೊಡವೆಯೇ ಬೇಡವೆಂದು. ಶೇಖರ್‌ನ ನಿಜ ಬಣ್ಣ ಬಯಲಾದೊಡನೆ "ಅಂಗಾಲು ಸವೆಯೊತನಕ ತಿರುಗಾಡಿಯಾದ್ರು ಅವನ ತಾತ್ಸಾರಂಥ ಸಂಬಂಧ ತರ್ತೀನಿ ನೋಡು" ಎಂದು ಶಪಥಾನು ಮಾಡಿದರು. ಆದರೆ ತನ್ನ ಮೊಂಡುತನದ ಮುಂದೆ ಯಾರ ಆಟಾನು ನಡೆಯಲಿಲ್ಲ. ಯಾರು ಏನೇ ಹೇಳಿದರೂ ತಾನು ಮದುವೆ ಆಗುವುದಿಲ್ಲವೆಂದು ಹೇಳಿದಳು. ಅವನಂತೂ ಆದಿವಾಸಿ ಥರದೋನು ! ಎಲ್ರೂ ಅವನಂತೆ ಇರೋದಿಲ್ಲ ಎಂದು ಸಮಾಧಾನ ಹೇಳಲು ಪ್ರಯತ್ನಿಸಿದರು. ಆಕೆ ಶಿಖಂಡಿ ಥರದೋಳು! ಆಕೆ ಪಾಡಿಗೆ ಆಕೇನ ಬಿಟ್ ಬಿಡ್ರಿ....ಅನುಭೋಸ್ಲಿ ಎಂದೊಂದು ನಮಸ್ಕಾರಾನು ಹಾಕಿಬಿಟ್ಟರು. ಆದರಿಂದಾಗಿಯೇ ಈಗ ತಾನು ಕಾಲೇಜೊಂದರ ಪ್ರಿನ್ಸಿಪಾಲ್, ಒಳ್ಳೆ ವ್ಯಕ್ತಿತ್ವದ ಅಡ್ಮಿನಿಸ್ಟ್ರೇಟರ್, ಒಳ್ಳೆ ಮೇಡಂ, ಸುತ್ತಮುತ್ತ ಇರುವವರಿಗೆ ಅಂತಃಕರಣದ ತಾಯಿ. ಸಮಾಜದಲ್ಲಿ ಒಳ್ಳೆಯ ಹೆಸರು ಸಂಪಾದಿಸಿಕೊಂಡಿರುವಳು. ಈಗೀಗ ಹೊಸ ಮನೆಯ ಒಡತಿ ಕೂಡ. ಮುಂದೆ ಸುಂದರ ತೋಟ....! ಒಳ್ಳೆಯ ಲೈಬ್ರರಿ, ಕೈ ತುಂಬ ಕೆಲಸ, ತನ್ನ ಹಿತೈಷಿಗಳಿಗೆ ತಾನೆಂದರೆ ಆಶ್ಚರ್ಯನೇ. ಇಂಥ ಒಳ್ಳೆಯ ಮಹಿಳೆ, ಒಳ್ಳೆ ಮನಸ್ಸಿರುವ ಮಹಿಳೆ, ಮನೆ ಒಳ ಹೊರಗೆ ಕೆಲಸ ಮಾಡುತ್ತಿರುವ ಇಂಥ ಮಹಿಳೆ ಮದುವೆ ಮಾಡಿಕೊಂಡಿಲ್ಲವೆಂದರೆ ಆಶ್ಚರ್ಯವೇ ! "ಮದುವೆ ಮಾಡಿಕೊಂಡಿದ್ದೊಂದ್ರೆ ಎಂಥ ಒಳ್ಳೆಯ ಗೃಹಿಣಿಯಾಗಿರ್ತಿದ್ಳು....ಒಟ್ಟಿನಲ್ಲಿ ಗಂಡಸರ ಕರ್ಮ" ಎಂದು ಮುಂತಾಗಿ ತಮ್ಮ ಷ್ಟಕ್ಕೆ ತಾವೆ, ತನಗೂ ಕೇಳಿಸುವಂತ ಮುಂದಿ ಮಾತಾಡುತ್ತಿರುವುದು ಮಾಮೂಲು ಸಂಗತಿ. ನೋಡಲೀ ಶೇಖರ್ ತನ್ನನ್ನು, ತನ್ನ ಮನೆಯನ್ನೂ, ತನ್ನ ವ್ಯಕ್ತಿತ್ವವನ್ನೂ, ಮದುವೆ ಮಹಿಳೆಯ ಬದುಕಿನ

ಮಹತ್ವದ ಸಂಗತಿ ಅಲ್ಲವೆಂದು, ಬದುಕಿಗೆ ಬೆಳಕಾದುದು ಸೌಂದರ್ಯ, ಸೊಗಸು ಅಂತ ಗೊತ್ತಾಗಲಿ! ಹಣವೇ ಮುಖ್ಯ ಅಲ್ಲವೆಂಬುದೂ ತಿಳಿಯಲಿ.

ಡೈನಿಂಗ್ ರೂಂನ ಟೇಬಲ್ ಮೇಲಿದ್ದ ಹೂವುಗಳನ್ನು ನೋಡಿದೊಡನೆ ಶೇಖರ್ ಸ್ವಲ್ಪ ಸಮಯ ಹಾಗೆಯೇ ನಿಂತುಬಿಟ್ಟ. ಹೂವುಗಳ ವಿನ್ಯಾಸ ಮಾಡಿರೋದು ಚೆನ್ನಾಗಿದೆ. ತುಂಬಾ ಚೆನ್ನಾಗಿದೆ ಎಂದು ಶ್ಲಾಘಿಸಿದ. ಸಣ್ಣ ವ್ಯತ್ಯಾಸಗಳ ನಡುವಿಂದ ಅಂದ ಹುಟ್ಟುವುದೆಂದು ತಾನು ಮನವರಿಕೆ ಮಾಡಿಕೊಟ್ಟಳು. ಹೂವಿನ ಉದ್ದದ ದಂಟುಗಳನ್ನು ಹೇಗೆ ಕತ್ತರಿಸಬೇಕೆಂಬುದರ ಬಗೆಗೂ ತಾನು ವಿವರಿಸಿದಳು.

"ನೀವು ಹೇಳ್ತಿರೋದು ನಿಜ ! ನಾವು ನಮ್ಮ ನಮ್ಮ ಬದುಕುಗಳನ್ನು ಕೂಡ ಆಗಾಗ್ಗೆ ಕತ್ತರಿಸಿ ಪುನರ್ರೂಪಿಸಿಕೊಳ್ಳೋದೂ ಮುಖ್ಯ. ಇದರಿಂದ ಬದುಕಿನ ಕುರೂಪಿತನ ಕೂಡ ಹೋಗ್ತದೆ" ಎಂದ ಶೇಖರ್.

ಅವನು ಯಾಕೆ ಹಾಗೆ ಹೇಳಿದ್ದು !

ಇದು ಬೆಡ್ರೂಂ ! ರೀಡಿಂಗ್ ರೂಂ ! ಲೈಬ್ರರಿ ಅಂದ್ಕೊಳ್ರಿ. ತುಂಬ ಪುಸ್ತಕಗಳ್ನ ಕಲೆಕ್ಟ್ ಮಾಡಿದ್ದೀರಿ.. ಎಂದು ಶೇಖರ್ ಪುಸ್ತಕಗಳ ರಾಕ್‌ಗಳನ್ನು ಪರಿಶೀಲಿಸಲಾರಂಭಿಸಿದ. ನಿಜವೇ ? ತನ್ನ ಬೆಡ್‌ರೂಂ ತುಂಬಾ ಪುಸ್ತಕಗಳು. ತಾನಿದುರುವರೆಗೆ ಓದಿಟ್ಟಿದ್ದ ಮಾಡರ್ನ್ ಪೊಯಟ್ರಿ ಅಂಥಾಲಜೀನ ಕೈಲಿ ಹಿಡಿದುಕೊಂಡು ಕುರ್ಚಿಯಲ್ಲಿ ಕೂತುಕೊಂಡ.

"ನಿಮ್ಮ ಮನೆ ತುಂಬಾ ಚೆನ್ನಾಗಿದೆ. ಇನ್ನೊಂದು ಕಾಫಿ ಕೊಡುವಿರಾ" ಎಂದು ಕೇಳಿದ.

ಬಂದು ಹೋಗುವ ದೈನಂದಿನ ಸಲಿಗೆಯ ಗೆಳೆಯನಂತೆ ಮಾತಾಡುತ್ತಿದ್ದಾನೆ. ಹಿಂದೆ ನಡೆದ, ಮತ್ತು ಅದಕ್ಕೆಲ್ಲ ತಾನೇ ಕಾರಣನೆಂಬ ನಾಚಿಕೆ ಅವನ ವರ್ತನೆಯಲ್ಲಿ ಎಲ್ಲೂ ಇಲ್ಲ. ಎಷ್ಟೋ ವರ್ಷಗಳ ನಂತರ ಬಂದಿರುವ ತಾನು ಒಂದಾದರು ಕ್ಷಮಾಪಣೆಯ ಮಾತು ಹೇಳಿಯಾನೆ !

'ಶ್ಯೂರ್' ಎಂದು ಅಡುಗೆ ಮನೆಗೆ ಹೋದಳು.

ಕಾಫಿ ಮಾಡುತ್ತಿದ್ದಾಗ ಮತ್ತೆ ಹಳೆಯ ಸಂಗತಿಗಳನ್ನು ನೆನಪಿಸಿಕೊಂಡಳು. ಕೂದಲುದುರಿ ಬೋಳಾಗಿದ್ದರೂ ಶೇಖರ್ ನೋಡಲು ಆಕರ್ಷಕವಾಗಿರುವನು. ಶೇಖರನ ಬಗ್ಗೆ ತಾನು ದುರ್ಬಲಳೇ! ಬಲಹೀನತೆ ಎನ್ನುವುದಿದ್ದಲ್ಲಿ ಯಾರಾದರೂ ಒಬ್ಬರನ್ನು ಕಟ್ಟಿಕೊಂಡು, ಮಕ್ಕಳು ಮರಿ ಹೆತ್ತು ಹಾಯಾಗಿ ಸಂಸಾರ ನಡೆಸಿರ್ತಿದ್ದಳು. ಶೇಖರ್ ಯಾರೋ ಒಬ್ಬ ಹೇಗಾದನು ! ಶೇಖರ್ ಬಗೆಗೇನೆ ಬಲಹೀನತೆ ! ಮನಸ್ಸು ಎದುರು ಸಮಾಧಾನ ನೀಡಿತು.

ಶೇಖರ್‌ನ ಹೆಂಡತಿ ಹೇಗಿರುವಳೊ ? ಆಕೇನ ಜೊತೇಲಿ ಕರೆದುಕೊಂಡು ಬಂದಿದ್ದಲ್ಲಿ ತಾನೂ ನೋಡುತ್ತಿದ್ದಳು. ಮಕ್ಕಳು ಮರಿ ಇರಲೂಬಹುದು. ಈ ದೇಶಕ್ಕೆ ಯಾವಾಗ ಬಂದನೋ! ಇನ್ನೆಷ್ಟು ದಿವಸ ಇರುವನೋ ! ಶೇಖರ್‌ಗೆ ತಾನೇನನ್ನೂ ಕೇಳಲಾಗುತ್ತಿಲ್ಲ.

ಕಾಫಿ ತರೋ ಹೊತ್ತಿಗೆ ಎದೆ ಮೇಲೆ ಪುಸ್ತಕವಿರಿಸಿಕೊಂಡು ಅವನು ನಿದ್ದೆ ಹೋಗಿದ್ದ. ತನ್ನ ಹೆಜ್ಜೆ ಸದ್ದಿಗೆ ಕಣ್ಣು ಬಿಚ್ಚಿದ. ಕಣ್ಣುಗಳು ಒದ್ದೆಯಾಗಿದ್ದವು. ಅವನು ತನ್ನಷ್ಟಕ್ಕೆ ತಾನು ನೋವು

ಅನುಭವಿಸುತ್ತಿರುವಂತಿದೆ. "ನೋ ಗ್ರೀವೆನ್ಸ್ ಫಾರ್ ದಿ ಫಾಸ್ಟ್" ಎಂದು ತಾನು ಹೇಳಬೇಕೆಂದು ಕೊಂಡಳು. ಮಾತಾಡಿದೆ ಕಾಫಿ ಕುಡಿದು ಮುಗಿಸಿದ. ತಾನು ಮೌನವಾಗಿ ಅವನ ಕಡೆ ನೋಡುತ್ತ ಕಾಫಿ ಕುಡಿದಳು. ತಾನು ಮಾಡಿದ ಕಾಫಿಯನ್ನು ಎಷ್ಟು ಸಾಧ್ಯವೋ ಅಷ್ಟು ಎಂಜಾಯ್ ಮಾಡಿದನೋ! ಜೇಬಿನಿಂದ ಸಿಗರೇಟ್ ತೆಗೆದು ವಿಥ್ ಯುವರ್ ಪರ್ಮಿಷನ್ ಎಂದ.

ಸಣ್ಣಗೆ ತಲೆ ಅಲ್ಲಾಡಿಸಿದಳು. ಹದಿನೈದು ವರ್ಷಗಳ ಹಿಂದಿನ ಮಾತುಕತೆ.

"ಯಾಷ್-ಟ್ರೇ ಇಲ್ವಾ" ಅಂತ ಆಚೀಚೆ ನೋಡಿದ.

"ನನ್ಗೆ ಯಾಷ್-ಟ್ರೇ ಅಗತ್ಯ ಬಿದ್ದಿಲ್ಲ" ಎಂದಳು.

"ಸಿಗರೇಟ್ ಚಟ ಇದ್ರೆ ಯಾಷ್-ಟ್ರೇನ ತಗೊಳ್ಳೀಬೇಕಾಗ್ತದೆ" ಎಂದಳು. ಮನೇಲಿ ಅಪ್ಪ ಆಗಲೀ, ಅಮ್ಮ ಆಗಲೀ ಸಿಗರೇಟ್ ಸೇದೋದಿಲ್ಲ.

'ತಗೊಳ್ಳೋದಿದ್ರೆ ತಗೊಂಡ್ಬಿಡಿ' ಎಂದ. ಹದಿನೈದುವರ್ಷಗಳ ಹಿಂದಿನ ಮಾತುಕತೆ.

ಶೇಖರ್ ತನ್ನತ್ತ ನೋಡಿದ. ಏನೆಂದುಕೊಂಡನೇನೋ ಸಿಗರೇಟ್ ನಂದಿಸಿದ.

ನೀವೊಮ್ಮೆ ನನ್ನೊತೆ ಗೆಸ್ಟ್‌ಹೌಸಿಗೆ ಬರ್ಬೇಕು....ಬರ್ತೀರಾ.

ಫ್ಯಾಮಿಲಿ ಜೊತೆ ಬಂದಿದೀರಾ ! ಅವರ್ನೆಲ್ಲ ಯಾಕೆ ಕರ್ಕೊಂಡ್ ಬರ್ಲಿಲ್ಲ ಎಂದು ಕೇಳಿದಳು. "ಮೊದ್ಲು ಕರ್ಕೊಂಡ್ ಬರಬೇಕೆಂದ್ಕೊಂಡಿದ್ದೆ. ಆದ್ರೆ ಎಷ್ಟೋ ವರ್ಷಗಳಾದ ಮೇಲೆ ಭೆಟ್ಟಿಯಾಗ್ತಿರೋದಂತ ಹಿಂದೇಟು ಹಾಕಿದೆ. ನಿಮ್ಮನ್ನೇ ಕರಕೊಂಡು ಹೋದರಾಯ್ತೆಂದು ಯೋಚಿಸಿದೆ"

ತಾನು ಹೋಗುವುದೋ ! ಬೇಡವೋ ! ಬರೋದಿಲ್ಲಾಂತ ಬ್ಲಂಟ್ ಆಗಿ ಹೇಳಲಾದೀತೆ! ಏನು ಹೇಳಿದರೆ ತಪ್ಪಿಸಿಕೊಳ್ಳಬಹುದು ! ಒಂದು ಪಕ್ಷ ಹೋದಲ್ಲಿ ಆತನ ಹೆಂಡತಿ ಹೇಗೆ ಬಿಹೇವ್ ಮಾಡುವಳೋ ! ಏನೋ ! ಹೆಂಡತಿಗವನು ಏನು ಹೇಳಬಹುದು ? ಸೀದ ಇಲ್ಲಿಗೆ ಕರೆದುಕೊಂಡು ಬಂದು ಪರಿಚಯಿಸಬಹುದಿತ್ತಲ್ಲವೆ ! ತಪ್ಪಿಸಿಕೊಳ್ಳುವಂತಿಲ್ಲ ! ಹೋಗಬೇಕು ! ಹೋಗಿ ನೋಡಬೇಕು! ನೋಡಬೇಕೆಂಬ ಆಸೆ ಬಲಗೊಂಡೊಡನೆ ಮನಸ್ಸು ಗಟ್ಟಿ ಮಾಡಿಕೊಂಡು ಅವನೊಂದಿಗೆ ಗೆಸ್ಟ್ ಹೌಸ್‌ಗೆ ಹೋದಳು.

ಬನ್ನಿ ! ಈ ರೂಂನಲ್ಲೆ ಉಳಿದಿರೋದು ! ಎಂದು ಒಳಗಡೆ ಕರೆದೊಯ್ದ. ಕೋಣೇಲಿ ಯಾರೂ ಇರಲಿಲ್ಲ. ಮಂಚದ ಮೇಲೆ ಎರಡು ವರ್ಷದ ಮಗು ಮಲಗಿತ್ತು. ಆಕೆ ಮಂಚದ ಪಕ್ಕ ನಿಂತು ಮಗುವಿನ ಕಡೆ ದೃಷ್ಟಿ ಹರಿಸಿದಳು. ಮಗು ಸುಂದರವಾಗಿತ್ತು. ಗುಂಗುರಗೂದಲ ತಲೆ. ಎಲ್ಲಾ ತಂದೆಯ ಹೋಲಿಕೆ, ನಿದ್ದೇಲಿ ನಗುತ್ತಿದ್ದ. ಶೇಖರ್ ಕಡೆ ತಿರುಗಿದಳು. ಅವನು ತನ್ನ ಕಡೆಗೇ ನೋಡುತ್ತಿದ್ದ.

'ಕೂಡಿ'

ಮಂಚದ ಪಕ್ಕ ಇದ್ದ ಕುರ್ಚೀಲಿ ಕೂತು ಆಚೀಚೆ ನೋಡಿದಳು. ಇನ್ನೊಬ್ಬರ ಸುಳಿವಿರಲಿಲ್ಲ.

"ಮಗುವಿನ ಮದರೆಲ್ಲಿ !"

"ಮಗುವಿನ ಮದರ್ರೂ, ಫಾದರ್ರೂ ನಾನೇ !"

"ವಾಟ್ !" ಎಂದು ಶೇಖರ್‌ನ ಕಡೆ ದಿಗ್ಭ್ರಮೆಯಿಂದ ನೋಡಿದಳು.

"ಹೆರಿಗೇಲಿ ಇವನು ತಾಯಿನ ಕಳಕೊಂಡ".

ಆ ಮಗು ನಿಶ್ಚಿಂತೆಯಿಂದ ಹಾಯಾಗಿ ನಿದ್ದೆ ಮಾಡುತ್ತಿತ್ತು. ತಾನೀ ದೇಶಕ್ಕೆ ಖಾಯಂ ಆಗಿ ಬಂದುದರ ಬಗ್ಗೆ, ನೌಕರೀಲಿ ಇರುವುದರ ಬಗ್ಗೆ, ಮಗೂನ ಪಾಲನೆ ಪೋಷಣೆ ತಾನೇ ವಹಿಸಿಕೊಂಡಿರುವುದರ ಬಗ್ಗೆ, ಮನಸ್ಸಿನ ತುಮುಲ ತಾಳಲಾರದೆ ತಾನು ರಾಮಶಾಸ್ತ್ರಿಯನ್ನು ಕಂಡಿದ್ದರ ಬಗ್ಗೆ, ಶಾಸ್ತ್ರಿಯಿಂದ ವಿಳಾಸ ತಾನು ಪಡೆದುದರ ಬಗ್ಗೆ ಎಲ್ಲ ವಿವರಿಸಿದ.

ಕೊನೆಗೆ "ಈಗ್ಲಾದ್ರು ಯಾಷ್-ಟ್ರೇನ ಕೊಳ್ತೀರಾ !" ಎಂದು ಕೇಳಿದ.

ಆಕೆ ಶೇಖರ್ ಕಡೆಗೊಮ್ಮೆ, ಹಾಯಾಗಿ ಮಲಗಿದ್ದ ಮಗುವಿನ ಕಡೆ ಮತ್ತೆ ಮತ್ತೆ ನೋಡಿದಳು.

ಶೇಖರ್ ! ಶೇಖರ್ ! ಎಷ್ಟು ವರ್ಷಗಳಾದರೂ ಶೇಖರ್ ಶೇಖರೇ. ಮೂಡಬೇಕಿರುವ ಕ್ಷಣ ಮತ್ತೊಮ್ಮೆ ತನ್ನ ಬದುಕಿನಲ್ಲಿ ಬಂದಿರುವುದು. ಈ ನಿರ್ಧಾರದಿಂದ ತನ್ನ ಬದುಕು ಬೇರೊಂದು ತಿರುವು ಪಡೆಯಲಿರುವುದು. ಆ ತಿರುವು ಮಧ್ಯವಯಸ್ಕರ ಜೀವನದ ಅರ್ಥಪೂರ್ಣ ತಿರುವು ಆಗುವುದೆ ? ಶೇಖರ್ ಶೇಖರೇ ! ಎಷ್ಟು ವರ್ಷಗಳಾದರೂ ಶೇಖರು ಶೇಖರ್ರೇ !

ಒಂದು ನಿಮಿಷ ! ಎರಡು ನಿಮಿಷ, ಮೂರು ನಿಮಿಷ ! ಐದು ನಿಮಿ....ಶೇಖರ್ ತನ್ನ ಕಡೆಗೇ ನೋಡುತ್ತಿರುವನು.

"ಐಯಾಮ್ ಸಾರಿ ಶೇಖರ್ ! ಮನೆ ತುಂಬಾನೆ ಚಿಕ್ದು....ಯಾಷ್-ಟ್ರೇ ಇಡ್ಲಿಕ್ಕೆ ಜಾಗ ಇಲ್ಲ !" ಎಂದಳು.

(ಕೃಪೆ : ಕೇಂದ್ರ ಸಾಹಿತ್ಯ ಅಕಾಡೆಮಿ)

□

---

ಕುಂ. ವೀರಭದ್ರಪ್ಪ
ಕೊಟ್ಟೂರು, ಬಳ್ಳಾರಿ ಜಿಲ್ಲೆ

# ಶಿವತಾಂಡವ

ಮಲಯಾಳಂ ಮೂಲ : **ಮಹಾಕವಿ ಜಿ. ಶಂಕರ ಕುರುಪ್**
ಅನುವಾದ : **ಕೆ.ಕೆ. ನಾಯರ್**

ಎವೆಯ ಮುಚ್ಚಿ ಮುಚ್ಚಿ ದಿಟ್ಟಿಸುತ್ತ ನಿಂತುಬಿಟ್ಟೆನು
ಸಂಜೆ ನಾನು ಆ ವರಿಷ್ಠ ನಟನ ನಾಟ್ಯ ಸೊಬಗನು

ವಿಪುಲವಾದ ಮುಗಿಲಮುಡಿಯು ಹಾರುತಿರಲು ಕಟ್ಟನು
ಕಳಚಿ ಚದುರುತಿಹುದು ತಾರೆರುದ್ರಾಕ್ಷದ ಹಾರವು

ತೊನೆದುತೂಗೆ ಒಂದುಬದಿಗೆ ಹೊರಳಿ ಬಿದ್ದುಕೊಂಡಿದೆ
ಮುದಿದ ಚಂದ್ರಕಲೆಯು ಹರ್ಷ ವಿಹ್ವಲತೆಗಳೊಂದಿಗೆ

ಉಟ್ಟುಕೊಂಡ ಕಾಡಾನೆಯ ತೊಗಲು ಸಂಧ್ಯೆರುಧಿರವು
ಜಿನುಗುತಿರಲು, ಸಡಿಲುಬಿದ್ದು ಅತ್ತಯಿತ್ತ ಹೊರಳಲು

ಮೈಮರೆಯುತ ಕುಣಿಕುಣಿಯಲು ಬೆಳದಿಂಗಳ ಭಸ್ಮವು
ಉದುರಿಯುದುರಿ ಬೀಳುತಿಹುದು ನನ್ನ ಮುಗುದ ಅಸುವೊಳು

ಮೇಲ್ಗಡೆಯ ದೃಶ್ಯವಾಗಿ ಸುತ್ತುವ ನೀಹಾರಿಕ-
ಪದರುಗಳಲಿ ನವನವೀನ ಸೌರವ್ಯೂಹ ಸಂಕುಲ-

ತೆರೆಯುತಿರಲುಬಹುದು ಭಾರಿ ಬೆರಗು ಮತ್ತು ಸಂತಸ
ಭರ್ತಿಗೊಂಡ ನಯನಗಳು ನೋಡಲು ಶಿವತಾಂಡವ !

ತಮವ ಮತ್ತು ರಜವ ಕಿತ್ತು ನಾನು ದೂರಕೆಸೆಯಲು
ನನ್ನ ಆತ್ಮ ಮುಳುಗುತಿಹುದು ಆ ಸುಮಧುರ ಸುಧೆಯೊಳು

ಅರಳುತಿಹುದು ಸಂಜೆಮಲ್ಲಿಗೆಯಲ್ಲಿ ನನ್ನ ವಿಸ್ಮಯ
ಅಲೆಗಳನ್ನು ಹೊಮ್ಮಿಸುತಿಹುದೆಲರೊಳೆನ್ನ ಸಂತಸ

ಎವೆಯ ಮುಚ್ಚಿ ಮುಚ್ಚಿ ದಿಟ್ಟಿಸುತ್ತ ನಿಂತು ಬಿಟ್ಟೆ ನಾ
ಸಂಜೆಯಾ ಮನೋಜ್ಞ ರೌದ್ರ ವಿಶ್ವರೂಪ ನರ್ತನ

ನಯನವೊಂದು ಭೂತಕಾಲ ಒಂದು ವರ್ತಮಾನವು
ಮತ್ತಿನೊಂದು ಮುಂದೆ ತೆರೆಯಲಿಹ ಭವಿಷ್ಯಕಾಲವು

ಲಯವು ಸ್ಥಿತಿಯು ಸರ್ಗಾತ್ಮಕನೈಕಭಾವ ನಿರ್ಮಲ
ಕರುಣವೀರ ಧರ್ಮವೀರ ರತಿಕಲಿತ ಸಮುಜ್ವಲ

ತ್ರ್ಯಕ್ಷನೆಂಟು ದಿಕ್ಕುಗಳನು ಎಂಟು ಕರಗಳಲಿ ಕ್ಷಣ-
ಕ್ಷಣ ವಿಕಾಸ ಹೊಂದುವಂತೆ ನಿಖಿಲಲೋಕ ಜೀವನ

ಕುಣಿಯುತಿಹನು ಮುಕ್ತಛಂದ ತಾಳ ಮತ್ತು ಲಯಗಳ
ಮೇಳಯಿಸಿಹ ಪಂಚಭೂತ ರಾಗಗಳನು ಹಾಡುತ

ಒಂದು ಲೋಲ ಚಲನೆ ಕೂಡ ಭಾವಸೊಬಗ ವ್ಯಂಜಕ-
ವಾಗುವಂತೆ; ಆಗದಂತೆ ಇನಿತು ಭಾವ ಭಂಜಕ

ಸರ್ಗ ಯುಗ್ಮಲಾಸ್ಯಹರ್ಷದಲ್ಲಿ ಸತತ ಮಗ್ನನು
ಅರ್ಧನಾರಿ ಅರ್ಧ ನರನು ಆಗಿರುವನು ಪೂರ್ಣನು

ಕಠಿನ ಮೃದುಲ ರೌದ್ರ ಸೌಮ್ಯ ತಾಮಸ ಮೇಣ್ ಸಾತ್ವಿಕ
ಭಾವಸೊಬಗ ಮೆರೆಯಿಸುವ ಸನಾತನನಟನೋತ್ಸವ

ಮುಂಬರಿಯೆ ಯುಗಾಂತರಗಳ ಗಗ್ಗರಗಳು ಸಿಡಿಯುತಾ
ಚದುರುತಿರುವ ಪರಿಯದು ಪರಿಭಾವಿಸೆ ಬಲು ಅದ್ಭುತ !

ಮೃತಿಯ ಮಸ್ತಕದಲಿ ಹೆಜ್ಜೆಯಿರಿಸಿಯಟ್ಟಹಾಸವ
ಮೊಳಗಿಸುತ್ತ ವಿಶ್ವಾತ್ಮವು ಗೈಯುತಿಹುದು ನಟನವ

ಬಿರಿಯುತಿಹುದು ಬ್ರಹ್ಮಾಂಡವು ಈ ತಾಂಡವದಿಂದಲೆ
ಕಡಲಿನೆಲೆಯುಹೊರಳಿ ಹೊಮ್ಮಿ ಅಡಿಗಡಿಗುರುಳುತ್ತಿದೆ

ತರತರದ ಶಿಖರಗಳಾಗಿ ಸುರುಟುತಿಹುದು ತೀರವು
ಬೆಟ್ಟಗಳಲ್ಲಿ ತಾಳಬದ್ಧ ಪಾತಪತನ ಸಾಗಲು

ಮಿಡುಕುತಿಹುದು ಬೆರಳು ಹಾಕುತಿರುವ ಚಿಟಿಕೆ ತಾಳವು
ಜೀವಸ್ಪಂದವಾಗಿ ಸರ್ವ ಚರಾಚರಗಳಲ್ಲಿಯೂ

ಕೆಲವುಗಳಲಿ ಆ ತಾಳವು ತೀರ ತೀರ ಸೂಕ್ಷ್ಮವು
ಆಗಬಹುದು ಕೆಲವುಗಳಲಿ ಬಲು ಗಂಭೀರ ಮೊರೆತವು

ಕಿವಿಯು ಒಮ್ಮೆ ಬಿರಿದು ಎಲದಲ್ಲು ಆದಿತಾಳವ
ಕೇಳಿ ನನ್ನೊಳಿರುವ ನಾನು ಒಮ್ಮೆ ಕರಗಿ ಬಿಟ್ಟರೆ

ಬಿಟ್ಟರೆನ್ನ ಬಾಳ್ವಗಾನ ವಿಶ್ವವಶ್ಯ ಶಂಕರಾ-
ಭರಣರಾಗವಾಗಿ ಹೊಮ್ಮಬಹುದು ಬಾನಿನೆತ್ತರ

ಮರಣ ಬಂದು ನನ್ನ ಮುಂದೆ ಆ ಗಾನವ ಕೇಳಲು
ಕೂರಬಹುದು ನುಡಿಸಬಹುದು ಚರಣಗಳನು ಯುಗಗಳು

ಏಕ ಮೂಲ ಶ್ರುತಿಯೊಳೇ ಅನೇಕ ಜೀವ ಸ್ವರಗಳ
ಮೇಳಯಿಸುವ ಧೀರಗಾನವಹುದು ನನ್ನ ಗಾಯನ

ಎವೆಯ ಮುಚ್ಚಿ ಮುಚ್ಚಿ ದಿಟ್ಟಿಸುತ್ತ ನಿಂತು ಬಿಟ್ಟೆ ನಾ
ಸಂಜೆ ಹೊತ್ತು ಆ ಮನೋಜ್ಞ ನೀಲಲೋಹಿತ ನಟನ

ಅಗಲವಾದ ಎದೆಯ ಮೇಲೆ ಮುಗಿಲ ನೀಲವೇಣಿಯ
ಹಬ್ಬಿಸುತ್ತ ತಲೆಯೊರಗಿಸಿ ಕಮ್ಮನೆ ನಿದು ಸುಯ್ಯುತ

ಬರಿಯ ಒಂದು ತಲೆಬುರುಡೆಯ ತೆರದಿ ಧರಾತಲವನೆ
ಮಗುಚಬಲ್ಲ ನೀನು ನಕ್ಕುಬಿಟ್ಟೆಯಷ್ಟೆ ಗೊಳ್ಳನೆ

ತಲೆಯ ಕುಲುಕಿಸುತ್ತ ಬರುವ ಅಸುರಾಹಂಕಾರವ
ದರ್ಪರಹಿತ ಮಾಡಿ ಕೆಡಹಿ ಅವರ ಮೇಲೆ ನವನವ

ನಟನವನ್ನು ಮಾಡು ಪ್ರಭೋ ಮೃತ್ಯುಂಜಯ ಚಿನ್ಮಯ
ತೊಡಗು ನೀನು ಸಂಹಾರದ ಜೊತೆ ಜೊತೆಗೇ ಸೃಷ್ಟಿಯ

ಎವೆಯ ಮುಚ್ಚಿ ಮುಚ್ಚಿ ದಿಟ್ಟಿಸುತ್ತ ನಿಂತು ಬಿಟ್ಟೆ ನಾ
ಸಂಜೆಯಾ ಸದಾಶಿವನ ಪ್ರಚಂಡ ರಮ್ಯ ತಾಂಡವ.

ಕೆ.ಕೆ. ನಾಯರ್
ಮಿಗ್ ನಂ. ೧೨೬, ಹುಡ್ಕೋ ಕಾಲೋನಿ, ಮಣಿಪಾಲ್ - ೫೭೬ ೧೦೪
ದೂರವಾಣಿ : ೨೫೭೧೬೨೪

# ಸಾಹಿತ್ಯ ಇತಿಹಾಸದ ಗುರಿಗಳು ಕಾರ್ಯಗಳು ಮತ್ತು ವಿಧಾನಗಳು

ಮೂಲ : ಪಿ.ಎನ್. ಮೆಡ್‌ವೆಡೇವ್ ಮತ್ತು ಎಂ.ಎಂ. ಬಖ್ತಿನ್
ಅನುವಾದ : ಡಾ. ರಾಜೀವ ಪೂರ್ಣಚಂದ್ರ

ಸಾಹಿತ್ಯ ಕೃತಿ ಅದರ ಸಾಹಿತ್ಯಕ ಪರಿಸರದ ಒಂದು ಪ್ರತ್ಯಕ್ಷ ಭಾಗ ; ಅದು ಯುಗವೊಂದರ ಸಾಮಾಜಿಕವಾಗಿ ಕ್ರಿಯಾಶೀಲವಾದ ಎಲ್ಲಾ ಸಾಹಿತ್ಯ ಕೃತಿಗಳ ಮತ್ತು ಸಮೂಹದ ಒಟ್ಟು ಮೊತ್ತ. ಐತಿಹಾಸಿಕವಾಗಿ ಸಾಹಿತ್ಯ ಕೃತಿಯು ಸಾಹಿತ್ಯಕ ಪರಿಸರದ ಮೇಲೆ ಪೂರ್ಣವಾಗಿ ಅವಲಂಬಿತವಾದ ಮತ್ತು ಆ ಕಾರಣದಿಂದಲೇ ಅಂತಹ ಪರಿಸರದ ಅವಿಭಾಜ್ಯ ಅಂಗವಾಗಿದೆ. ತನ್ನ ಪರಿಸರದಲ್ಲಿ ನಿರ್ದಿಷ್ಟ ಸ್ಥಾನ ಹೊಂದಿರುವ ಸಾಹಿತ್ಯ ಕೃತಿ, ಆ ಪರಿಸರದ ಪ್ರಭಾವಗಳಿಂದ ನೇರವಾಗಿ ನಿರ್ಧರಿತವಾಗುತ್ತದೆ. ಈ ರೀತಿ ಸಾಹಿತ್ಯ ಪರಿಸರದಲ್ಲಿ ನಿರ್ದಿಷ್ಟ ಸ್ಥಾನ ಹೊಂದಿರುವ ಕೃತಿ ಆ ಪರಿಸರದ ವಿಮುಖವಾಗಬಲ್ಲ ಶಕ್ತಿ ಹೊಂದಿರುತ್ತದೆ ಮತ್ತು ಅಂತಹ ಪರಿಸರದ ಸಮಗ್ರತೆ ಮತ್ತು ಕ್ರಮಬದ್ಧತೆಗೆ ಹೊರತಾಗಿರುತ್ತದೆ ಎಂದು ಭಾವಿಸುವುದು ಅವಿವೇಕದ ಮಾತಾಗುತ್ತದೆ.

ಆದರೆ ಸಾಹಿತ್ಯ ಪರಿಸರವು ಕೂಡ ಒಂದು ಕಾಲಘಟ್ಟದ ಸೈದ್ಧಾಂತಿಕ ಪರಿಸರ ಮತ್ತು ನಿರ್ದಿಷ್ಟ ಸಾಮಾಜಿಕ ಸಮಗ್ರತೆಯ ಮೇಲೆ ಅವಲಂಬಿತವಾಗಿರುವುದಲ್ಲದೆ ಅದರ ಅವಿಭಾಜ್ಯ ಅಂಗವಾಗಿರುತ್ತದೆ. ತನ್ನ ಪರಿಪೂರ್ಣತೆಯಲ್ಲಿ ಮತ್ತು ಪ್ರತಿಯೊಂದು ಅಂಶದಲ್ಲೂ ಕೂಡ ಸಾಹಿತ್ಯ ಸೈದ್ಧಾಂತಿಕ ಪರಿಸರದಲ್ಲಿ ಒಂದು ನಿರ್ದಿಷ್ಟ ಸ್ಥಾನವನ್ನು ಹೊಂದಿದ್ದು ಅದರ ಸಂಬಂಧದಲ್ಲಿ ತನ್ನ ನೆಲೆಯನ್ನು ಗುರುತಿಸಿಕೊಳ್ಳುತ್ತದೆ. ಅದೇ ಪ್ರಕಾರವಾಗಿ, ಸೈದ್ಧಾಂತಿಕ ಪರಿಸರ ಪೂರ್ಣವಾಗಿ ಮತ್ತು ಆಂಶಿಕವಾಗಿ ಸಾಮಾಜಿಕ-ಆರ್ಥಿಕ ಪರಿಸರದ ಮೇಲೆ ಅವಲಂಬಿತವಾಗಿರುತ್ತದೆ. ಆದ್ದರಿಂದ ನಿರ್ದೇಶಿಸಲ್ಪಡುತ್ತದೆ ಮತ್ತು ಪೂರ್ಣವಾಗಿ ಅಭಿವೃದ್ಧಿಯ ಸಾಮಾಜಿಕ-ಆರ್ಥಿಕ ನಿಯಮಗಳಿಂದ ವ್ಯಾಪಿತವಾಗಿರುತ್ತದೆ.

ಈ ರೀತಿ ನಾವು ಅಂತರ್ ಸಂಬಂಧಗಳನ್ನು ಮತ್ತು ಪರಸ್ಪರ ಪ್ರಭಾವಗಳಿಗೆ ಸತತವಾಗಿ ಒಳಗಾಗುವ ಸಂಕೀರ್ಣ ವ್ಯವಸ್ಥೆಯನ್ನು ಹೊಂದಿದ್ದೇವೆ. ಈ ವ್ಯವಸ್ಥೆಯ ಪ್ರತಿಯೊಂದು ಘಟಕವು ಹಲವಾರು ವಿಧಗಳಲ್ಲಿ ಅನನ್ಯವಾಗಿದ್ದರೂ ಅವು ಅಂತರ್ ಸಂಬಂಧವುಳ್ಳ ಅನೇಕ ಸಮಗ್ರತೆಗಳ ಪರಿಕಲ್ಪನೆಯ ಪರಿಧಿಯಲ್ಲಿ ನಿರ್ಧರಿತವಾಗುತ್ತವೆ.

ಯಾವುದೇ ಕೃತಿಯನ್ನು ಸಾಹಿತ್ಯದ ಸಮಗ್ರತೆಯ ಪರಿಧಿಯಾಚೆಯಲ್ಲಿ ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ. ಆದರೆ ಸಾಹಿತ್ಯದ ಈ ಸಮಗ್ರತೆ ಮತ್ತು ಅದರ ಘಟಕಗಳಾದ ವೈಯಕ್ತಿಕ ಕೃತಿಗಳನ್ನು ಸೈದ್ಧಾಂತಿಕ ನೆಲಗಟ್ಟಿನ ಪರಿಧಿಯಾಚೆಗೆ ಅರ್ಥೈಸುವುದು ಅಸಾಧ್ಯ. ಈ ಸೈದ್ಧಾಂತಿಕ ನೆಲಗಟ್ಟನ್ನು ಪೂರ್ಣವಾಗಿಯಾಗಲಿ ಅಥವಾ ಆಂಶಿಕವಾಗಿಯಾಗಲಿ ಅರ್ಥ ಮಾಡಿಕೊಳ್ಳಲು ಅಭಿವೃದ್ಧಿಯ ಸಾಮಾಜಿಕ-ಆರ್ಥಿಕ ನಿಯಮಗಳು ಅನಿವಾರ್ಯ.

ಹೀಗೆ ಸಾಹಿತ್ಯದ ಮೇಲ್ಮೈ ರೂಪವನ್ನು ಅಭಿವ್ಯಕ್ತಿಸಲು ಮತ್ತು ನಿರೂಪಿಸಲು ಸೈದ್ಧಾಂತಿಕ ರೂಪರೇಷೆಯನ್ನು ಬಹಿರಂಗಗೊಳಿಸುವುದು ಅವಶ್ಯಕ. ಈ ಎರಡೂ ಕೂಡ ಮತ್ತೊಂದರ ಸಹಾಯವಿಲ್ಲದೆ ಅಸ್ತಿತ್ವದಲ್ಲಿರಲು ಸಾಧ್ಯವಿಲ್ಲ ಹಾಗು ನಾವು ಸೈದ್ಧಾಂತಿಕ ವ್ಯವಸ್ಥೆಯನ್ನು ಬಹಿರಂಗಪಡಿಸುವ ಪ್ರಕ್ರಿಯೆಯಲ್ಲಿ ಸಾಮಾಜಿಕ-ಆರ್ಥಿಕ ಗುಣಲಕ್ಷಣಗಳನ್ನು ಕಡೆಗಣಿಸಲಾಗುವುದಿಲ್ಲ.

ಈ ಎಲ್ಲಾ ಪರಿಸ್ಥಿತಿಗಳನ್ನು ಪರಿಗಣನೆಗೆ ತೆಗೆದುಕೊಂಡಾಗ ಮಾತ್ರ ಕಲಾಕೃತಿಯೊಂದರ ಯತಾರ್ಥ ಐತಿಹಾಸಿಕ ಅಭ್ಯಾಸ ಸಾಧ್ಯ. ಈ ಸೈದ್ಧಾಂತಿಕ ವಿದ್ಯಮಾನದ ಪರಿಕಲ್ಪನೆಯ ಸಂಪೂರ್ಣ ಸರಣಿಯ ಯಾವುದೇ ಕೊಂಡಿಯನ್ನು ಉಪೇಕ್ಷಿಸಲು ಸಾಧ್ಯವಿಲ್ಲ ಮತ್ತು ಯಾವುದೇ ಒಂದು ಕೊಂಡಿಯನ್ನು ಮತ್ತೊಂದರ ಸಹಾಯವಿಲ್ಲದೆ ಅರ್ಥ ಮಾಡಿಕೊಳ್ಳಲಾಗದು. ಸಾಹಿತ್ಯ ಕೃತಿಯೊಂದನ್ನು ಅದರ ಸೈದ್ಧಾಂತಿಕ ಪರಿಸರದ ನೇರವಾದ ಮತ್ತು ಏಕೈಕ ಉತ್ಪನ್ನವೆಂದು ಅಧ್ಯಯನ ಮಾಡುವುದು ಅಸ್ವೀಕೃತಾರ್ಹ. ಸಾಹಿತ್ಯ ಕೃತಿಯೊಂದು ತನ್ನ ಸಾಹಿತ್ಯ ಪರಂಪರೆಯಲ್ಲಿ ಹೊಂದಿರುವ ಸ್ಥಾನ ಮತ್ತು ಅದು ಪರಂಪರೆಯ ಮೇಲೆ ಅವಲಂಬಿತವಾಗಿರುವ ಮಟ್ಟವನ್ನು ಅರ್ಥ ಮಾಡಿಕೊಳ್ಳದ ಹೊರತು ಅದು ಸೈದ್ಧಾಂತಿಕ ಪರಿಸರದಲ್ಲಿ ಹೊಂದಿರುವ ಮಹತ್ವವನ್ನು ಅರ್ಥ ಮಾಡಿಕೊಳ್ಳುವುದು ಅಸಾಧ್ಯ. ಇವೆಲ್ಲಕ್ಕಿಂತ ಮಿಗಿಲಾಗಿ ಈ ಎರಡು ಪರಿಸರದ ನಡುವಿನ ಸಂಬಂಧವನ್ನು ಕೃತಿಯೊಂದರ ನೆಲಗಟ್ಟಿನಿಂದ ಬೇರ್ಪಡಿಸಿ ಕೇವಲ ಸಾಮಾಜಿಕ-ಆರ್ಥಿಕ ಪರಿಸರದ ಹಿನ್ನೆಲೆಯಲ್ಲಿ ಅದನ್ನು ಅಧ್ಯಯನ ಮಾಡುವುದು ಹೆಚ್ಚು ಅನಪೇಕ್ಷಣೀಯ.

ಸಾಹಿತ್ಯ ಇತಿಹಾಸದ ಸಂಕೀರ್ಣವಾದ ಗುರಿಗಳು ಮತ್ತು ವಿಧಾನಗಳು ಈ ಮೇಲಿನ ಎಲ್ಲಾ ಅಂಶಗಳಿಂದ ನಿರ್ಧರಿತವಾಗುತ್ತವೆ.

ಸಾಹಿತ್ಯ ಇತಿಹಾಸವು ಕೃತಿಯೊಂದಕ್ಕೆ ಜನ್ಮ ನೀಡುವ ಸಾಹಿತ್ಯ ಪರಿಸರ, ಅಂತಹ ಸಾಹಿತ್ಯ ಪರಿಸರಕ್ಕೆ ಎಡೆ ಮಾಡಿಕೊಡುವ ಸೈದ್ಧಾಂತಿಕ ಪರಿಸರ ಮತ್ತು ಸೈದ್ಧಾಂತಿಕ ಪರಿಸರದ ಮೂಲವಾದ ಸಾಮಾಜಿಕ ಮತ್ತು ಆರ್ಥಿಕ ಪರಿಸರಗಳೊಡನೆ ಸಂಬಂಧ ಹೊಂದಿರುತ್ತದೆ. ಸಾಹಿತ್ಯ ಇತಿಹಾಸಕಾರನ ಕಾರ್ಯವು ಅಂತಹ ಸಿದ್ಧಾಂತಗಳ ಇತಿಹಾಸ ಮತ್ತು ಸಾಮಾಜಿಕ ನೆಲಗಟ್ಟಿನ ನಡುವಿನ ಪರಸ್ಪರ ಸಂಬಂಧ ಮತ್ತು ಪ್ರಭಾವಗಳನ್ನು ವಿಶದಪಡಿಸುವುದಾಗಿದೆ.

ಸಾಹಿತ್ಯವನ್ನು ಈ ಪ್ರಕಾರದ ವಿವಿಧ ಕ್ಷೇತ್ರಗಳ ಮತ್ತು ಸಾಮಾಜಿಕ-ಆರ್ಥಿಕ ಸಮಗ್ರತೆಯ ಅಂತರ್ ಸಂಬಂಧದ ಆಧಾರದ ಮೇಲೆ ಅಭ್ಯಾಸ ಮಾಡಿದಾಗ ಅದರ ವೈಯಕ್ತಿಕತೆ ನಷ್ಟವಾಗದಂತೆ ತಡೆಯಬಹುದು. ಸಾಹಿತ್ಯವೊಂದರ ವೈಯಕ್ತಿಕತೆಯನ್ನು ಪರಸ್ಪರ ಕ್ರಿಯೆ ಮತ್ತು ಪರಿಣಾಮಗಳ ಪ್ರಕ್ರಿಯೆ ಕಾರ್ಯನಿರ್ವಹಿಸುವ ವಿಧಾನವನ್ನು ಅರಿಯುವುದರ ಮೂಲಕ ಮಾತ್ರ ನಿರೂಪಿಸಲು ಸಾಧ್ಯ.

ಸಾಹಿತ್ಯ ಕೃತಿಯು ತನ್ನಲ್ಲಿ ತೀವ್ರವಾದಂತಹ ಸೈದ್ಧಾಂತಿಕ ಅಂಶಗಳನ್ನು ಒಳಗೊಂಡಿದ್ದಾಗ ಮಾತ್ರ ಅಂತಹ ಪರಿಸರದೊಡನೆ ಬಲಿಷ್ಠ ಸಂಬಂಧವನ್ನು ಹೊಂದಿರಬಲ್ಲದು. ಇತಿಹಾಸಕಾರ ಸಾಹಿತ್ಯ ಕೃತಿಯೊಂದು ಸೈದ್ಧಾಂತಿಕ ಪರಿಸರದ ಪ್ರಮುಖ ಅಂಶವಾಗಿರುತ್ತದೆ ಎಂಬುದನ್ನು ಎಂದಿಗೂ ಮರೆಯಬಾರದು.

ಸಾಹಿತ್ಯ ಕೃತಿಯೊಂದು ಪ್ರಮುಖವಾಗಿ ಸಾಹಿತ್ಯ ಪರಿಸರದಿಂದಲೇ ನೇರವಾಗಿ ನಿರ್ಧರಿಸಲ್ಪಡುತ್ತದೆ ಎಂಬ ಅಂಶ ಮಾರ್ಕ್ಸ್‌ವಾದಿ ಇತಿಹಾಸಕಾರನನ್ನು ಕ್ಷೋಭೆಗೀಡು ಮಾಡುವ ಅವಶ್ಯಕತೆಯಿಲ್ಲ. ಮಾರ್ಕ್ಸ್‌ವಾದವು ಸಾಹಿತ್ಯದ ಮೇಲೆ ಪರಿಣಾಮ ಬೀರುವ ಎಲ್ಲಾ ಸಿದ್ಧಾಂತಗಳಿಗೂ ಸಮಾನ ಅವಕಾಶ ನೀಡುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ, ಅದು (ಮಾರ್ಕ್ಸ್‌ವಾದ) ಮೂಲ ತಳಹದಿಯ ಎಲ್ಲಾ ಸಿದ್ಧಾಂತಗಳೂ ಬೀರುವ ಪ್ರತಿ ಪರಿಣಾಮವನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಪರಿಣಾಮವಾಗಿ ಮಾರ್ಕ್ಸ್‌ವಾದ ಸಾಹಿತ್ಯವೊಂದು ಸಾಹಿತ್ಯಕೃತಿಯ ಮೇಲೆ ಬೀರುವ ಪ್ರಭಾವವನ್ನು ಬೇಷರತ್ ಒಪ್ಪಿಕೊಳ್ಳುತ್ತದೆ. ಆದಾಗ್ಯೂ, ಸಾಹಿತ್ಯದ ಮೇಲೆ ಮತ್ತೊಂದು ಸಾಹಿತ್ಯದ ಪ್ರಭಾವ ಒಂದು ಸಾಮಾಜಿಕ-ಪರಿಣಾಮವಾಗಿರುತ್ತದೆ. ಸಾಹಿತ್ಯ ಬೇರೆಲ್ಲಾ ಸಿದ್ಧಾಂತಗಳಿಗಿಂತ ಸಂಪೂರ್ಣವಾಗಿ ಸಾಮಾಜಿಕವಾದುದ್ದಾಗಿರುತ್ತದೆ. ಯಾವುದೇ ಒಂದು ಸಾಹಿತ್ಯ ಕೃತಿ ತನ್ನ ಸಾಮಾಜಿಕ ಮತ್ತು ಆರ್ಥಿಕ ತಳಹದಿಯ ಅಭಿವ್ಯಕ್ತಿಯಾಗದಿದ್ದರೆ, ಅಂತಹ ಕ್ರಿಯೆ ಆ ಕೃತಿಯ ಸಮಸ್ಯೆಯಾಗಿ ಪರಿಣಮಿಸಿ ಅದು ಬೇರೆಲ್ಲಾ ಕ್ಷೇತ್ರಗಳಿಂದ ಒಂಟಿಯಾಗುಳಿಯುವ ಮತ್ತು ಸಂಬಂಧ ಕಳಚಿಕೊಳ್ಳುವ ಅಪಾಯವನ್ನೊಡ್ಡುತ್ತದೆ. ಈ ಸಾಮಾಜಿಕ ತಳಹದಿಯ ಸಾಹಿತ್ಯ ಕೃತಿಯೊಂದನ್ನು ರಹಸ್ಯವಾಗಿ ಅದರ ಪರಿಸರದಿಂದ ಬೇರ್ಪಡಿಸಿ ಅದರ ವಸ್ತುವನ್ನು ನಿರ್ಧರಿಸುವುದಿಲ್ಲ. ಬದಲಾಗಿ ಅದು ಸಾಹಿತ್ಯ ಹಾಗೂ ಸೈದ್ಧಾಂತಿಕ ಪರಿಸರದ ಮೇಲೆ ಪರಿಣಾಮ ಬೀರುತ್ತದೆ. ಅದು (ಸಾಮಾಜಿಕ ಮತ್ತು ಆರ್ಥಿಕ ತಳಹದಿ) ಸೈದ್ಧಾಂತಿಕ ಪರಿಸರದೊಡನೆ ಬೇರ್ಪಡಿಸಲಾಗದಂತಹ ನಂಟನ್ನು ಹೊಂದಿದ್ದು ಸಮಗ್ರ ಪರಿಸರದ ಒಂದು ಅವಿಭಾಜ್ಯ ಅಂಗವಾಗಿರುತ್ತದೆ.

ವಾಸ್ತವವಾಗಿ, ಅಭಿವೃದ್ಧಿಯ ಸಾಮಾಜಿಕ-ಆರ್ಥಿಕ ನಿಯಮಗಳು ಸಾಮಾಜಿಕ ಮತ್ತು ಸೈದ್ಧಾಂತಿಕ ಜೀವನದ ಮೂಲಾಂಶಗಳ ಮೇಲೆ ಆಂತರಿಕವಾಗಿ ಮತ್ತು ಬಾಹ್ಯವಾಗಿ ಪರಿಣಾಮ ಬೀರುತ್ತವೆ. ಯಾವುದೇ ವಿಜ್ಞಾನವು ಸಾಮಾಜಿಕ ಸಂಗತಿಯಾಗಿ ಪರಿವರ್ತನೆಯಾಗುವ ಪ್ರಕ್ರಿಯೆಯಲ್ಲಿ ತನ್ನ ನೈಜ ಗುಣವನ್ನು ತ್ಯಾಗ ಮಾಡುವ ಅಗತ್ಯವಿಲ್ಲ. ಹಾಗೆ ಮಾಡಿದಲ್ಲಿ ಅದು ಒಂದು ಅವಾಸ್ತವ ವಿಜ್ಞಾನವಾಗುತ್ತದೆ.

ಸಾಹಿತ್ಯ ಇತಿಹಾಸಕಾರನು ತನ್ನ ಪರಿಸರವನ್ನು ಸ್ವಯಂಪರಿಪೂರ್ಣವಾದ ವ್ಯವಸ್ಥೆಯಾಗಿ ಪರಿಗಣಿಸದಂತಹ ಎಚ್ಚರಿಕೆಯನ್ನು ವಹಿಸಬೇಕು. ಪೂರ್ಣವಾಗಿ ಸ್ವತಂತ್ರವಾದ ಸಾಹಿತ್ಯದ ಪರಿಕಲ್ಪನೆ

ಸಂಪೂರ್ಣವಾಗಿ ಅಸ್ತೀಕೃತಾರ್ಹವಾದರೂ ವ್ಯವಸ್ಥೆಯೊಂದರ ವೈಯಕ್ತಿಕತೆ ಅದರ ಅಂತರ್‌ಕ್ರಿಯೆ ಮತ್ತು ವಿವಿಧ ಘಟಕಗಳ ನಡುವಿನ ಸಂಬಂಧದ ಮೇಲೆ ಅವಲಂಬಿತವಾಗಿರುತ್ತದೆ.

ಸಾಹಿತ್ಯದ ಮೇಲೆ ಪ್ರಭಾವ ಬೀರುವ ಯಾವುದೇ ಬಾಹ್ಯ ಅಂಶಗಳು ಕೇವಲ ಸಾಹಿತ್ಯಕ ಪರಿಣಾಮಗಳನ್ನುಂಟು ಮಾಡಬಲ್ಲದಷ್ಟೇ ಅಲ್ಲದೆ ಅದರ ಮುಂದಿನ ಬೆಳವಣಿಗೆಗಳಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತವೆ. ಈ ಆಂತರಿಕ ಅಂಶಗಳು ಇತರೆ ಸೈದ್ಧಾಂತಿಕ ಕ್ಷೇತ್ರಗಳ ಬಾಹ್ಯ ಅಂಶಗಳಾಗಿ ಪರಿಣಮಿಸುತ್ತವೆ.

ಆದಾಗ್ಯೂ ಈ ಎಲ್ಲಾ ಅಂಶಗಳ ದ್ವಂದ್ವಾತ್ಮಕ ಮುಖಾಮುಖಿ ಅಭಿವೃದ್ಧಿಯ ಸಮಗ್ರ ಸಾಮಾಜಿಕ ನಿಯಮಗಳ ಪರಿಧಿಯಲ್ಲಿ ನಡೆಯುತ್ತದೆ. ಈ ಸೈದ್ಧಾಂತಿಕ ಸೃಷ್ಟಿ ಕ್ರಿಯೆಯು ಈ ನಿಯಮಗಳಿಗೆ ಹೊರತಾಗಿರಲು ಸಾಧ್ಯವಿಲ್ಲ ಮತ್ತು ಸಾಮಾಜಿಕ ನಿಯಮಗಳು ಸೈದ್ಧಾಂತಿಕ ನಿರ್ಮಾಣದ ಪ್ರತಿಯೊಂದು ಘಟ್ಟವನ್ನು ವ್ಯಾಪಿಸಿಕೊಂಡಿರುತ್ತವೆ. ಈ ದ್ವಂದ್ವಾತ್ಮಕ ಅಂತರ್‌ಕ್ರಿಯೆಯ ನಿರಂತರ ಪ್ರಕ್ರಿಯೆ ಕಲಾಕೃತಿಯೊಂದರ ವೈಯಕ್ತಿಕತೆಯನ್ನು ಸತತವಾಗಿ ಕಾಪಾಡಿಕೊಳ್ಳುತ್ತದೆ. ಇದರ ಪರಿಣಾಮವಾಗಿ ಕಲೆ ಎಂದಿಗೂ ಕಲೆಯಾಗಿ ಉಳಿದುಕೊಳ್ಳುತ್ತದೆ. ಅದೇ ರೀತಿ ಬೆಳವಣಿಗೆಯ ಸಾಮಾಜಿಕ ನಿಯಮಗಳು ತಮ್ಮ ಸಮಗ್ರತೆ ಮತ್ತು ನಿರ್ಣಾಯಕ ಪಾತ್ರವನ್ನು ಎಂದಿಗೂ ಕಳೆದುಕೊಳ್ಳುವುದಿಲ್ಲ.

ವಿವಿಧ ಸೈದ್ಧಾಂತಿಕ ವಿಚಾರಗಳ ದ್ವಂದ್ವಾತ್ಮಕ ಪರಿಕಲ್ಪನೆ ಮತ್ತು ಅಂತರ್‌ಕ್ರಿಯೆ ಆಧಾರದ ಮೇಲೆ ಮಾತ್ರ ಸಾಹಿತ್ಯ ಇತಿಹಾಸದ ನೈಜ ಅಧ್ಯಯನ ಸೃಷ್ಟಿಯಾಗಬಲ್ಲದು.

ಆದರೂ ಸಾಹಿತ್ಯ ವಿದ್ವತ್‌ನ ಗುರಿ ಕೇವಲ ಸಾಹಿತ್ಯ ಇತಿಹಾಸದ ಅಧ್ಯಯನವೊಂದೇ ಅಲ್ಲ. ಸಾಹಿತ್ಯ ಇತಿಹಾಸ ಕಾವ್ಯಾತ್ಮಕ ರಚನೆಯ ವೈಯಕ್ತಿಕತೆಯನ್ನು ವಿದ್ವತ್ ಮುಂಗಾಣುತ್ತದೆ. ಅಂದರೆ ಸಾಹಿತ್ಯ ಇತಿಹಾಸ ಸಮಾಜ ಶಾಸ್ತ್ರೀಯ ಕಾವ್ಯಮೀಮಾಂಸೆಯನ್ನು ಅಪೇಕ್ಷಿಸುತ್ತದೆ.

ಸಾಹಿತ್ಯ ಕೃತಿ ಎಂದರೇನು ? ಅದರ ರಚನೆ ಹೇಗಿರುತ್ತದೆ? ಈ ರಚನೆಯ ಮೂಲಾಂಶಗಳು ಯಾವುವು ಮತ್ತು ಅವುಗಳ ಕಲಾತ್ಮಕ ಕ್ರಿಯೆಗಳೇನು? ಸಾಹಿತ್ಯ ಪ್ರಕಾರ, ಶೈಲಿ, ಕಥಾಹಂದರ, ವಸ್ತು, ನಾಯಕ, ಛಂದಸ್ಸು, ಲಯಗಳೆಂದರೇನು ? ಈ ಎಲ್ಲಾ ಪ್ರಶ್ನೆಗಳು ಮತ್ತು ವಿಶೇಷವಾಗಿ ಸಾಹಿತ್ಯದ ವಸ್ತುವಿನಲ್ಲಿ ಸಿದ್ಧಾಂತ ಪ್ರತಿಫಲನಗೊಳ್ಳುವ ವಿಧಾನ ಮತ್ತು ಕೃತಿಯ ರಚನೆಯಲ್ಲಿ ಈ ಸಿದ್ಧಾಂತದ ಪ್ರತಿಫಲನದ ಕಾರ್ಯ ಸಮಾಜಶಾಸ್ತ್ರೀಯ ಕಾವ್ಯಮೀಮಾಂಸೆಯ ಅವಿಭಾಜ್ಯ ಅಂಗವಾಗಿದೆ. ಸಮಾಜಶಾಸ್ತ್ರೀಯ ಕಾವ್ಯಮೀಮಾಂಸೆ ಒದಗಿಸಬಹುದಾದ ಉತ್ತರಗಳನ್ನು ಸಾಹಿತ್ಯ ಇತಿಹಾಸ ಮುಂಗಾಣಬಲ್ಲದು. ಅಂತಹ ಇತಿಹಾಸ ತಾನು ಆವಿಷ್ಕರಿಸಬಯಸುವ ಸೈದ್ಧಾಂತಿಕ ಸಂರಚನೆಗಳ ಮೂಲದ್ರವ್ಯದ ನಿರ್ದಿಷ್ಟ ಜ್ಞಾನದೊಂದಿಗೆ ತನ್ನ ಕಾರ್ಯವನ್ನು ಆರಂಭಿಸಬೇಕಾಗುತ್ತದೆ.

ಸಮಾಜಶಾಸ್ತ್ರದ ಕಾವ್ಯಮೀಮಾಂಸೆ ಸಾಹಿತ್ಯ ಇತಿಹಾಸದ ಸಂಬಂಧದಲ್ಲಿ ತನ್ನ ಸ್ಥಾನವನ್ನು ನಿರ್ದಿಷ್ಟಪಡಿಸಿಕೊಳ್ಳಬೇಕಾಗುತ್ತದೆ. ಈ ಎರಡೂ ಕ್ಷೇತ್ರಗಳ ನಡುವೆ ಸತತವಾದ ಅಂತರ್‌ಕ್ರಿಯೆ ನಡೆಯುತ್ತದೆ. ಸಂಶೋಧನಾ ವಸ್ತುವನ್ನು ನಿರ್ದಿಷ್ಟಪಡಿಸುವಲ್ಲಿ ಮತ್ತು ಅದರ ಪರಿಭಾಷೆಯನ್ನು ರೂಪಿಸುವಲ್ಲಿ ಸಾಹಿತ್ಯ ಇತಿಹಾಸಕ್ಕೆ ಬೇಕಾದ ಮಾರ್ಗದರ್ಶನವನ್ನು ಕಾವ್ಯಮೀಮಾಂಸೆ ಒದಗಿಸುತ್ತದೆ.

ಸಾಹಿತ್ಯ ಇತಿಹಾಸ ಕಾವ್ಯ ಮೀಮಾಂಸೆಯ ಪರಿಕಲ್ಪನೆಯಲ್ಲಿ ಅಗತ್ಯ ಬದಲಾವಣೆಗಳನ್ನು ಮಾಡಿ ಅದು ಐತಿಹಾಸಿಕ ಅಧ್ಯಯನಕ್ಕೆ ಸಮರ್ಪಕವಾದ ವಸ್ತುವಾಗುವಂತೆ ಮಾಡುತ್ತದೆ.

ಸಮಾಜಶಾಸ್ತ್ರೀಯ ಕಾವ್ಯಮೀಮಾಂಸೆ ಐತಿಹಾಸಿಕ ನೆಲಗಟ್ಟಿನಲ್ಲಿ ನಿಂತು ಕಾರ್ಯ ನಿರ್ವಹಿಸಿದಾಗ ಅದು ಯಾವುದೇ ಒಂದು ನಿರ್ದಿಷ್ಟ ಪಂಗಡದ ಕಾರ್ಯಕ್ರಮವಾಗಿ ಪರಿವರ್ತನೆಯಾಗುವ ಅಪಾಯವಿರುವುದಿಲ್ಲ ಮತ್ತು ಅದು ಎಲ್ಲಾ ಸಮಕಾಲೀನ ಸಾಹಿತ್ಯದ ತಳಪದಿಯಾಗಬಲ್ಲದು. ದ್ವಂದ್ವಾತ್ಮಕ ವಿಧಾನವು ಅಂತಹ ಕಾವ್ಯಮೀಮಾಂಸೆಯು ಕ್ರಿಯಾಶೀಲಾತ್ಮಕ ಪರಿಕಲ್ಪನೆಗಳನ್ನು ರೂಪಿಸಲು ಬೇಕಾದ ಅವಶ್ಯಕ ಸಲಕರಣೆಗಳನ್ನು ಒದಗಿಸುತ್ತದೆ. ಕೇವಲ ದ್ವಂದ್ವಾತ್ಮಕ ವಿಧಾನಗಳು ಮಾತ್ರ ಪರಿಕಲ್ಪನೆಗಳಲ್ಲಿನ ಶಾಸ್ತ್ರದಂತೆ ಮತ್ತು ಪ್ರಮಾಣತಾವಾದ ಮತ್ತು ಅವು ಸಂಬದ್ಧವಾದ ಅಸಂಖ್ಯಾತ ಘಟನೆಗಳಾಗಿ ವಿಭಜನೆಯಾಗುವ ಕ್ರಿಯೆಯನ್ನು ತಡೆಯಬಲ್ಲದು.

ಆದುದರಿಂದ ಐತಿಹಾಸಿಕ ಕಾವ್ಯಮೀಮಾಂಸೆಯ ಪಾತ್ರವು ಸಮಾಜಶಾಸ್ತ್ರೀಯ ಕಾವ್ಯಮೀಮಾಂಸೆಯ ಪರಿಕಲ್ಪನೆಗಳನ್ನು ಸಾಮಾನ್ಯೀಕರಿಸಲು ಮತ್ತು ಕ್ರೋಢೀಕರಿಸಲು ಅವಶ್ಯಕವಾದ ಐತಿಹಾಸಿಕ ದೃಷ್ಟಿಕೋನವನ್ನು ಒದಗಿಸುವುದಾಗಿದೆ. ಒಂದು ಸರಳವಾದ ಸಮಾಜಶಾಸ್ತ್ರೀಯ ಕಾವ್ಯಮೀಮಾಂಸೆಯನ್ನು ರೂಪಿಸಿಕೊಳ್ಳದ ಹೊರತು ಮಾರ್ಕ್ಸ್‌ವಾದಿ ಸಮಾಜಶಾಸ್ತ್ರೀಯ ವಿಧಾನಗಳ ಆಧಾರದ ಮೇಲೆ ಸಾಹಿತ್ಯ ಇತಿಹಾಸವನ್ನು ಫಲಪ್ರದವಾಗಿ ವಿಷದೀಕರಿಸುವುದು ಅಸಾಧ್ಯ.

ಸೋವಿಯತ್ ರಷಿಯಾದಲ್ಲಿ ಪ್ರಸ್ತುತದಲ್ಲಿ ಕಾವ್ಯಮೀಮಾಂಸೆ ರೂಪನಿಷ್ಠ ವಿಧಾನದ ಏಕಸ್ವಾಮ್ಯದಲ್ಲಿದೆ. ಸೈದ್ಧಾಂತಿಕ ಕಾವ್ಯಮೀಮಾಂಸೆಯ ಅನೇಕ ಸಮಸ್ಯೆಗಳನ್ನು ಅತಿ ಕಡಿಮೆ ಅವಧಿಯಲ್ಲಿ ಪರಿಹರಿಸುವಲ್ಲಿ ರೂಪನಿಷ್ಠವಾದಿಗಳು ಸಫಲರಾಗಿದ್ದಾರೆ. ತಮ್ಮ ಕೃತಿಗಳಲ್ಲಿ ಅವರು ಚರ್ಚಿಸದ ಕಾವ್ಯಮೀಮಾಂಸೆಗೆ ಸಂಬಂಧಪಟ್ಟ ವಿಷಯವೇ ಇಲ್ಲ. ರೂಪನಿಷ್ಠವಾದಿಗಳನ್ನು ತೀವ್ರವಾದ ಮತ್ತು ಸಮಗ್ರವಾದ ವಿಮರ್ಶೆಗೆ ಒಳಪಡಿಸುವುದು ಮಾರ್ಕ್ಸ್‌ವಾದದ ಕರ್ತವ್ಯವಾಗಿದೆ.

ರೂಪನಿಷ್ಠವಾದವು ರಷ್ಯಾದ ಸಾಹಿತ್ಯ ಇತಿಹಾಸದಲ್ಲಿ ಮೊದಲ ಬಾರಿಗೆ ನಿರ್ದಿಷ್ಟ ನಿಯಮಗಳ ಪ್ರತಿಪಾದಕ ಶಕ್ತಿಯಾಗಿ ಹೊರಹೊಮ್ಮಿರುವುದರಿಂದ ಮಾರ್ಕ್ಸ್‌ವಾದವು ಅದನ್ನು ಉಪೇಕ್ಷಿಸಲು ಸಾಧ್ಯವಿಲ್ಲ. ರೂಪನಿಷ್ಠವಾದ ಸಾಹಿತ್ಯದ ನಿರ್ದಿಷ್ಟತೆಗೆ ಸಂಬಂಧಿಸಿದ ಸಮಸ್ಯೆಗಳಿಗೆ ಹೆಚ್ಚಿನ ಹರಿತತೆಯನ್ನು ನೀಡಿರುವುದರಿಂದ ಶಿಥಿಲವಾದ ಸಾರಸಂಗ್ರಹವಾದ ಮತ್ತು ತತ್ವರಹಿತ ಅಕೆಡಮಿಕ್ ವಿದ್ವತ್ತಿಗಿಂತ ಅದು ಹೆಚ್ಚು ವಿಭಿನ್ನವಾಗಿ ಕಾಣುತ್ತದೆ.

ನಿಯಮ ನಿರ್ದಿಷ್ಟೀಕರಣ ಮಾರ್ಕ್ಸ್‌ವಾದಿ ಸಿದ್ಧಾಂತ ಮತ್ತು ಅದರ ಸಾಹಿತ್ಯ ಅಧ್ಯಯನದ ಪ್ರಮುಖ ಕಾರ್ಯವಾಗಿದೆ.

ವಿಧಾನಗಳನ್ನು ಮತ್ತು ತಂತ್ರಗಳನ್ನು ನಿರ್ದಿಷ್ಟಪಡಿಸುವ ಕ್ರಿಯೆಯಲ್ಲಿ ರೂಪನಿಷ್ಠವಾದ ಮತ್ತು ಮಾರ್ಕ್ಸ್‌ವಾದ ಎರಡೂ ನಿರತವಾಗಿದ್ದರೂ ಕೂಡ ಅವುಗಳ ನೆಲಗಟ್ಟು ಒಂದಕ್ಕೊಂದು ತದ್ವಿರುದ್ಧವಾಗಿವೆ. ರೂಪನಿಷ್ಠವಾದಿಗಳು ನಿಯಮ ನಿರ್ದಿಷ್ಟೀಕರಣವನ್ನು ಸೈದ್ಧಾಂತಿಕ ಜಗತ್ತಿನಿಂದ ಹೊರತುಪಡಿಸಿ ಮತ್ತು ತಮ್ಮ ಕಾರ್ಯವನ್ನು ಸೈದ್ಧಾಂತಿಕ ಮತ್ತು ಸಾಮಾಜಿಕ ಶಕ್ತಿಗಳಿಂದ ಬೇರ್ಪಡಿಸಿ ನಿರ್ವಹಿಸುತ್ತಾರೆ. ರೂಪನಿಷ್ಠವಾದಿಗಳು ವೈಯಕ್ತಿಕತೆಯನ್ನು ದ್ವಂದ್ವಾತ್ಮಕವಾಗಿ ನೋಡಲು

ವಿಫಲರಾಗಿರುವ ಕಾರಣ ಸಾಮಾಜಿಕ ಮತ್ತು ಐತಿಹಾಸಿಕ ಜೀವನದ ಅಂತರ್‌ಕ್ರಿಯೆಗಳ ನಡುವೆ ಹೊಂದಾಣಿಕೆಯನ್ನು ತರಲು ಅಸಮರ್ಥರಾಗಿದ್ದಾರೆ.

ರೂಪನಿಷ್ಠವಾದಿಗಳು ಸತತವಾಗಿ ಕಲಾತ್ಮಕ ಸಂರಚನೆಯ ಸಮಾಜೋತ್ತರ ಸ್ವಭಾವವನ್ನು ಸಮರ್ಥಿಸಿಕೊಳ್ಳುವುದರಿಂದ ತಾತ್ತ್ವಿಕವಾಗಿ ಮಾರ್ಕ್ಸ್‌ವಾದ ಮತ್ತು ರೂಪನಿಷ್ಠವಾದಗಳ ನಡುವೆ ಬಲಪ್ರದವಾದ ಚರ್ಚೆ ನಡೆಯಬಲ್ಲದು.

ರೂಪನಿಷ್ಠವಾದ ದೋಷಪೂರ್ಣವಾಗಿದ್ದರೆ ಅದು ಆ ಸಿದ್ಧಾಂತ ಅಸಮಾಜಶಾಸ್ತ್ರೀಯ ಕಾವ್ಯಮೀಮಾಂಸೆಯ ಅಸಂಗತ ಪರಿಸ್ಥಿತಿಯಲ್ಲಿ ಜನ್ಮ ತಾಳುತ್ತದೆ ಮತ್ತು ಈ ಅಸಂಗತತೆ ಸಾಹಿತ್ಯ ಮತ್ತು ಕಾವ್ಯದ ವಿಮರ್ಶೆಯ ಪ್ರಕ್ರಿಯೆಯಲ್ಲಿ ಬಹಿರಂಗಗೊಳ್ಳುತ್ತದೆ.

ಏಕೆಂದರೆ ಸಾಹಿತ್ಯ ಸಾಮಾಜಿಕ ಸಂಗತಿಯಾಗಿದ್ದಲ್ಲಿ ಇದನ್ನು ಪೂರ್ಣವಾಗಿ ಅಲ್ಲಗಳೆಯುವ ರೂಪನಿಷ್ಠವಾದವು ಸಾಹಿತ್ಯ ವಿಮರ್ಶೆಯ ಕಾರ್ಯನಿರ್ವಹಿಸಲು ಅಸಮರ್ಪಕವಾಗಿರುತ್ತದೆ ಮತ್ತು ಮಹತ್ವದ ಲಕ್ಷಣಗಳ ಮತ್ತು ಗುಣಗಳ ಸುಳ್ಳು ಅರ್ಥಗಳನ್ನು ಮತ್ತು ಪರಿಕಲ್ಪನೆಗಳನ್ನು ಒದಗಿಸಲು ಪ್ರಯತ್ನಿಸುತ್ತದೆ.

ಈ ಕಾರಣದಿಂದ ಮಾರ್ಕ್ಸ್‌ವಾದವು ರೂಪನಿಷ್ಠವಾದದ ವಿರುದ್ಧ ಮಾಡುವ ವಿಮರ್ಶೆಯು ನಿರ್ಲಿಪ್ತವಾಗಿರಲು ಸಾಧ್ಯವಿಲ್ಲ.

□

ಡಾ. ರಾಜೀವ ಪೂರ್ಣಚಂದ್ರ
ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಿರಿಯಾಪಟ್ಟಣ
ಮನೆ ವಿಳಾಸ : ನಂ. ೩೪, ಸ್ವರೂಪ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಕುವೆಂಪುನಗರ, ಮೈಸೂರು

# ಕವಿಯ ಆಸೆ

ಪಂಜಾಬಿ ಮೂಲ : ಶ್ರೀ ಬಲಬೀರ ಮಾಧೋಪುರಿ
ಅನುವಾದ : **ಹೆಚ್. ನಾಗರಾಜಪ್ಪ**

ಆಗದಿರಲಿ
ನನ್ನ ಕವಿತೆ
ಮಳೆಗಾಲದ ತೊರೆ
ಯಾವುದೊ ನದಿಗೆ ಸೇರುವ
ಗುರುತೆ ಇಲ್ಲದಾಗುವ

ಆಗದಿರಲಿ
ನನ್ನ ಕವಿತೆ
ಆ ಕಾವ್ಯಧಾರೆಯಲಿ ಷಾಮೀಲು
ಯಾವುದರ ಧರ್ಮಗ್ರಂಥ
ವಿಶಾಲ ಜಮೀನನ್ನು ವಿಭಜಿಸಿ ಚೂರು ಚೂರಾಗಿಸುವುದೊ
ವಿಸ್ತಾರದ ಮಕಮಲ್ಲು ಹಸಿರು ಹಾಸನ್ನು ವಿಭಾಗಿಸುವುದೊ
ಅವರ ಜಡೆ-ಟೋಪಿ ಕಾಯಲು
ನನ್ನಂಥ ಕಪ್ಪು ಜನ
ಮೂರನೇ ಕಣ್ಣು ತೆರೆಯುವುದ ತಡೆಯುವುದೊ

ಬದಲಿಗೆ ಆಗಲಿ
ನನ್ನ ಕವಿತೆ
ಆ ಹಕ್ಕಿಗಳಂತೆ
ಹಳ್ಳಿಯ ಗಲ್ಲಿ ಮೋರಿಗುಂಟ ಹಾರುವ
ಕಾಳು ಹೆಕ್ಕಲು
ಯಾವುದೇ ಅಂಗಳದಲ್ಲಿ ಇಳಿಯುವ
ಉಚ್ಚ ನೀಚ ಎಂಬ ಭೇದವಿಲ್ಲದೆ

ನನ್ನ ಕವಿತೆ
ಬಯಸುವುದೆಲ್ಲ
ಆ ಕಾವ್ಯಧಾರೆಯಲಿ ಒಂದಾಗಲು
ಯಾವುದು ಒಳಗೊಂಡಿದೆಯೊ
ಏಕಲವ್ಯ, ಬಂದಾ ಬಹಾದೂರರ* ವೀರಗಾಥೆ
ಪೀರ್ ಬುದ್ಧುಷಾರ** ಹೋರಾಟ
ಮತ್ತು ಪ್ಯಾಬ್ಲೊ ನೆರೂಡಾನ ನೋವು

---

*. ಬಂದಾ ಬಹಾದೂರ್ : ಗುರು ಗೋವಿಂದಸಿಂಗ್ ನಂತರದ ಅವಧಿಯ ಸಿಖ್ ಯೋಧ. ದುರ್ಬಲರ ಪರವಾಗಿ ಹೋರಾಟ ಮಾಡಿದವ.

**. ಪೀರ್ ಬುದ್ಧುಷಾ : ಸೂಫಿ ಸಂತ. ಗುರು ಗೋವಿಂದಸಿಂಗರ ಅನುಯಾಯಿ.

---

ಹೆಚ್. ನಾಗರಾಜಪ್ಪ
ಉಪಸಂಪಾದಕ (ಕನ್ನಡ)
ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-೫, ಗ್ರೀನ್ ಪಾರ್ಕ್, ನವದೆಹಲಿ - ೧೧೦ ೦೧೬

# ಇತಿಹಾಸ, ಧರ್ಮ ಹಾಗು ಮನುಷ್ಯ

ಹಿಂದಿ ಮೂಲ : **ಫಣೀಶ್ವರನಾಥ ರೇಣು**
ಅನುವಾದ : **ಡಾ. ಕಾಶೀನಾಥ ಅಂಬಲಿಗೆ**

ಅಂದು ದೀಪಾವಳಿ ಹಬ್ಬ—ಲಕ್ಷ್ಮೀಯ ಶುಭಾಗಮನದ ಏಕಮಾತ್ರ ದಿವಸ. ಮುಂಜಾನೆ ಎದ್ದ ಕೂಡಲೆ ಮನಮೋಹನ ತಾಯಿಯೊಡನೆ ಜಗಳವಾಡಿ 'ಕ್ಯಾಂಪ್' ಕಡೆಗೆ ಹೋಗಿದ್ದ. ಸುತ್ತಮುತ್ತಲಿನ ಹಳ್ಳಿಗಳಲ್ಲೆಲ್ಲಾ ವಾಂತಿ-ಭೇದಿ ಹಾಗೂ ಮಲೇರಿಯಾ ಜೋರಾಗಿ ಹಬ್ಬಿತ್ತು. ಹಸಿವು ಹಾಗೂ ರೋಗಗಳ ಸಂಯುಕ್ತ ಆಕ್ರಮಣ. ಪ್ರತಿ ಹಳ್ಳಿಯಲ್ಲಿ ಪ್ರತಿ ದಿವಸ ಎಂಟು ಹತ್ತು ಹೆಣಗಳು ಹೊರ ಬೀಳುತ್ತಿದ್ದವು. ಬಹಳಷ್ಟು 'ಅರ್ಜಿಪರ್ಜಿ' ಗುಜರಾಯಿಸಿ, ವಿನಂತಿ, ಜಗಳವೆಲ್ಲ ಮಾಡಿ ಮನಮೋಹನ ಒಂದು 'ಮೆಡಿಕಲ್ ಕ್ಯಾಂಪ್' ತರಲು ಸಾಧ್ಯವಾಗಿಸಿದ್ದ. ಅವನು ಸ್ವತಃ ವೈದ್ಯರೊಡನೆ ಮುಂಜಾನೆಯಿಂದ ಸಾಯಂಕಾಲದವರೆಗೆ ಹಳ್ಳಿ-ಹಳ್ಳಿ ಓಡಾಡಿ ಔಷಧ ಹಾಗೂ ಪತ್ಥೆ ಹಂಚುತ್ತ ಸುತ್ತುತ್ತಿದ್ದ. ಮಧ್ಯಾಹ್ನ ಅವನು ಮನೆಗೆ ಹಿಂದಿರುಗಿದ.

ನೌಕರರ ಸಂಗಡ ಅವ್ವ ಸ್ವಚ್ಛತೆಯ ಕೆಲಸದಲ್ಲಿ ತೊಡಗಿದ್ದಳು. ಬಾಳೆಗಿಡ ಕಟ್ಟಿ ನಿಲ್ಲಿಸುತ್ತಿದ್ದರು, ದೀಪ ಜೋಡಿಸಿ ಕಟ್ಟುತ್ತಿದ್ದರು, ಬಣ್ಣದ ಕಾಗದಗಳ ತೋರಣ ಕಟ್ಟುತ್ತಿದ್ದರು. ಬತ್ತಲೆ ಮೈಯ, ರೋಗಗ್ರಸ್ತ, ಹಸಿದ ಊರಿನ ಹುಡುಗ ಹುಡುಗಿಯರ ಗುಂಪು ಈ ಅಲಂಕಾರದ ಕೆಲಸ ಸುತ್ತುವರಿದು ನೋಡುತ್ತಿತ್ತು. ಮುದುಕ ನೌಕರ ರಾಮಟಹಲ ಆ ಹುಡುಗರಿಗೆ ಮತ್ತೆ ಮತ್ತೆ ಆ ಕಾರಣವಾಗೆಯೇ ಬಯ್ಯುತ್ತಿದ್ದ, ಪ್ರತಿಸಲ ಬೈದಾಗೊಮ್ಮೆ ಆ ಗುಂಪು ಒಂದು ಹೆಜ್ಜೆ ಹಿಂದೆ ಸರಿಯುತ್ತಿತ್ತು.

ಮನಮೋಹನ ಪಡಸಾಲೆಯಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತುಬಿಟ್ಟ.

ಗಾಳಿಯಲ್ಲಿ ಸುಣ್ಣ ಹಾಗೂ ವಾರ್ನಿಶ್‌ಗಳ ಗಂಧ ಪರಡಿತ್ತು. ಪಕ್ಕದ ಕೋಣೆಯಲ್ಲಿ ಅವ್ವ ನೌಕರರಿಂದ ಸಖತ್ ಕೆಲಸ ಮಾಡಿಸುತ್ತಿದ್ದಳು, ಹಾಗೇ ಗೋಳು ಹೊಡೀತಾ ಇದ್ದಳು.

"....ನೀ ಕ್ರಿಶ್ಚಿಯನ್ ಆಗು, ಮನೆಯಲ್ಲಿ ಕೋಳಿ ಗೀಳಿ ಅಡಗಿ ಮಾಡಿಸು, ಮುಸಲ್ಮಾನರ ಸಂಗಡ ಊಟ ಮಾಡು ನಾನು ಏನೂ ಅನ್ನೋದಿಲ್ಲ. ನೀ ದೇವಿ ದೇವತೆಗಳಿಗೆ ಅದ್ವಿ ಅದ್ವಿ ನಾ ಏನೂ ಅನ್ನಾಂಗಿಲ್ಲ. ಆದರೆ ನೀ ನನ್ನ ಧರ್ಮ ಕರ್ಮಗಳಲ್ಲಿ ಅಡ್ಡಗಾಲು ಹಾಕಿದರೆ, ಲಕ್ಷ್ಮೀ ತಾಯಿಯ ಪೂಜೆ ಮಾಡಲು ಬಿಡದಿದ್ದರೆ-ನಾನು ಹೇಗೆ ಸಹಿಸಿಕೊಳ್ಳಲಿ! ತಂದೆ ಧರ್ಮ ಇತ್ತು ನಿನಗೆ ಓದಿಸಿ ಬರೆಸಿದರು, ನಿನಗಾಗಿ ಹೊಲಮನಿ ಬಿಟ್ಟು ಪಾಪ ಹೋಗಿ ಬಿಟ್ರು.

ಓದಿ ಬರ್ದು ಪಂಡಿತ್ ಆಗೀದ್ದಿ, ಏನೂ ಗಳಿಕೆ ಮಾಡಂಗಿಲ್ಲ ಅಂದ್ರೂ ಇರ್ಲಿ ಬಿಡು, ಆದರೆ ತಂದೆ ಮರ್ಯಾದೆ, ಮನೆ ಮರ್ಯಾದೆ ಉಳಿಸೋ ಕೆಲಸಾನಾದ್ರೂ ಮಾಡು. ಅದೂ ಬಿಟ್ಟು, ಕುಂತಕುಂತಲ್ಲೆ ಆವಾರಗಳ ಸಂಗಡ ಗದ್ದಲ, ಧರ್ಮ ಬಿಟ್ಟು ಅಧರ್ಮದ ಮಾತು ಮತ್ತು ರೈತ ಕೂಲಿಕಾರರ ರಾಜ್ಯ! ಆಗೇಬಿಡ್ತು ರೈತಕೂಲಿಕಾರರ ರಾಜ್ಯ!"

ಮನಮೋಹನ ಪಡಸಾಲೆಯಿಂದ ಎಲ್ಲ ಕೇಳಿಸಿಕೊಳ್ಳುತ್ತಿದ್ದ. ಅವ್ವನ ಸಿಟ್ಟು ಇನ್ನೂ ಕಡಿಮೆ ಆಗಿಲ್ಲವೆಂದು ತಿಳಿದುಕೊಂಡ. ಅವನು ಎದ್ದು ಕೋಣೆಯಲ್ಲಿ ಹೋದ. ಒಂದಿಷ್ಟು ಮಲಗಬೇಕೆನಿಸಿತ್ತು, ಆದರೆ ಕೋಣೆಯಲ್ಲಿ ನೋಡ್ತಾನೆ, ಒಬ್ಬ ಅಪರಿಚಿತ ಮುದುಕ ಪಲ್ಲಂಗದ ಮೇಲೆ ಮಲಗಿ ಬಿಟ್ಟಿದ್ದಾನೆ. ಆ ಮುದುಕನಿಗೆ ದಿಟ್ಟಿಸಿ ನೋಡಿ ಅಲ್ಲಿದ್ದ ಒಂದು ಕುರ್ಚಿ ಮೇಲೆ ಕುಳಿತ.

ಮುದುಕ ಜೋರಾಗಿ ನೆಲದ ಮೇಲೆ ಉಗುಳುತ್ತ ಕೊಳೆತುಹೋದ ಹಲ್ಲುಗಳು ತೋರಿಸುತ್ತ ಹೇಳಿದ—"ಆಹಾ! ಹಾ, ಮಗನೇ ತಾಯಿ ಲಕ್ಷ್ಮೀ ಒಳ್ಳೇದು ಮಾಡುತ್ತಾಳೆ. ಮುಂಜಾನೆಯಿಂದ ಎಲ್ಲಿದ್ದೆ ಮಗ!"

ಮನಮೋಹನ ಮನಸ್ಸಿಲ್ಲದ ಮನಸ್ಸಿನಿಂದ ಅಂದ—"ಹೀಗೆ ಹಳ್ಳಿಗಳಲ್ಲಿ ಸುತ್ತಾಡ್ತಾ ಇದ್ದೆ."

"ಆಹಾ! ಹಾ!" ವೃದ್ಧ ಮತ್ತೊಮ್ಮೆ ಉಗುಳುತ್ತ ಅಂದ—"ಹೌದ್ಹೌದು, ಪರೋಪಕಾರ ಅನ್ನೋದು ಭಾಳ ದೊಡ್ಡ ಧರ್ಮ. ಆದರೆ ದೇವಿ ದೇವತೆಗಳ ಅಗೌರವ, ತಾಯಿ ಲಕ್ಷ್ಮೀಯ ಅಪಮಾನ ಮುಂತಾದವೆಲ್ಲ ಅಧರ್ಮದ ನಡತೆಗಳು, ಅಂಗ್ರೇಜಿ ಓದು ಬರಹದ...."

ಮನಮೋಹನ ತಡೆದ,—"ತಾವು?....ತಾವು ಯಾರು?" "ಆಹಾ, ಹಾ, ನಿನ್ನ ಮನೆ ಪುರೋಹಿತನಾದ ಪಂಡಿತ ದಿನಮಣಿ ಪಾಠಕನಿಗೆ ಗುರುತಿಸೋದಿಲ್ಲವೇನು ಮಗಾ?"

ಮನಮೋಹನ ಮುಖ ಸಿಂಡರಿಸಿ ಕೇಳಿದ, "ತಾವೇನಾ ಪುರೋಹಿತ ದಿನಮಣಿ ಪಾಠಕ?". ಪಂಡಿತ ಮತ್ತೊಮ್ಮೆ ಉಗುಳಿ ಜೋರಾಗಿ ನಗತೊಡಗಿದ. ಮನಮೋಹನ ಕೇವಲ ಎರಡು ಗಂಟೆ ಹಿಂದಿನ ಮಾತು ನೆನೆಸಿಕೊಂಡ. ಕಡು ಬಡವ ಜೀಘರೂ ಮಂಡಲ ಅಳುತ್ತ, 'ಪಂಡಿತ ದಿನಮಣಿ ನನಗೆ ಲೂಟಿ ಮಾಡಿದ್ದಾನೆ' ಎಂದು ಹೇಳುತ್ತಿದ್ದ. ಅವನ ಏಕಮಾತ್ರ ಯುವಪುತ್ರನ ಶ್ರಾದ್ಧದಲ್ಲಿ ಐದು ರೂಪಾಯಿ ದಕ್ಷಿಣೆ ತೆಗೆದುಕೊಳ್ಳುವದಲ್ಲದೆ, ಜೋರು ಮಾಡಿ ಒಂದು ಆಕಳೂ ಹೊಡೆದುಕೊಂಡು ಹೋಗಿದ್ದಾನೆ.

ಹೆಂಡತಿ ಶ್ರಾದ್ಧದಲ್ಲಿ ಉಂಗುರ ತೆಗೆದುಕೊಂಡು ಮನಸ್ಸು ತುಂಬಲಿಲ್ಲ, ಅದಕ್ಕಾಗಿ ಮಾಳಿಗೆ ಮೇಲೆ ಹರಡಿದ ಕುಂಬಳಕಾಯಿ ಪಲ್ಲೆ ಕಾಯಿ ಕೂಡ ಹರಿಸಿ ಕೊಂಡು ಹೋದ....

ಮನಮೋಹನ ಗಂಭೀರನಾದದ್ದು ಕಂಡು, 'ಪಂಡಿತಜಿಗೆ ಗುರುತಿಸದ ಕಾರಣ ಪಶ್ಚಾತಾಪ ಪಡುತ್ತಿದ್ದಾನೆ' ಎಂದು ಭಾವಿಸಿದ. ಉತ್ಸಾಹಿತನಾಗಿ ಹೇಳಿದ, "ಪರವಾಗಿಲ್ಲ ಬಿಡು ಮಗ..."

ತಕ್ಷಣ ಮನಮೋಹನ ಕೇಳಿದ—"ಪಂಡಿತಜಿ ನಮ್ಮವ್ವ ಈ ಹೊಲ ಖರೀದಿಸುವುದರಲ್ಲಿ ತಮ್ಮ ಕೈವಾಡ ಎಷ್ಟಿದೆ ಎಂದು ಹೇಳ್ತೀರಾ?"

"ಮಗಾ; ನಾನೇ ಎಲ್ಲ ಮಾಡಿದ್ದು"—ಮುದುಕನಿಗೆ ಮನಮೋಹನನ ಭಾವನೆ ಅರ್ಥ ಆಗಲಿಲ್ಲ. ಆನಂದದಿಂದ ಅವನು ಹೇಳತೊಡಗಿದ—"ಆ ವಿಧವೆ ಹೊಲ ಮಾರಲಿಕ್ಕೆ ಸಿದ್ಧಳೇ ಇರಲಿಲ್ಲ. ಧರ್ಮದ ಜಾದೂ ದಂಡ ಹೀಗೆ ತಿರುಗಿಸಿಬಿಟ್ಟೆ, ಆಕೆ ಅಹಂಕಾರವೆಲ್ಲ ಚೂರು ಚೂರಾಯಿತು...."

"ಮತ್ತೆ, ಕೈಲಾಸಪತಿ ವಿರುದ್ಧ ಸುಳ್ಳು ಸಾಕ್ಷಿ ಕೂಡ ಕೊಟ್ರಿ ಹೌದಲ್ಲ?" "ಏನ್ ಕೇಳ್ತೆಪ್ಪ! ನಿನಗೆ ಎಲ್ಲ ಗೊತ್ತಿದೆ. ಆ ಮಾಲೀಕರು ಈಗ ಇಲ್ಲ. ಏನ್ಮಾಡೋದು, ಇಡೀ ಲಕ್ಷ್ಮೀಪುರದ ಜಮೀನ್ದಾರಿ ನಮ್ಮದಾಗಿ ಬಿಡ್ತಾ ಇತ್ತು. ನಾನೊಬ್ಬ ಸೇವಕ ಮಾತ್ರ, ಅವ್ವಾ ಅವರ ಆಜ್ಞೆಯಂತೆ..."

"ತಾವು ಗ್ರಾಮ್ ಹಿಂದು ಸಭೆಯ ಅಧ್ಯಕ್ಷರೂ ಆಗಿದ್ದೀರೊ?"

"ಅಹಾ! ಹಾ, ನಿನಗೆಲ್ಲ ಗೊತ್ತಿದೆ. ಮಾಲೀಕರು ಮಾಡಿದಂತೆ ನಾನಿದ್ದೇನೆ. ಈಗ ನೀನು ಜಮೀನ್ದಾರೀ ಹೊಣೆಗಾರಿಕೆನಾದ್ರೂ ಹೊತ್ತುಕೊ...."

"ಅಹಾ! ಹಾ, ಅವ್ವಾ ದುರ್ಗಾಮಾತಾ!

ಈಗ ತಾವು ಹೋಗಬಹುದು...."

ಮನಮೋಹನನ ಹಣೆಗಂಟು ಬದಲಾಯಿಸಿತು. ಮುದುಕ ಏನೋ ಹೇಳಬೇಕೆಂದು ಬಯಸಿದ. ಅಷ್ಟರಲ್ಲಿ ಮನಮೋಹನ ಅಂದ—"ಈಗ ನನ್ನ ಭೇಟಿಗೆ ಬರುವ ಕಷ್ಟ ತೆಗೆದುಕೊಳ್ಳಬೇಡಿ."

ಮುದುಕ ತನ್ನ ಹೊಲಸು ಜೋಳಿಗೆ ಎತ್ತಿಕೊಂಡು ಹೊರದಾರಿ ಹಿಡಿದ.

ನೆಲದ ಮೇಲೆ ನೊಣಗಳು ಗುಂಯಿಗುಡುತ್ತಿದ್ದವು. ಅದರ ಸ್ವಚ್ಛತೆಗಾಗಿ ಮನಮೋಹನ ನೌಕರನಿಗೆ ಕರೆದ, ಆಕಸ್ಮಿಕವಾಗಿ ಅವ್ವ ಕೋಣೆಯಲ್ಲಿ ಪ್ರವೇಶಿಸಿದಳು.

ಸಿಟ್ಟಿನಿಂದ ಆಕೆ ದುಮುಗುಡುತ್ತಿದ್ದಳು. ಆಕೆಯ ಮೂಗಿನ ಹೊಳ್ಳೆ ಕೆಂಪಾಗಿದ್ದವು, ಹಾಗೂ ಜೋರಾಗಿ ಶ್ವಾಸ ಬಿಡುತ್ತಿದ್ದಳು. ಆಕೆ ಅಂದಳು—"ನನಗೆ ಏನು ಹೇಳಬೇಕಾಗಿದೆ ಹೇಳು? ತಾಯಿ ಲಕ್ಷ್ಮೀಯ ಅಪಮಾನ ಮಾಡಿ ಹೊಟ್ಟೆ ತುಂಬಲಿಲ್ಲಂದ್ರೇ ಪಾಪ ಆ ಬ್ರಾಹ್ಮಣನಿಗೆ ಬೈದು ಹೊರಹಾಕಿಬಿಟ್ಟೆಯಾ? ಈಗ ನನಗೆ ಕುತ್ತಿಗೆ ಹಿಚಕಿ ಕೊಂದುಬಿಡು. ಅಂದ್ರೇ ಸ್ವರ್ಗದಲ್ಲಿದ್ದ ನಿಮ್ಮಪ್ಪನಿಗೆ ಶಾಂತಿ ಸಿಗುತ್ತದೆ, "ಅಯ್ಯೋ ದೇವರೆ, ನನ್ನ ಹೊಟ್ಟೆಯಿಂದ ಇಂಥ ಅಧರ್ಮಿ ಹುಟ್ಟಿ ಬರಬೇಕಿತ್ತೇ...."

ಅವಳು ಅಳತೊಡಗಿದಳು. ಮನಮೋಹನ ಕಲ್ಲಿನಂತೆ ಕುಳಿತೇ ಇದ್ದ. ಅವ್ವ ಸೆರಗಿನಿಂದ ಕಣ್ಣೊರೆಸುತ್ತ ಹೊರಗೆ ಹೋದಳು. ಮನಮೋಹನ ಒಂದಿಷ್ಟು ಮಲಗಬೇಕೆಂದು ಬಯಸಿದ,

ಆದರೆ ಪಲ್ಲಂಗದೆಡೆಗೆ ನೋಡಿ ಕಣ್ಣೆತ್ತಿ ಸುಮ್ಮನೆ ಕುಳಿತು ಬಿಟ್ಟು ಸ್ವಲ್ಪ ಸಮಯದ ನಂತರ ಎದ್ದು, ಟೇಬಲ್ ಮೇಲೆ ಯಾವುದೋ ಪುಸ್ತಕ ಹುಡುಕತೊಡಗಿದ.

ಆ ದಿವಸ ಭಂಡಾರ ಕೋಣೆ ಸ್ವಚ್ಛ ಮಾಡುವಾಗ ಧನ್ನುನ ತಾಯಿ ಒಂದು ವಿರಳ ಪುಸ್ತಕದ ಜೀರ್ಣೋದ್ಧಾರ ಮಾಡಿಬಿಟ್ಟಿದ್ದಳು. ಹಾಗೂ ಬಲು ಉತ್ಸಾಹದಿಂದ ಮನಮೋಹನನ ಟೇಬಲ್ ಮೇಲೆ ಇಟ್ಟು ಹೋಗಿದ್ದಳು. ಟೇಬಲ್ ಮೇಲೆ ಮೂರ್‍ನಾಲ್ಕು ಆಕರ್ಷಕ ಅಕ್ಷರಗಳಿಂದ ಹೆಸರು ಬರೆದಂತಹ ದೊಡ್ಡ-ದೊಡ್ಡ ಗ್ರಂಥಗಳು ನಾಲ್ಕೈದು ಚಿಕ್ಕ ಪುಸ್ತಕಗಳು ಇದ್ದವು, ಅವುಗಳ 'ಗೆಟ್-ಅಪ್' ಎಷ್ಟು ಚೆನ್ನಾಗಿತ್ತು ಎಂದರೇ ಅವುಗಳನ್ನು ಓದಲೇಬೇಕೆಂದು ಅನ್ನಿಸುತ್ತಿತ್ತು. ಇಂಗ್ಲೀಷ್ ಹಾಗೂ ಹಿಂದಿ ಕೆಲವು ಮಾಸಿಕ ಪತ್ರಿಕೆಗಳು, ಬಣ್ಣದ ಪೇಪರ್‌ವೇಟ್‌ಗಳ ಕೆಳಗೆ ಹರಡಿದ ಬಣ್ಣಬಣ್ಣದ ಕಾಗದಗಳ ನಡುವೆ ಆ ಹೊಲಸಾದ ಹಳೆಯ ಪುಸ್ತಕ ಕಣ್ಣಿಗೆ ಚುಚ್ಚುವಂತಿತ್ತು. ಮನಮೋಹನ ಅದನ್ನು ಎತ್ತಿಕೊಂಡು ನೋಡಿದ—"ಭಾರತದ ಇತಿಹಾಸ!" ಮುಗುಳ್ನಕ್ಕು ಒಂದೆಡೆಗೆ ಎಸೆದ, ಮತ್ತೇನೋ ವಿಚಾರಿಸಿ ಮತ್ತೆ ಎತ್ತಿ ಅದನ್ನು ತೆಗೆದುಕೊಂಡು ಆರಾಮ ಕುರ್ಚಿಯಲ್ಲಿ ಒರಗಿದ.

'ಭಾರತದ ಇತಿಹಾಸ'

ಇದು ಮನಮೋಹನ ಪುಸ್ತಕವೇ, ಇದರ ಸಾಕ್ಷಿಯಾಗಿ ಅದರ ಅನೇಕ ಪುಟಗಳಲ್ಲಿ ಬರೆದಿತ್ತು—This book belongs to Manmohan Verma, class VII, H.E. School. ಇತ್ಯಾದಿ ಇತ್ಯಾದಿ.

ಪ್ರಾರಂಭದ ಕೆಲವು ಪುಟಗಳು ಹರಿದು ಹೋಗಿದ್ದವು, ಕೆಲವಕ್ಕೆ ಹುಳು ಮುತ್ತಿದ್ದವು, ಆದರೆ ಎಲ್ಲಕ್ಕೂ ಕೊನೆಯಲ್ಲಿ ಸಾಮ್ರಾಟ್ ಪಂಚಮ್ ಜಾರ್ಜನ ಚಿತ್ರ ಹಾಗೂ ಅದರ ಕೆಳಗೆ ಬರೆದ ಸಾಲು—'God save the King' ಇನ್ನೂ ಹೊಳೆಯುತ್ತಿತ್ತು.

ಮನಮೋಹನ ಚೆನ್ನಾಗಿ ನೆನಪಿಸಿಕೊಂಡ—'ಪುರಸ್ಕಾರ ವಿತರಣೋತ್ಸವ'ದ ಸಂದರ್ಭದಲ್ಲಿ ಅವನು ಮಧುರ ಕಂಠದಲ್ಲಿ 'God save the King' ಹಾಡಿ ಒಳ್ಳೆ ಪುರಸ್ಕಾರ ಪಡೆದಿದ್ದ.

ಇಂದು ಮನಮೋಹನ ಎಂ.ಎ. ಪಾಸಾಗಿದ್ದಾನೆ. ವಿಶ್ವವಿದ್ಯಾಲಯವು ಯಾವ ವರ್ಷ ಅವನಿಗೆ ಇತಿಹಾಸದಲ್ಲಿ ಎಂ.ಎ. ಪದವಿ ಘೋಷಿಸಿತ್ತೋ ಅದೇ ವರ್ಷ ಭಾರತ ಸರ್ಕಾರವು ಅವನಿಗೆ ಶಾಂತಿಯ ವೈರ ಎಂದು ಘೋಷಿಸಿ ಬಂಧಿಸಿತ್ತು.

ಮುಗುಳ್ನಗುತ್ತ ಆತ ಪುಟ ತಿರುಗಿಸತೊಡಗಿದ. ಅಲ್ಲಲ್ಲಿ ಪರೀಕ್ಷೆಯ ದೃಷ್ಟಿಯಿಂದ ಮಹತ್ವದವು ಎಂದು ಕೆಲವು ಸಾಲುಗಳು 'ಅಂಡರ್-ಲೈನ್' ಮಾಡಲ್ಪಟ್ಟಿದ್ದವು....ಪಾನಿಪತ್ ಯುದ್ಧ....ತಾಜಮಹಲಿನ ಚಿತ್ರ....ಔರಂಗಜೇಬ, ಛತ್ರಪತಿ ಶಿವಾಜಿ, ಬಹದ್ದೂರ್ ಶಾಹ್, ಇಂಗ್ಲೀಷರ ಆಡಳಿತ ಕಾಲ....

ಅವನು ತಡೆದು ನೋಡಿದ, 'ರಾಬರ್ಟ ಕ್ಲೈವ'ನ ಪಕ್ಕದಲ್ಲಿ Most important ಎಂದು ಬರೆದಿತ್ತು....ಕ್ಲೈವ ಬಲು ಕಟ್ಟವನಿದ್ದ. ಅವನು ಶಾಲೆಯ ಕಿಟಕಿ, ಬೆಂಚುಗಳ ಒಡೆದು ಮುರಿದು ಹಾಕುತ್ತಿದ್ದ. ಸೂರಜ ಪ್ರಸಾದನಿಗೆ ಮಾಸ್ತರ್ ಸಾಹೇಬರು ರಾಬರ್ಟಕ್ಲೈವ್ ಎಂದು ಕರೆಯುತ್ತಿದ್ದರೆಂದು

ಮನಮೋಹನ ನೆನೆಸಿಕೊಂಡ. ಬಲು ತುಂಟನಾಗಿದ್ದ ಸೂರಜ ಕೂಡ, ಇಡೀ ಶಾಲೆಯಲ್ಲಿ ಎಲ್ಲರಿಗಿಂತ ತುಂಟ!....ಇವನು ಯಾವಾಗಲೂ ಹಾಗೆಯೇ. ೧೯೪೨ರ ಆಂದೋಲನದಲ್ಲಿ ಅವನಿಗೆ ಗಲ್ಲಿಗೇರಿಸಲಾಯಿತು. ಓಹ್! ಸೂರಜ ಬದುಕಲಿಲ್ಲ. ಎಷ್ಟು ಧೈರ್ಯವಂತ, ಎಷ್ಟೊಂದು ಒಳ್ಳೆ ಸಂಘಟನಾ ಚತುರ! ಬಿರುಗಾಳಿಯಲ್ಲಿ, ಕಷ್ಟಗಳಲ್ಲಿಯೂ ಸದಾ ಹಸನ್ಮುಖಿ! ಗಲ್ಲಿಗೇರುವ ದಿನ ಅತ್ತನೆಂದು ಕೇಳಿದೆ. ಅವನು ಅತ್ತಿರಬಹುದೆ?....ಖಂಡಿತವಾಗಿ ಅವನು ತನ್ನ ತಂಗಿ ಶಾರದಾಗೆ ಒಂದು ಸಲ ನೋಡುವದಕ್ಕಾಗಿ ಅತ್ತಿರಬಹುದು....! ಶಾರದಾ, ತಂದೆ-ತಾಯಿ ಇಲ್ಲದ ಹುಡುಗಿ, ಹಸಿವಿನಿಂದಾಗಿ ಸತ್ತಳು....ದೇಶದಲ್ಲಿ ಎಷ್ಟೊಂದು ಸೂರ್ಯರು ಮುಳುಗಿ ಹೋದರು, ಎಷ್ಟೊಂದು ಶಾರದೆಯರು ಹಸಿವಿನಿಂದ ಒದ್ದಾಡಿ ಸತ್ತು ಹೋದರು!

ಪುಟ ತಿರವಿದ-ಸಿರಾಜುದ್ದೌಲಾ, ಸಿರಾಜುದ್ದೌಲಾ ಕೇವಲ ಇಪ್ಪತ್ತು ವರ್ಷಗಳ ವಯಸ್ಸಿಗೆ ನವಾಬನಾದನು....ಮನಮೋಹನ ತನ್ನ ವಯಸ್ಸಿಗೆ ಹೋಲಿಸಿಕೊಂಡ-೨೫ ವರ್ಷಗಳು. ಒಂದ್ಸಲ ಮನಮೋಹನ ಸಿರಾಜುದ್ದೌಲನ ಬಗ್ಗೆ ಒಂದು ಕವಿತೆ ಬರೆದಿದ್ದ—'ಪ್ರೀತಿಯ ಸಿರಾಜ! ಪ್ರೀತಿಯ ಸಿರಾಜ! ಜ್ಯೋತ್ಸ್ನಾಳಿಗೆ ಆ ಕವಿತೆ ಬಲು ಇಷ್ಟ. ಮತ್ತೆ ಮತ್ತೆ ಆ ಕವಿತೆ ಕೇಳಲು ಬಯಸುತ್ತಿದ್ದಳು. ಜ್ಯೋತ್ಸ್ನಾ ಕಮ್ಯುನಿಸ್ಟ ಪಾರ್ಟಿಯಲ್ಲಿ ಕೆಲಸ ಮಾಡುತ್ತಿದ್ದಳು. ಈಗ ೧೯೪೨ರ ಆಂದೋಲನದ ಸಂದರ್ಭದಲ್ಲಿ ರೇಡಿಯೋದಲ್ಲಿ 'ಜನಸಂಗೀತ' ಹಾಡುತ್ತಿದ್ದಾಳೆಂದು ಕೇಳಿದ್ದೇನೆ—ಟ್ರಾಮುಗಳಿಗೆ ಬೆಂಕಿ ಹಚ್ಚುವ ಗುಂಡಾಗಳಿದ್ದಾರೆ, ಕೆಟ್ಟವರಿವರು, ಇದು 'ಕ್ರಾಂತಿ ಅಲ್ಲ' ಇದು ಕ್ರಾಂತಿ ಅಲ್ಲ.... ವೈರಿಗಳಿದ್ದಾರೆ ಬಾಗಿಲಲ್ಲಿ....ಮನಮೋಹನ ಪುಸ್ತಕದಲ್ಲಿ ದೃಷ್ಟಿ ನೆಟ್ಟ....ಈ ಅಮಾನವೀಯ ಹತ್ಯೆಗೆ ಬ್ಲಾಕ್ ಹೋಲ್ ಘಟನೆ ಎನ್ನುತ್ತಾರೆ.

ಅವನು ಮುಗುಳ್ನಕ್ಕ. ಬಹಳ ಹೊತ್ತಿನವರೆಗೆ ಮುಗುಳ್ನಗುತ್ತಿದ್ದ. ಅಕಸ್ಮಾತಾಗಿ ರಾಮಟಹಲ್ ಬಂದು ನಿಂತ.

"ಏನು?"

"ಪೂಜೆ ಪ್ರಾರಂಭವಾಗಿದೆ"

"ಅಂದರೆ?"

"ತಾವು ಬರುವದಿಲ್ಲವೆ?"

"ಇಲ್ಲ"

ರಾಮಟಹಲ್ ಹೋಗಿಬಿಟ್ಟ. ಮನಮೋಹನ ಮತ್ತೆ ಪುಸ್ತಕದ ಪುಟಗಳಿಗೆ ತಿರುಗಿದ.

....ಲಾರ್ಡ ಕಾರ್ನವಾಲಿಸ್....ಜಮೀನ್ದಾರಿ ಪದ್ಧತಿಯ ಹುಟ್ಟು...ಜಮೀನ್ದಾರಿ ಪದ್ಧತಿ ಈಗ ನಾಶವಾಗುತ್ತಿದೆ. ಈ ವಿನಾಶಕಾರಿ ಪದ್ಧತಿಯನ್ನು ಉಳಿಸಿಕೊಳ್ಳಲು ಜಮೀನುದಾರರು ಏನೇನು ಮಾಡಲಿಲ್ಲ...! ಇಂದಿಗೂ ಅವರು ಜಾಗೃತರೇ ಆಗಿದ್ದಾರೆ. ಅವರು 'ರಾಷ್ಟ್ರ ಸೇವಕದಲ' ಎಂಬ ಹೆಸರಿನ ಸಂಸ್ಥೆಯನ್ನು ಸ್ಥಾಪಿಸಿದರು. ಮುಸ್ಲಿಂ ನೆಶನಲ್ ಗಾರ್ಡ ಹಾಗೂ ಈ 'ರಾಷ್ಟ್ರ ಸೇವಕದಲ'ಗಳು ಮುಸ್ಲಿಂ ಹಾಗೂ ಹಿಂದೂ ಬಂಡವಾಳಶಾಹಿಗಳ ಮುಳುಗುವ ಹಡಗುಗಳನ್ನು ಉಳಿಸಿಕೊಂಡಾವೆ?....

ಈ ಊರಲ್ಲಿಯೂ ಕೆಲ ಹುಡುಗರು ಕಪ್ಪು ಟೋಪಿ ಧರಿಸಿ ಸಾಯಂಕಾಲ ಲಾಠಿ ತಿರುಗಿಸುತ್ತಿದ್ದರು. ಇಂದು ಊರಲ್ಲಿ ಪಾಂತಿ ಭೇದಿ ಹರಡಿದೆ. ಅವರು ಎಲ್ಲಿದ್ದಾರೆ?....ಎಲ್ಲಿದ್ದಾರೆ ಥಾಪಟಜಿ?....

ಪುಟಗಳಲ್ಲಿ ದೃಷ್ಟಿ ನೆಟ್ಟು ಕೇಳಿದ, "ಹಸಿದ ಹಾಗೂ ರೋಗಿಷ್ಠ ದೇಶದಲ್ಲಿ ಧರ್ಮದ ಹೆಸರಿನಲ್ಲಿ ಯುದ್ಧಗಳಾಗುತ್ತಿವೆಯೇ ಅಥವಾ ರೊಟ್ಟಿಗಾಗಿ? ರೊಟ್ಟಿಗಾಗಿ ನವಖಾಲಿ ಹಾಗೂ ಬಿಹಾರದ ಹಳ್ಳಿಗಳು ಎಷ್ಟೊಂದು ಸಲ ಸಾಮೂಹಿಕ ಪ್ರಯತ್ನ ಮಾಡಿಲ್ಲ? "ಕಪ್ಪು ವೇಷ"ದ ಆಡಳಿತ ಹೀಗೇ ಮುಂದುವರಿಯುವುದೇ?"

ದೀಪವಾಳಿಯ ಸಂಜೆ ಯಾವಾಗ ಬಂದಿಳಿಯಿತೋ ಗೊತ್ತಾಗಲೇ ಇಲ್ಲ. ಕತ್ತಲೆ ಕೋಣೆಯಲ್ಲಿ ಕುಳಿತ ಮನಮೋಹನ ತನ್ನಷ್ಟಕ್ಕೆ ತಾನೇ ಕೇಳಿಕೊಳ್ಳುತ್ತಿದ್ದ—"ಧೈರ್ಯವಿದೆಯೆ? ಕೆಟ್ಟು ಹೋಗುತ್ತಿರುವ ಈ ಇತಿಹಾಸದ ಪುಟಗಳನ್ನು ಸುಟ್ಟು ಹಾಕಲೇಬೇಕು."

ಅಸಂಖ್ಯ ದೀಪಗಳ ಸಾಲು ಹೊಳೆಯತೊಡಗಿದ್ದವು. ಬಾಳೆಯ ಎಲೆಗಳಲ್ಲಿ ಹೆಣೆದ ಮೇಣದ ಬತ್ತಿಗಳು ಉರಿಯತೊಡಗಿದವು. ಕರಗತೊಡಗಿದವು. ಫೂಲ್‌ಝಡಿ, ಪಟಾಕಿಗಳು, ಬೆಳಕಿನ ಚಿತ್ತಾರಗಳು!! ಅಂಗಳದಲ್ಲಿ ಒಂದೇ ಸಲ ಶಂಖ, ಜಾಗಟೆ ಮೊಳಗಿದವು. ಆರತಿ ಬೆಳಗುತಿವೆ. ಶ್ರೀಮಂತರ ಮನೆಯ ದೀಪಾವಳಿ ನೋಡಲು, ಪ್ರಸಾದ ಪಡೆಯಲು ಊರಜನ ಕಿಕ್ಕಿರಿದು ಸೇರಿತು. ಹಸಿದ, ರೋಗಗ್ರಸ್ಥ, ಬತ್ತಲೆಜನ! ಪ್ರಸಾದದಿಂದ ಹಸಿವೆ ಹಿಂಗುವುದೆ?

ಶ್ರೀ ಲಕ್ಷ್ಮೀದೇವಿಗೆ ಜಯವಾಗಲಿ....! ಜಯಧ್ವನಿಯೊಡನೆ ಪೂಜೆ ಮುಗಿಯಿತು. ಪ್ರಸಾದ ವಿತರಣೆಯ ಕೋಲಾಹಲ!!

ಮನಮೋಹನನ ಕಿವಿಗಳಲ್ಲಿ ಮೊಳಗತೊಡಗಿತು—ಶ್ರೀ ಲಕ್ಷ್ಮೀದೇವಿಗೆ ಜಯವಾಗಲಿ! ಅವನು ಶಬ್ದಗಳನ್ನು ಮುರಿಯಲು ಪ್ರಾರಂಭಿಸಿದ—

"ಶ್ರೀ ಲಕ್ಷ್ಮೀದೇವಿಗೆ ಜಯವಾಗಲಿ"
"ವ್ಯಕ್ತಿಗತ ಸಂಪತ್ತಿಗೆ ಜಯವಾಗಲಿ"
"ಕೊಲೆ ಸುಲಿಗೆ ಶೋಷಣೆಗೆ ಜಯವಾಗಲಿ"
"ಪಾಕಿಸ್ತಾನಗೆ ಜಯವಾಗಲಿ"
"ಯುದ್ಧಕ್ಕೆ ಜಯವಾಗಲಿ"
"ಫ್ಯಾಸಿಜಂಗೆ ಜಯವಾಗಲಿ"

ಮತ್ತೆ ಈ God save the King? ಈ ಪ್ರಾರ್ಥನೆಯಾದ ಮೇಲೂ ಸಾಮ್ರಾಟನು ಸಾಯುತ್ತಾನೆಂದಾದರೆ 'ಗಾಡ್ ಸೇವ ದ ಕಿಂಗ್'ದ ಅರ್ಥವಾಯಿತು....ದೇವರು, ಗುಲಾಮತನ, ಬಡತನ, ಹಸಿವೆ, ಸಾವು, ಅನ್ಯಾಯ, ದಂಗೆ, ಸುಲಿಗೆ, ಸಾಮೂಹಿಕ ಹತ್ಯೆ ಎಲ್ಲವನ್ನೂ ಹಾಗೇ ಉಳಿಸಿಕೊಳ್ಳುವುದೆ?....

ಅವನು ಪಡಸಾಲೆಯಲ್ಲಿ ಬಂದು ನಿಂತುಕೊಂಡ. ಹಳ್ಳಿಯ ಕೆಲವು ರೋಗಮುಕ್ತ ಯುವಕರು ಮುಂದಿನ ಬಯಲಿನಲ್ಲಿ 'ಜ್ಯೋತಿಲೀಲಾ' ಆಚರಿಸುತ್ತಿದ್ದರು. ಕೈಯಲ್ಲಿ ದೊಡ್ಡ-ದೊಡ್ಡ ಉರಿಯುವ ಜ್ವಾಲಾದಂಡಗಳನ್ನು ಹಿಡಿದುಕೊಂಡು ಅವರು ಓಡಿ ಬಂದರು. ಗದ್ದಲವಾಗುತ್ತಿತ್ತು. ದೀಪಾವಳಿಯ

ಈ ಕೊನೆಯ ಆಚರಣೆ ಅವನಿಗೆ ಬಲು ಸುಂದರವೆನಿಸಿತು. ಕಾಡು ಕತ್ತಲೆಯಲ್ಲಿ ಸುರಿದು ಬೀಳುವ ಕೆಂಪು-ಕೆಂಪು ಬೆಳಕಿನ ಜ್ಯೋತಿ ಜ್ವಾಲೆಗಳು!!

ಸಾವಕಾಶವಾಗಿ ಜ್ಯೋತಿಗಳ ಸಂಖ್ಯೆ ಹೆಚ್ಚಾಗತೊಡಗಿತು. ಗದ್ದಲವು ತೀವ್ರವಾಯಿತು. ಮನಮೋಹನ ಮುಗುಳ್ನಗತೊಡಗಿದ. ಅವನ ಹೆಜ್ಜೆಗಳು ತಾನೇ ತಾನಾಗಿ ಮುಂದೆ ಹೊರಟವು. ಅವನು ಹಿಂತಿರುಗಿ ಒಂದು ಸಲ ಜ್ಯೋತಿಗಳ ಕಡೆ ನೋಡಿದ—ಸಾಲು ಸಾಲಾಗಿ ಅಲಂಕರಿಸಿದ ಸಾವಿರಾರು ದೀಪಗಳು ಚಕಚಕನೆ ಹೊಳೆಯುತ್ತಿದ್ದವು. ಜಗಮಗ-ಜಗಮಗ ಮಿಂಚುವದು—ಶೃಂಗಾರ ರಸದ ಕವಿತೆಯಂತೆ, ರುನ್‌ಜುನ್-ರುನ್‌ಜುನ್ ನಶೆಯ ಗುಂಗಿನಲ್ಲಿದ್ದ ಸಭೆಯೊಳಗೆ ವೇಶ್ಯೆಯು ನೃತ್ಯ ಮಾಡಿದಂತೆ.

ಅವನು ಜ್ಯೋತಿ ಸಾಲುಗಳೆಡೆಗೆ ನೋಡಿದ—ಒಂದು ತಾಂಡವ ನೃತ್ಯದಂತೆ, ಸ್ವಚ್ಛಂದ ಮಹಾಮನೆ. ಅವನು ತನ್ನ ಗಾಡಿಗಳಲ್ಲಿ ಬಿಸಿ ರಕ್ತದ ಅನುಭವ ಪಡೆದ.

ಮನಮೋಹನ ರೋಗಗ್ರಸ್ಥ ಹಳ್ಳಿಗಳ ಕಡೆಗೆ ಹೊರಟ. ತನ್ನ ಮನೆಯ ಹತ್ತಿರ ಒಂದು ಮೈಲು ದೂರದಲ್ಲಿಯೇ ಆ ಹಳ್ಳಿಗಳು ಹದ್ದು, ತೋಳಗಳು, ನಾಯಿಗಳೆಲ್ಲಾ ತಿಂಗಳಿಂದ ಹಬ್ಬ ಆಚರಿಸುತ್ತಿದ್ದವು. ಆ ಹಳ್ಳಿಗಳ ಮಧ್ಯದಲ್ಲಿ ದಟ್ಟ ಮಾವಿನ ತೋಟದಲ್ಲಿ ಮೆಡಿಕಲ್ ಕ್ಯಾಂಪ್ ಇತ್ತು. ದೂರದಿಂದಲೇ ಬೆಳಕು ಕಾಣಿಸುತ್ತಿತ್ತು. ಅವನು ಹಳ್ಳಿಯಲ್ಲಿ ಪ್ರವೇಶಿಸಿದ. ಹಳ್ಳಿಯ ಪ್ರವೇಶದ ಈ ಭಾಗ ಬಹಳ ಶಾಂತವಾಗಿತ್ತು, ಶಾಂತ ಎಂದರೇ ಈ ಭಾಗದ ಜನಸಂಖ್ಯೆ ಇಡಿಯಾಗಿ ನಾಶವಾಗಿಹೋಗಿತ್ತು.

ಹಳ್ಳಿಯ ಮಧ್ಯಭಾಗದಲ್ಲಿ ಕೆಲವು ನಾಯಿಗಳು ಸೇರಿಕೊಂಡು ಭಯಂಕರವಾದ ಧ್ವನಿಯಲ್ಲಿ ಅಳುತ್ತಿದ್ದವು. ಅವನು ಕಂಪಿಸಿದ! ಆದರೆ ಹಾಗೆಯೇ ಮುಂದೆ ನಡೆದ. ಒಂದು ಕತ್ತಲೆ ಹಾಗೂ ಹೊಲಸು ಗಲ್ಲಿಯಲ್ಲಿ ಅವನು ಕಂಪಿಸಿ ನಿಂತುಬಿಟ್ಟ—ಒಂದು ಬಿಳಿ ನೆರಳು ಓಡಿ ಕತ್ತಲೆಯಲ್ಲಿ ಬೇಗ ಅಡಗಿಕೊಂಡಿತು. ಮೊದಲು ಅವನು ಅಂಜಿದ, ಆದರೆ ಸಾವಕಾಶವಾಗಿ ಸುಧಾರಿಸಿಕೊಂಡ. ಅವನು ಚೆನ್ನಾಗಿ ಗುರುತಿಸಿದ ಡಾಕ್ಟರ್ ಸಿನ್ಹಾ ಹಾಗೂ ಮಿಸ್ ಚಟರ್ಜಿ ಮೆಡಿಕಲ್ ಸ್ಟುಡೆಂಟ್. ಅವನು ಮುಂದೆ ಹೋಗುತ್ತ ವಿಚಾರಿಸಿದ—ಎರಡರರ್ಥವು ಒಂದೇ, ಅಸ್ಥಿಪಂಜರಗಳ ಊರಿನಲ್ಲಿ ಬೆಳಕಿನ ಚಿತ್ತಾರ ಹಾರಿಸಿ ದೀಪಾವಳಿ ಆಚರಿಸುವುದಾಗಲಿ, ಮತ್ತು ಹೆಣಗಳ ಮೇಲೆ ನಿಂತುಕೊಂಡು ಪ್ರೇಮಾಲಿಂಗನ ಮಾಡುವುದಾಗಲಿ ಎರಡೂ ಒಂದೇ ವಿಚಾರವಾಗಿದೆ.

ಅವನು ಊರಿನ ಮಧ್ಯದಲ್ಲಿ ಬಂದ. ಪ್ರಾರಂಭದಲ್ಲಿ ಹಮೀದ ಮಿಂಯಾನ ಮನೆಯಿತ್ತು. ಊರಿಗೆಲ್ಲಾ ಚಾಚಾ ಎನ್ನಿಸಿಕೊಂಡ ಹಮೀದ್. ಹಮೀದನ ಅಂಗಳದಲ್ಲಿ ಹೋಗಿ—'ರೂಕಿಯಾ! ರೂಕಿಯಾ!' ಎಂದು ಕರೆದ.

'ಅಯ್ಯೋ ಅಪ್ಪಾ ನಮ್ಮಪ್ಪಾ, ಬಾ ಅಣ್ಣಾ' ಒಂದು ಗುಡಿಸಲಿನಿಂದ ಕಂಪಿಸುವ ಧ್ವನಿ ಬಂದಿತು.

'ಅರೇ!ನೀನು ಬಿದ್ದುಕೊಂಡು ಬಿಟ್ಟಿಯಾ? ಹಮೀದ ಚಾಚಾ ಹೇಗಿದ್ದಾನೆ, ಮತ್ತೇ ಚಾಚಿ!?' ತಲೆ ಬಾಗಿಸಿ ಒಳಗೆ ಹೋದ. ರೂಕಿಯಾ ನೆಲದ ಮೇಲೆ ಚಿಂದಿಗಳಲ್ಲಿ ಬಿದ್ದು ಕಂಪಿಸುತ್ತಿದ್ದಳು.

ಮನಮೋಹನ ಉರಿಯುವ ದೀಪ ಎತ್ತಿಕೊಂಡು ಎರಡನೇ ಗುಡಸಲಿಗೆ ಹೋಗಿ ನೋಡಿದ—ಹಮೀದನ ಹೆಣ ಸೆಟೆದುಕೊಂಡಿತ್ತು, ಹಾಗೂ ಪಕ್ಕದಲ್ಲಿಯೆ ಮುದುಕಿಯು ಬಾಯಿ ತೆರೆದು ಬಿದ್ದುಕೊಂಡಿದ್ದಳು. ಅವನೊಂದು ದೀರ್ಘವಾದ ಶ್ವಾಸ ಬಿಟ್ಟು ಹೊರಗೆ ಬಂದ. ನೆಲದ ಮೇಲೆ ದೀಪ ಇಟ್ಟು ಹೇಳಿದ—"ಗಾಬರಿಯಾಗಬೇಡ ರೂಕಿಯಾ, ನಾನು ಇಲ್ಲೇ ಇದ್ದೇನೆ. ಡಾಕ್ಟರ ಬಂದಿದ್ದಾರೆ?"

"ಅಣ್ಣಾಜೀ ಬಹಳ ಚಳಿ ಆಗುತ್ತಾ ಇದೆ....ಬಹಳ ತಂಪು!"

ಮನಮೋಹನ ನೆಲದ ಮೇಲೆ ಕುಳಿತುಕೊಂಡ ಹಾಗೂ ಏನು ಮಾಡಬೇಕೆಂದು ವಿಚಾರಿಸತೊಡಗಿದ! ಇಡೀ ಗುಡಿಸಲಿನೆಡೆಗೆ ಒಮ್ಮೆ ನಿಗಾ ಹಾಕಿದ—ನಾಲ್ಕೂ ಕಡೆ ಹೊಲಸು ಹರಡಿತ್ತು. ಬಟ್ಟೆಯೆಂಬ ಹೆಸರಿನ ನಾಲ್ಕಾರು ಚಿಂದಿಗಳು ಅಲ್ಲಿ ಹರಡಿದ್ದವು. ಮೂರ್‍ನಾಲ್ಕು ಮಣ್ಣಿನ ಹಳೆಯ ಭಾಂಡೇ ಬರ್ತನ್‌ಗಳು—ತಂಪಿನಿಂದ ಕೂಡಿದ ಕೆಟ್ಟ ವಾಸನೆಯ ಸ್ಥಳ!

'ಅಣ್ಣಾ ನನಗೆ ಮೆತ್ತಿಕೊ, ನನ್ನ ಎಲುವುಗಳು ಬೇರೆ ಬೇರೆ ಆಗುತ್ತಿವೆ.'

ಮನಮೋಹನ ಆಕೆಯ ಬೆನ್ನಿನ ಮೇಲೆ ಮಲಗಿಕೊಂಡ. ಹೊಲಸು ಬಟ್ಟೆಗಳ ದುರ್ಗಂಧದಿಂದ ಅವನ ತಲೆ ತಿರುಗುತ್ತಿತ್ತು....ಓಹ್ ! ಎಷ್ಟೊಂದು ಆರೋಗ್ಯವಂತ ಹಾಗೂ ಶಕ್ತಿಯುಳ್ಳ ಹುಡುಗಿ ಆಗಿದ್ದಳು ಆಕೆ ! ಪರಿಶ್ರಮದಿಂದ ಎಂದೂ ಓಡಿಹೋದವಳಲ್ಲ. ಇಡೀ ಹಳ್ಳಿಯ ಸೇವೆ ಮಾಡುತ್ತಿದ್ದಳು ಆಕೆ. ಕ್ಯಾಂಪಿನಲ್ಲಿ ಬಂದ ಕಾಲೇಜು ವಿದ್ಯಾರ್ಥಿನಿಯರಿಗೆ ನಿಸ್ವಾರ್ಥ ಸೇವೆ ಎಂದರೇನೆಂಬ ಪಾಠ ಈಕೆ ಕಲಿಸಿಕೊಟ್ಟಿದ್ದಳು....ಈಕೆಯ ಸಶಕ್ತ ಬಾಹುಗಳು, ಸ್ವಸ್ಥ ಶರೀರ ಹಾಗೂ....

ಅವನು ತನ್ನ ದೇಹ ಒಂದಿಷ್ಟು ಸರಿಸಿದ. ಕೂಡಲೇ ರೂಕೀಯಾ ನರಳಿದಳು—'ಅಣ್ಣಾಜೀ! ನಾನು ಸತ್ತೇ ಹೋಗುವೆ ಇಲ್ಲಿಂದ ಸರಿಯಬೇಡ!' ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಮೋಹನ ಪುನಃ ಆಕೆಯನ್ನು ಜೋರಾಗಿ ಅಪ್ಪಿಕೊಂಡ—'ಭಯ ಪಡಬೇಡ ನಾನೆಲ್ಲಿಯೂ ಹೋಗುವುದಿಲ್ಲ. ಮಲೇರಿಯಾ ಇದೆ, ಸೂಜಿ ಚುಚ್ಚಿದ ಕೂಡಲೇ ಸರಿ ಹೊಂದುವಿ.'

ಅವನು ಕುಳಿತೇ ಇದ್ದ. ರೂಕಿಯಾ ನರಳುತ್ತಿದ್ದಳು ಮತ್ತು ನೀರು ಕೇಳುತ್ತಿದ್ದಳು. ನೀರು ಕುಡಿದು ವಾಂತಿ ಮಾಡತೊಡಗುತ್ತಿದ್ದಳು. ಮತ್ತೇ ಅಳುತ್ತಿದ್ದಳು. ಮನಮೋಹನ ಆಕೆಯ ಸೇವೆ ಮಾಡುತ್ತಿದ್ದ....ಅಂಗಳದಲ್ಲಿ ನೆಲದ ವಾಸನೆ ನೋಡುತ್ತ ಒಂದು ನರಿ ಪ್ರವೇಶಿಸಿತು. ರೂಕಿಯಾನ ನರಳುವಿಕೆಯಿಂದ ಭಯಬಿದ್ದು ಅದು ಗುಡಿಸಲ ಕಡೆಗೆ ನೋಡಿತು. ಅದರ ಕಣ್ಣುಗಳು ಕತ್ತಲೆಯಲ್ಲಿ ಹೊಳೆಯತೊಡಗಿದವು. ಬಹಳ ಹೊತ್ತಿನವರೆಗೆ ಹಾಗೆಯೇ ನೋಡುತ್ತಾ ಇತ್ತು. ಮನಮೋಹನನಿಗೆ ಎನಿಸಿತು ನರಿಯು ಆಶ್ಚರ್ಯದಿಂದ ನೋಡುತ್ತಾ ಇದೆ ಎಂದು. ಏಕೆಂದರೆ ರೂಕಿಯಾ ಅದನ್ನು ತನ್ನ ಎರಡೂ ಕೈಗಳಿಂದ ಜೋರಾಗಿ ಹಿಡಿದಿಟ್ಟಿದ್ದಳು.

□

---

ಕಾಶೀನಾಥ ಅಂಬಲಿಗೆ
ಅಧ್ಯಕ್ಷರು, ಹಿಂದಿ ಅಧ್ಯಯನ ವಿಭಾಗ
ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ - ೫೮೫ ೧೦೬

# ಪದ ಪ್ರಕರಣ

ತಮಿಳು ಮೂಲ : ಅಬ್ದುಲ್ ರೆಹಮಾನ್
ಅನುವಾದ : ಶ್ರೀ ಕೃಷ್ಣಭಟ್ ಅರ್ತಿಕಜೆ

ಪ್ರಪಂಚದಲ್ಲಿ
ನಾನು ಬಹುವಾಗಿ ಹೆದರುವುದು
ಪದಗಳಿಗೆ
ಹೆಚ್ಚು ಪ್ರೀತಿಸುವುದು
ಅವುಗಳನ್ನೆ
ಮೋಹಕವಾದ
ಆ ವಿಷಕನ್ಯೆಗಳನ್ನು
ಹಲವು ಸಲ ಚುಂಬಿಸಿ
ಸತ್ತಿದ್ದೇನೆ

* * *

ಪದಗಳ ಮಟ್ಟಿಗೆ
ನಾನೊಬ್ಬ ಜಿಪುಣ
ಪ್ರಬಂಧ ಬರೆಯುವುದು
ಅಷ್ಟೇಕೆ ಪತ್ರ ಬರೆಯುವುದು ಸಹ

ನನ್ನ ಮಟ್ಟಿಗೆ
ದುಂದು ವೆಚ್ಚವೇನೆ

* * *

ಪದಗಳನ್ನು ನಾನಾಡುವಾಗ
ಕೆಲವು ಸಲ
ಬಟ್ಟೆ ಬಿಚ್ಚುವಂತೆ ತೋಚುತ್ತದೆ
ಕೆಲವು ಸಲ
ಬಟ್ಟೆ ಉಟ್ಟುಕೊಳ್ಳುವಂತೆ ಕಾಣುತ್ತದೆ

* * *

ಕೆಲವು ಸಮಯ
ಬಾಯಿಂದ ಕಣ್ಣೀರ ಹನಿಗಳು
ಉದುರುವಂತೆ ತೋಚಿ
ದಿಗಿಲುಗೊಂಡಿದ್ದೇನೆ
ನನ್ನವಳು ಮಾತಾಡಿದರೆ
ಕಾರ್ತೀಕ ದೀಪಗಳು
ಸಾಲಾಗಿ ಅರಳುತ್ತವೆ
ಅಂದು ಒಬ್ಬ ರಾಜಕಾರಣಿ ಮಾತನಾಡಿದ,
ಬಾಯಿಂದ ಹೆಣಗಳು ಉದುರುತ್ತಿದ್ದುವು
ಏನೇ ಇದ್ದರು ಎಲ್ಲರಿಗಿಂತ
ಆಳವಾಗಿ ಆಡುವವನು, ಮೂಕ

* * *

ಹಲವು ಬಗೆ ಪದಗಳನ್ನು
ನಾನು ಕಂಡಿದ್ದೇನೆ,
ಚೆಲುವುಗಳ ರಾಶಿಯನ್ನು
ಬುರ್ಖಾದೊಳಗೆ
ಬಚ್ಚಿಟ್ಟುಕೊಂಡು ಹೋಗುವ ಪದಗಳು
ಕೆಂಪುದೀಪ ಪ್ರದೇಶದಲ್ಲಿ
ಬಿಂದಿಯಾದ ಹೂನಗೆಯೊಂದಿಗೆ
ಆಹ್ವಾನಿಸುವ ಪದಗಳು
ಪ್ರಸ್ಥದ ಕೋಣೆಯೊಳಗೆ

ಮದುವೆಯ ಮಾಲೆಯೊಂದಿಗೆ
ನಾಚಿಕೊಂಡು ಒಳಬರುವ ಪದಗಳು

* * *

ತಲೆಗಳನ್ನ ಕೊಯ್ಸಿಕೊಂಡು
ಮಾಲೆ ಹಾಕಿಕೊಂಡು
ಘೋರ ನರ್ತನವಾಡುವ ಪದಗಳು
ಹಸಿದು ಅಳುವಾಗ
ಸೆರಗನ್ನು ಸರಿಸಿ
ಹಾಲೂಡಿಸುವ ಪದಗಳು
ಬಿಳಿ ಸೀರೆ ಧರಿಸಿ
ಕಣ್ಣೀರು ಸುರಿಸುವ ಪದಗಳು

* * *

ಎಲ್ಲರಿಗೂ ಹೇಗಾದರೂ
ಏನಾದರೂ ಆಡಬೇಕೆನ್ನುವ ಆಸೆ
ಸಂಜೆ
ಒಂದೊಂದು ನಕ್ಷತ್ರವಾಗಿ
ಕಾಗುಣಿತ ಸೇರಿಸಿ
ಅಭ್ಯಾಸ ಮಾಡುತ್ತವೆ
ರಾತ್ರಿ
ಪೆರೆ(...)ಯಾಗಿ
ತೊದಲಿ ತೊದಲಿ
ಒಂದು ದಿನ ಪೂರ್ಣವಾಗಿ
ಒಂದು ಪದವನ್ನ
ಉಚ್ಚರಿಸಿ
ಬಿಳುಚಿಕೊಳ್ಳುತ್ತದೆ
ಭೂಮಿ
ವಸಂತದಲ್ಲಿ ತನ್ನ ರಹಸ್ಯಗಳನ್ನೆಲ್ಲ
ಬಣ್ಣವಾಗಿಯೂ ಪರಿಮಳವಾಗಿಯೂ
ಆಡಿಮುಗಿಸಿ ಬಿಡುತ್ತದೆ
ಮುಗಿಲು

ವೇದಿಕೆಯೇರಿ, ಕೆಮ್ಮಿ,
ಗಂಟಲ ಸರಿಪಡಿಸಿಕೊಂಡು
ಸಾಹಿತ್ಯ ಪ್ರವಚನ ಮಾಡುತ್ತದೆ
ಕಡಲಿಗೆ
ಅದೇನು ಅವಸರದ ವಿಷಯವೋ
ದಡದೊಂದಿಗೆ ವಿರಾಮವಿಲ್ಲದೆ
ಹರಟುತ್ತಲೇ ಇದೆ
ಗಾಳಿ
ಎದುರು ಬರುವ ಎಲ್ಲರೊಡನೆಯು
ತನ್ನ ದೂರನ್ನು ಅತ್ತು ಮುಂದೆ ಸರಿಯುತ್ತದೆ
ನದಿ
ಪ್ರಿಯಕರನನ್ನು ನೋಡಲು ಹೋಗುವ
ಸಂತೋಷವನ್ನು ಉದ್ದಕ್ಕೂ
ಕೊಚ್ಚುತ್ತಲೇ ಹೋಗುತ್ತಿದೆ

* * *

ಜಗತ್ತಿನಲ್ಲೇ
ನನಗೆ ವಿಸ್ಮಯ ತಂದ
ಅಮರ ಪ್ರೇಮಿಗಳೆಂದರೆ
ಪದವೂ ಅರ್ಥವೂ
ಅವರ ಸಂಗಮದಂತೆ
ಒಂದು ಸಂಗಮವಿಲ್ಲ,
ನನ್ನ ಪ್ರೇಮಪತ್ರ
ಹೀಗೇನೆ ಪ್ರಾರಂಭವಾಗಿತ್ತು ;
ನಾನು ಬರಿಪದ
ನೀನೇ ಅದರ ಅರ್ಥ

ಡಾ. ಶ್ರೀಕೃಷ್ಣಭಟ್ ಅರ್ತಿಕಜೆ
ಎ-೮, ಶಾಂತಿ ಅಪಾರ್ಟ್‌ಮೆಂಟ್ಸ್
೧೬/೫, ಬಾಲಕೃಷ್ಣ ಸ್ಟ್ರೀಟ್, ಮ್ಯಾಲಪೋರೆ, ಚೆನ್ನೈ - ೬೦೦ ೦೦೪
ದೂರವಾಣಿ : ೪೯೮೭೨೫೨೦

# ಲರೋಷ್‌ಫೋಕೊನ ಸಾರೋಕ್ತಿಗಳು

ಮೂಲ : ಫ್ರೆಂಚ್
ಅನುವಾದ : ವಿ. ಶ್ರೀನಿವಾಸ

ಹದಿನೇಳನೆಯ ಶತಮಾನದ ಖ್ಯಾತ ಫ್ರೆಂಚ್ ಸೂಕ್ತಿಕಾರ ಲ ರೋಷ್‌ಫೋಕೋ (La Rochefaucould) (೧೬೧೩-೧೬೮೦) ಲೋಕಾನುಭವದ ರಸಘಟ್ಟಿಗಳಾಗಿರುವ, ಜೀವನ ವಿವೇಕದ ಆಣಿಮುತ್ತುಗಳಾಗಿರುವ ತನ್ನ ಸಾರೋಕ್ತಿ (Maxims) ಗಳಿಂದಲೇ ವಿಶ್ವ ಸಾಹಿತ್ಯದಲ್ಲಿ ಅಮರನಾಗಿದ್ದಾನೆ. ಆತ, ಡಾ|| ಡಿ.ವಿ.ಜಿ.ಯವರ ನುಡಿಗಟ್ಟೊಂದನ್ನು ಬಳಸಿಕೊಂಡು ಹೇಳುವುದಾದರೆ, 'ಮಾನವ ಹೃದಯ ವ್ಯಾಪಾರ ಮರ್ಮ ಸರ್ವಜ್ಞ'. ರೋಷ್‌ಫೋಕೋ ಜೀವನ ವಿಶ್ವವಿದ್ಯಾನಿಲಯದ ಪದವೀಧರ. 'ಮನುಷ್ಯರನ್ನು ಅರ್ಥ ಮಾಡಿಕೊಳ್ಳುವುದು ಗ್ರಂಥಗಳ ಅಧ್ಯಯನಕ್ಕಿಂತಲೂ ಮುಖ್ಯವಾದದ್ದು' ಎಂದು ಆತ ದೃಢವಾಗಿ ನಂಬಿದ್ದನು. ಬಹುಶಃ ಆಂಗ್ಲ ಕವಿ ಸಾರ್ವಭೌಮ ವಿಲಿಯಂ ಷೇಕ್ಸ್‌ಪಿಯರ್ ಒಬ್ಬನನ್ನು ಬಿಟ್ಟರೆ, ಮನುಷ್ಯ ಸ್ವಭಾವವನ್ನು, ಮಾನವ ಹೃದಯದ ಒಳತೋಟಿಯನ್ನು, ಈ ವಿಚಿತ್ರ ಜಗತ್ತಿನ ರೀತಿ-ನೀತಿಗಳನ್ನು, ಈತನಷ್ಟು ಚೆನ್ನಾಗಿ ಅರ್ಥ ಮಾಡಿಕೊಂಡಿರುವವನು ಜಗತ್ತಿನಲ್ಲಿಯೇ ಮತ್ತೊಬ್ಬನಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು.

೧. ಔಷಧಿಗಳ ಸಮ್ಮಿಶ್ರಣದಲ್ಲಿ ವಿಷಗಳಿರುವಂತೆ, ಸದ್ಗುಣಗಳ ಸಂಯೋಜನೆಯಲ್ಲಿ ದುರ್ಗುಣಗಳಿಗೂ ಒಂದು ಸ್ಥಾನವುಂಟು : ವಿವೇಕವು ಅವುಗಳನ್ನು ಬೆರೆಸಿ, ಹದಗೊಳಿಸಿ, ಜೀವನದ ಕೇಡುಗಳ ಪರಿಹಾರಕ್ಕಾಗಿ ಬಳಸಿಕೊಳ್ಳುತ್ತದೆ.

೨. ಕಡೆಯವರೆಗೂ ನಮ್ಮ ವಿವೇಚನೆಯನ್ನೇ ಅನುಸರಿಸುವ ಶಕ್ತಿ ನಮಗಿಲ್ಲ.

೩. ಭಾವೋದ್ರೇಕವು ಅತಿ ಬುದ್ಧಿವಂತರನ್ನು ಮೂರ್ಖರನ್ನಾಗಿಯೂ, ತಿಳಿಗೇಡಿಗಳನ್ನು ವಿವೇಕಿಗಳನ್ನಾಗಿಯೂ ಮಾಡಿಬಿಡುತ್ತದೆ.

೪. ನಮ್ಮ ಮನಸ್ಸಿನ ಚಂಚಲತೆಯು ನಮ್ಮ ಅದೃಷ್ಟದ ಚಂಚಲತೆಗಿಂತಲೂ ಹೆಚ್ಚು ಶಕ್ತಿಶಾಲಿ.

೫. ಭಾವೋದ್ರೇಕಗಳು ನ್ಯಾಯವನ್ನು ಬದಿಗೊತ್ತಿ ತಮ್ಮ ಸ್ವಂತ ಉದ್ದೇಶಗಳ ಸಾಧನೆಯಲ್ಲಿ ತೊಡಗುತ್ತವೆ. ಆದ್ದರಿಂದ, ಅವುಗಳನ್ನು ಅನುಸರಿಸುವುದು ಅಪಾಯಕಾರಿ. ಅವು ಅತ್ಯಂತ ನ್ಯಾಯಸಮ್ಮತವಾಗಿರುವಂತೆ ಕಂಡುಬಂದಾಗಲೂ ನಾವು ಅವುಗಳ ಬಗ್ಗೆ ಎಚ್ಚರಿಕೆಯಿಂದಿರಬೇಕಾದುದು ಅಗತ್ಯ.

೬. ಭಾವೋದ್ರೇಕಗಳು ಆಗಾಗ್ಗೆ ತಮಗೆ ತದ್ವಿರುದ್ಧವಾದ ಭಾವೋದ್ರೇಕಗಳಿಗೆ ಜನ್ಮ ನೀಡುವುದುಂಟು. ಕೆಲವೊಮ್ಮೆ ದುರಾಸೆಯಿಂದ ದುಂದುಗಾರಿಕೆಯೂ, ದುಂದುಗಾರಿಕೆಯಿಂದ ದುರಾಸೆಯೂ ಹುಟ್ಟುತ್ತದೆ; ಎಷ್ಟೋ ವೇಳೆ ಮನುಷ್ಯ ದೌರ್ಬಲ್ಯದ ಮೂಲಕವೇ ದೃಢಚಿತ್ತವೂ, ಪುಕ್ಕಲುತನದ ಮೂಲಕವೇ ಧೈರ್ಯಶಾಲಿಯೂ ಆಗುತ್ತಾನೆ.

೭. ಮನುಷ್ಯರು ಸದ್ಗುಣವೆಂದು ಕರೆಯುವ ಕ್ಷಮಾಶೀಲತೆಯು ಎಷ್ಟೋ ವೇಳೆ ಒಣ ಹೆಮ್ಮೆಯಿಂದ, ಎಷ್ಟೋ ವೇಳೆ ಅಲಸಿಕೆಯಿಂದ, ಆಗಾಗ್ಗೆ ಭಯದಿಂದ, ಬಹುಮಟ್ಟಿಗೆ ಯಾವಾಗಲೂ ಒಟ್ಟಾರೆ ಇವು ಮೂರು ಕಾರಣಗಳಿಂದಲೂ ಪ್ರೇರಿತವಾಗಿರುತ್ತದೆ.

೮. ಬುದ್ಧಿವಂತರ ದೃಢಚಿತ್ತತೆಯೆಂಬುದು ಅವರ ಎದೆಗುದಿಯನ್ನು ಅವರ ಹೃದಯಗಳಲ್ಲಿ ಅಡಗಿಸಿಡುವ ಕಲೆ.

೯. ತತ್ವಜ್ಞಾನವು ಗತಕಾಲದ ಕೇಡುಗಳನ್ನೂ, ಮುಂದೆ ಬರಲಿರುವ ಕೇಡುಗಳನ್ನೂ ಸುಲಭವಾಗಿ ಜಯಿಸುತ್ತದೆ. ಆದರೆ, ವರ್ತಮಾನಕಾಲದ ಕೇಡುಗಳು ತತ್ವಜ್ಞಾನವನ್ನು ಗೆದ್ದುಬಿಡುತ್ತವೆ.

೧೦. ನಮ್ಮಲ್ಲಿ ದೋಷಗಳು ಇಲ್ಲದಿದ್ದರೆ ನಾವು ಇತರರಲ್ಲಿ ದೋಷಗಳನ್ನು ಕಾಣಲು ಅಷ್ಟೊಂದು ಸಂತೋಷಪಡುತ್ತಿರಲಿಲ್ಲ.

೧೧. ನಾವು ಸುಖವಾಗಿ ಬಾಳಲೆಂದು ನಮ್ಮ ಶರೀರದ ಅಂಗಾಂಗಗಳನ್ನು ಅಷ್ಟೊಂದು ವಿವೇಕಪೂರ್ಣವಾಗಿ ಜೋಡಿಸಿರುವ ಪ್ರಕೃತಿಯು ನಮ್ಮ ಲೋಪ-ದೋಷಗಳು ನಮಗೆ ಕಾಣದಿರಲೆಂದೇ ಜಂಭವನ್ನು ಕೊಟ್ಟಿದೆ.

೧೨. ನಾವು ತಪ್ಪಿತಸ್ಥರನ್ನು ಬಿಡಿಸುವಾಗ ಅನುಕಂಪಕ್ಕಿಂತಲೂ ಜಂಭವೇ ಅಧಿಕವಾಗಿರುತ್ತದೆ; ನಾವು ಅವರನ್ನು ನಿಂದಿಸುವುದು ಅವರ ತಪ್ಪುಗಳನ್ನು ತಿದ್ದಿ ಅವರನ್ನು ಒಳ್ಳೆಯ ದಾರಿಗೆ ತರುವುದಕ್ಕಿಂತಲೂ ಹೆಚ್ಚಾಗಿ, ಅವರಲ್ಲಿರುವ ದೋಷಗಳು ನಮ್ಮಲ್ಲಿ ಇಲ್ಲವೆಂದು ತೋರಿಸಿಕೊಳ್ಳುವುದಕ್ಕಾಗಿ.

೧೩. ಸ್ವ-ಹಿತವು ಎಲ್ಲ ಬಗೆಯ ಮಾತುಗಳನ್ನಾಡುವುದಲ್ಲದೆ, ನಿಸ್ವಾರ್ಥದ, ನಿರ್ಲಿಪ್ತತೆಯ ಸೋಗು ಕೂಡ ಸೇರಿದಂತೆ, ಎಲ್ಲ ಬಗೆಯ ವೇಷಗಳನ್ನೂ ಧರಿಸುತ್ತದೆ.

೧೪. ಸ್ವ-ಹಿತವು ಕೆಲವರನ್ನು ಕುರುಡರನ್ನಾಗಿಸಿ, ಮತ್ತೆ ಕೆಲವರನ್ನು ಪ್ರಾಜ್ಞರನ್ನಾಗಿ ಮಾಡುತ್ತದೆ.

೧೫. ಸಣ್ಣ ವಿಷಯಗಳನ್ನು ಅತಿಯಾಗಿ ತಲೆಗೆ ಹಚ್ಚಿಕೊಳ್ಳುವವರು ಸಾಮಾನ್ಯವಾಗಿ ದೊಡ್ಡ ವಿಷಯಗಳ ಬಗ್ಗೆ ಚಿಂತಿಸಲು ಅಸಮರ್ಥರಾಗುತ್ತಾರೆ.

೧೬. ಜಗತ್ತಿನಲ್ಲಿ ಯಶಸ್ವಿಯಾಗಲೆಂದು ಜನರು ತಾವು ಯಶಸ್ವಿಗಳಾಗಿರುವಂತೆ ತೋರಿಸಿಕೊಳ್ಳಲು ಶಕ್ತಿ ಮೀರಿ ಶ್ರಮಿಸುತ್ತಾರೆ.

೧೭. ಜನರು ತಮ್ಮ ಮಹತ್ಕಾರ್ಯಗಳಿಗಾಗಿ ಹೆಮ್ಮೆಪಟ್ಟುಕೊಳ್ಳುವರಾದರೂ, ಅವು ಧೀರೋದ್ದಾತ್ತ ಪೂರ್ವ ಸಂಕಲ್ಪದ ಫಲವಾಗಿರುವುದು ಅಪರೂಪ. ಅವು ಅವಕಾಶದ ಪರಿಣಾಮಗಳಷ್ಟೇ ಆಗಿರುತ್ತವೆ.

೧೮. ಮನುಷ್ಯರ ಸುಖ ಅಥವಾ ಅಸುಖವು ಅದೃಷ್ಟವನ್ನಷ್ಟೇ ಅಲ್ಲದೆ ಅವರ ಮನೋಧರ್ಮವನ್ನು ಅವಲಂಬಿಸಿರುತ್ತದೆ.

೧೯. ಪ್ರಾಮಾಣಿಕತೆ ಎಂದರೆ ಹೃದಯದ ಪ್ರಾಂಜಲತೆ, ಬಿಚ್ಚು ಮನಸ್ಸು, ಅದು ಕೆಲವೇ ಕೆಲವರಲ್ಲಿ ಮಾತ್ರ ಇರುತ್ತದೆ. ಸಾಮಾನ್ಯವಾಗಿ ಕಂಡುಬರುವುದು ಇತರರ ವಿಶ್ವಾಸವನ್ನು ಗಳಿಸಿಕೊಳ್ಳುವ ಸೂಕ್ಷ್ಮ ನಟನೆ, ವಂಚನೆ.

೨೦. ಸುಳ್ಳು ಹೇಳುವುದಕ್ಕೆ ಇಷ್ಟವಿಲ್ಲದಿರುವುದು ನಮ್ಮ ಸ್ವಂತ ಹೇಳಿಕೆಗಳಿಗೆ ಬೆಲೆ ದೊರೆತು ನಮ್ಮ ಮಾತನ್ನು ಪರಮ ಸತ್ಯವೆಂದು ಎಲ್ಲರೂ ಒಪ್ಪಿಕೊಳ್ಳುವಂತಾಗಲೆಂಬ ಗುಪ್ತ ಬಯಕೆಯೇ ಆಗಿರುತ್ತದೆ.

೨೧. ಲೋಕದಲ್ಲಿ ಸತ್ಯದಿಂದಾಗುವ ಒಳ್ಳೆಯದಕ್ಕಿಂತಲೂ, ಸತ್ಯದ ಸೋಗಿನಿಂದ ಉಂಟಾಗುವ ಕೆಡುಕೆ ಹೆಚ್ಚಾಗಿರುತ್ತದೆ.

೨೨. ಪ್ರೇಮದ ಅರ್ಥ ವಿವರಣೆ ನೀಡುವುದು ಕಷ್ಟ. ಇಷ್ಟು ಹೇಳಬಹುದು : ಆತ್ಮದಲ್ಲಿ, ಅದು ಮತ್ತೊಬ್ಬರ ಮೇಲೆ ಸರ್ವಾಧಿಕಾರ ಚಲಾಯಿಸುವ ಭಾವೋದ್ರೇಕ; ಮನಸ್ಸಿನಲ್ಲಿ, ಅದು ಪರಸ್ಪರ ಅರಿವು, ತಿಳಿವಳಿಕೆ; ದೇಹದಲ್ಲಿ, ಅದು ನಮಗೆ ಪ್ರಿಯವಾದ ವ್ಯಕ್ತಿಯನ್ನು ವಿಧ್ಯುಕ್ತವಾಗಿ, ಶಾಸ್ತ್ರೋಕ್ತವಾಗಿ ನಮ್ಮದನ್ನಾಗಿ ಮಾಡಿಕೊಳ್ಳುವ ಪ್ರಚ್ಛನ್ನ ಬಯಕೆ.

೨೩. ನಮ್ಮ ಇತರ ಭಾವೋದ್ರೇಕಗಳಿಂದ ಕಲುಷಿತಗೊಳ್ಳದ ಶುದ್ಧ ಪ್ರೇಮವೆಂಬುದು ಇರುವುದಾದರೆ, ಅದು ನಮ್ಮ ಹೃದಯದ ಅಂತರಾಳದಲ್ಲಿ ನಮಗೇ ತಿಳಿಯದಂತೆ ಅಡಗಿರುತ್ತದೆ.

೨೪. ಪ್ರೇಮವು ಇರುವೆಡೆಯಲ್ಲಿ ಅದನ್ನು ಯಾವ ಸೋಗಿನಿಂದಲೂ ಬಹುಕಾಲ ಮುಚ್ಚಿಡುವುದು ಸಾಧ್ಯವಿಲ್ಲ. ಅದು ಇಲ್ಲದೆಡೆಯಲ್ಲಿ ಯಾವುದರಿಂದಲೂ ಅದರ ಅನುಕರಣೆ ಸಾಧ್ಯವಿಲ್ಲ.

೨೫. ತಮ್ಮ ಪರಸ್ಪರ ಪ್ರೇಮವು ಅಳಿದುಹೋದ ಮೇಲೆ, ಆ ಪ್ರೇಮಕ್ಕಾಗಿ ನಾಚಿಕೆ ಪಡದಿರುವವರು ಅಪರೂಪ.

೨೬. ಪ್ರೇಮವು ಬೆಂಕಿಯಂತೆ - ನಿರಂತರ ಚಲನೆಯಿಲ್ಲದೆ ಬದುಕುಳಿಯಲಾರದು. ಆಶಿಸಲು ಅಥವಾ ಭಯಪಡಲು ಏನೂ ಇಲ್ಲದಂತಾದಾಗ ಅದು ಇಲ್ಲವಾಗುತ್ತದೆ.

೨೭. ಬಹು ಮಂದಿಯ ನ್ಯಾಯಪ್ರಿಯತೆಯೆಂಬುದು ಅನ್ಯಾಯಕ್ಕೆ ಗುರಿಯಾಗುವ ಭೀತಿ ಮಾತ್ರ.

೨೮. ನಿಜವಾದ ಪ್ರೇಮವು ಅಪರೂಪ. ನಿಜವಾದ ಸ್ನೇಹವು ಅದಕ್ಕಿಂತಲೂ ಅಪರೂಪ.

೨೯. ಸ್ನೇಹಿತರನ್ನು ನಂಬದಿರುವುದು ಅವರಿಂದ ಮೋಸ ಹೋಗುವುದಕ್ಕಿಂತಲೂ ಹೆಚ್ಚು ಲಜ್ಜಾಸ್ಪದ.

೩೦. ಇತರರ ಬಗ್ಗೆ ನಾವು ತಳೆಯುವ ಸಂಶಯ ಅವರು ನಮಗೆ ಮೋಸ ಮಾಡುವುದಕ್ಕೆ ಸಮರ್ಥನೆಯಾಗುತ್ತದೆ.

೩೧. ಒಬ್ಬರಿಗೊಬ್ಬರು ಮೋಸ ಮಾಡದಿದ್ದರೆ ಸಾಮಾಜಿಕ ಜೀವನ ಬಹುಕಾಲ ನಡೆಯುತ್ತಲೇ ಇರಲಿಲ್ಲ.

೩೨. ಪ್ರತಿಯೊಬ್ಬನೂ ತನ್ನ ಜ್ಞಾಪಕಶಕ್ತಿಯ ಬಗ್ಗೆ ದೂರುತ್ತಾನೆ. ಆದರೆ, ಯಾವನೂ ತನ್ನ ವಿವೇಚನೆಯ ಬಗ್ಗೆ ದೂರುವುದಿಲ್ಲ.

೩೩. ನಿತ್ಯಜೀವನದಲ್ಲಿ ನಮ್ಮ ಸದ್ಗುಣಗಳಿಗಿಂತಲೂ ಹೆಚ್ಚಾಗಿ ನಮ್ಮ ದೋಷಗಳಿಗಾಗಿಯೇ ಎಷ್ಟೋ ವೇಳೆ ಜನರು ನಮ್ಮನ್ನು ಮೆಚ್ಚುವುದುಂಟು.

೩೪. ದೊಡ್ಡ ಹೆಸರುಗಳು ಅನರ್ಹರನ್ನು ಮೇಲೇರಿಸುವ ಬದಲಾಗಿ ಕೆಳಗಿಳಿಸುತ್ತವೆ.

೩೫. ಅಸಾಧಾರಣ ಪ್ರತಿಭೆಗೆ ಸಾಕ್ಷಿಯೆಂದರೆ ಅತ್ಯಂತ ಅಸೂಯಪರ ವ್ಯಕ್ತಿಗಳು ಕೂಡ ಅದನ್ನು ಮೆಚ್ಚಲೇಬೇಕಾಗುತ್ತದೆ.

೩೬. ತಲೆಯು ಹೆಚ್ಚು ಕಾಲ ಹೃದಯದ ಪಾತ್ರಾಭಿನಯ ಮಾಡಲಾರದು.

೩೭. ಯೌವನದ ಅಭಿರುಚಿಗಳು ಬದಲಾಗುತ್ತವೆ, ಅದರದು ಬಿಸಿ ರಕ್ತವಾದ್ದರಿಂದ ವೃದ್ಧಾಪ್ಯದ ಅಭಿರುಚಿಗಳಾದರೋ ಬದಲಾವಣೆ ಹೊಂದದೆ ಹಾಗೆಯೇ ಉಳಿಯುತ್ತವೆ, ಅಭ್ಯಾಸ ಬಲದಿಂದ.

೩೮. ನಾವು ಬುದ್ಧಿವಾದವನ್ನು ಕೊಡುವಷ್ಟು ಧಾರಾಳವಾಗಿ ಮತ್ತೇನನ್ನೂ ಕೊಡುವುದಿಲ್ಲ.

೩೯. ವಯಸ್ಸಾದಂತೆಲ್ಲ ಮುಖದ ದೋಷಗಳಂತೆಯೇ, ಮನಸ್ಸಿನ ದೋಷಗಳೂ ತೀವ್ರಗೊಳ್ಳುತ್ತವೆ.

೪೦. ಇತರರಿಗೆ ತಿಳಿಯದಂತೆ ಇತರರನ್ನು ವಂಚಿಸುವುದು ಎಷ್ಟು ಕಷ್ಟವೋ, ನಮಗೇ ತಿಳಿಯದಂತೆ ನಮ್ಮನ್ನು ನಾವು ವಂಚಿಸಿಕೊಳ್ಳುವುದು ಅಷ್ಟೇ ಸುಲಭ.

೪೧. ಇತರರ ಮುಂದೆ ವೇಷ ಮರೆಸಿಕೊಳ್ಳುವುದು ನಮಗೆ ಅದೆಷ್ಟು ರೂಢಿಯಾಗಿದೆಯೆಂದರೆ, ಕಡೆಗೆ ನಾವು ನಮ್ಮ ಮುಂದೆಯೇ ವೇಷ ಮರೆಸಿಕೊಂಡು ಬಿಡುತ್ತೇವೆ.

೪೧. ಎಷ್ಟೋ ವೇಳೆ ನಾವು ಒಳ್ಳೆಯದನ್ನು ಮಾಡುವುದು ದಂಡನೆಯ ಭೀತಿಯಿಲ್ಲದೆಯೇ ಕೆಟ್ಟದ್ದನ್ನು ಮಾಡಲೆಂದೇ.

೪೨. ನಮ್ಮನ್ನು ನಾವು ಹೊಗಳಿಕೊಳ್ಳದಿದ್ದರೆ, ನಿಜವಾಗಿ ನಮಗೆ ಬದುಕಿನಲ್ಲಿ ಸಂತೋಷವೇ ಸಿಗುವುದಿಲ್ಲ.

೪೩. ನಾವು ಇತರರಿಗಿಂತ ಹೆಚ್ಚು ಕುಹಕಿಗಳೆಂದು ತಿಳಿಯುವುದರಿಂದ ನಾವು ಬೆಸ್ತು ಬೀಳುವುದು ಖಚಿತ.

೪೪. ಇತರರ ವಿಷಯದಲ್ಲಿ ವಿವೇಕಿಗಳಾಗಿರುವುದು ಸ್ವಂತ ವಿಷಯದಲ್ಲಿ ವಿವೇಕಿಗಳಾಗಿರುವುದಕ್ಕಿಂತಲೂ ಹೆಚ್ಚು ಸುಲಭ.

೪೫. ನಮ್ಮಲ್ಲಿಲ್ಲದ ಗುಣಗಳು ನಮ್ಮಲ್ಲಿವೆಯೆಂದು ತೋರಿಸಲು ಹೋಗಿ ನಾವು ನಗೆಪಾಟಲಾಗುವಂತೆ, ನಮ್ಮಲ್ಲಿರುವ ಗುಣಗಳಿಂದ ನಾವು ಎಂದೂ ನಗೆಪಾಟಲಾಗುವುದಿಲ್ಲ.

೪೬. ಕೆಲವೇ ಮಾತುಗಳಲ್ಲಿ ಬಹಳಷ್ಟು ಸೂಚಿಸುವುದು ದೊಡ್ಡವರ ಲಕ್ಷಣ. ತದ್ವಿರುದ್ಧವಾಗಿ, ಅಲ್ಪಮತಿಗಳು ಏನನ್ನೂ ತಿಳಿಸದೆ ಬಹಳಷ್ಟು ಮಾತನಾಡುವ ವರವನ್ನು ಪಡೆದಿರುತ್ತಾರೆ.

೪೭. ನಾವು ಹೊಗಳಿಕೆಯನ್ನು ಮರಳಿ ಪಡೆಯುವುದಕ್ಕಲ್ಲದೆ ಹೊಗಳುವುದು ಅಪರೂಪ.

೪೮. ತಮ್ಮ ಅವನತಿಗೆ ಕಾರಣವಾಗುವಂತಹ ಹೊಗಳಿಕೆಗೆ ಬದಲಾಗಿ ಉಪಯುಕ್ತ ಟೀಕೆಯನ್ನು ಸ್ವಾಗತಿಸುವ ವಿವೇಕ ಬಹು ಮಂದಿಗಿಲ್ಲ.

೪೯. ಕೆಲವರು ಯೋಗ್ಯರಾದರೂ ಅಪ್ರಿಯರಾಗುತ್ತಾರೆ, ಇತರರು ತಮ್ಮಲ್ಲಿ ದೋಷಗಳಿದ್ದಾಗ್ಯೂ, ಪ್ರಿಯರಾಗುತ್ತಾರೆ.

೫೦. ಮಹಾನ್ ವ್ಯಕ್ತಿಗಳ ಕೀರ್ತಿಯನ್ನು ಅವರು ಅದನ್ನು ಗಳಿಸಿಕೊಳ್ಳಲು ಅನುಸರಿಸಿರುವ ವಿಧಾನಗಳ ಮೇಲಿಂದಲೇ ಯಾವಾಗಲೂ ಅಳೆಯಬೇಕು.

೫೧. ಹೊಗಳಿಕೆ ಎಂಬುದು ನಮ್ಮ ಒಣಪ್ರತಿಷ್ಠೆಯು ಚಲಾವಣೆಗೆ ತಂದಿರುವ ನಕಲಿ ನಾಣ್ಯ.

೫೨. ದೊಡ್ಡ ಗುಣಗಳಿದ್ದರಷ್ಟೇ ಸಾಲದು; ಅವುಗಳನ್ನು ಹೇಗೆ ನಿರ್ವಹಿಸಬೇಕೆಂಬುದು ತಿಳಿದಿರಬೇಕು.

೫೩. ಒಂದಾನೊಂದು ಕಾರ್ಯವು ಎಷ್ಟೇ ಶ್ಲಾಘನೀಯವಾಗಿದ್ದಾಗ್ಯೂ, ಅದರ ಹಿಂದೆ ಒಂದು ಮಹೋದ್ದೇಶವಿದ್ದ ಹೊರತು, ಅದನ್ನು ಮಹತ್ಕಾರ್ಯವೆಂದು ಪರಿಗಣಿಸಲಾಗದು.

೫೪. ಸಾಧಾರಣ ಬುದ್ಧಿಶಕ್ತಿಯಿಂದ ಅತ್ಯುತ್ತಮ ಪ್ರಯೋಜನವನ್ನು ಹೇಗೆ ಪಡೆದುಕೊಳ್ಳಬೇಕೆಂಬುದನ್ನು ತಿಳಿದಿರುವುದು ಒಂದು ಕಲೆ. ಈ ಕಲೆಯು ಮೆಚ್ಚುಗೆಗೆ ಪಾತ್ರವಾಗುವುದಲ್ಲದೆ, ನಿಜವಾದ ಯೋಗ್ಯತೆಗಿಂತಲೂ ಹೆಚ್ಚು ವ್ಯಾಪಕವಾದ ಪ್ರಸಿದ್ಧಿಯನ್ನು ಗಳಿಸುತ್ತದೆ.

೫೫. ಭರವಸೆಯೆಂಬುದು ಸುಳ್ಳಾಡುವ ಡಾಟಕಿಯಾಗಿರಬಹುದು. ಆದರೆ, ಆಕೆ ಹೇಗಾದರೂ ನಮ್ಮನ್ನು ನಮ್ಮ ಜೀವನದ ಕಡೆಯುವರೆಗೂ ಹಿತಕರ ಮಾರ್ಗದಲ್ಲಿ ಮುನ್ನಡೆಸುತ್ತಾಳೆ.

೫೬. ದೊಡ್ಡವರಿಗೆ ಮಾತ್ರ ದೊಡ್ಡ ತಪ್ಪುಗಳನ್ನು ಮಾಡುವ ಅಧಿಕಾರ.

೫೭. ನಮ್ಮಲ್ಲಿರುವ ಹಲವಾರು ದುರ್ಗಣಗಳಿರುವುದರಿಂದಲೇ, ನಾವು ಎಷ್ಟೋ ವೇಳೆ ಒಂದೇ ಒಂದು ದುರ್ಗಣಕ್ಕೆ ದಾಸರಾಗುವುದಿಲ್ಲ.

೫೮. ನಮಗಷ್ಟೇ ತಿಳಿದಿದ್ದಾಗ, ನಮ್ಮ ದುಷ್ಕೃತ್ಯಗಳು ಸುಲಭವಾಗಿ ಮರೆತು ಹೋಗುತ್ತವೆ.

೫೯. ಎಷ್ಟೋ ವೇಳೆ ಬುದ್ಧಿವಂತರಂತೆ ತೋರಿಸಿಕೊಳ್ಳುವ ಬಯಕೆಯೇ ನಮ್ಮನ್ನು ಬುದ್ಧಿವಂತರಾಗದಂತೆ ಮಾಡುತ್ತದೆ.

೬೦. ಜಣಪ್ರತಿಷ್ಠೆಯು ಜೊತೆಗಿಲ್ಲದಿದ್ದರೆ ಸದ್ಗುಣವು ಬಹು ದೂರ ಸಾಗದು.

೬೧. ಸಜ್ಜನರ ಕಣ್ಗಾವಲಿನಲ್ಲಿ ಸತತವಾಗಿ ಬಾಳಲು ಸಿದ್ಧವಾಗಿರುವ ವ್ಯಕ್ತಿ ನಿಜವಾಗಿಯೂ ಸಜ್ಜನನೇ.

೬೨. ನಮ್ಮ ಜೀವನದುದ್ದಕ್ಕೂ ಬಾಲಿಶ ಪ್ರವೃತ್ತಿ ಇದ್ದೇ ಇರುತ್ತದೆ. ಒಬ್ಬಾನೊಬ್ಬ ವ್ಯಕ್ತಿ ವಿವೇಕಿಯಂತೆ ಕಾಣಿಸಿಕೊಂಡರೆ, ಅದಕ್ಕೆ ಕಾರಣ ಆತನ ಅವಿವೇಕವು ಆತನ ವಯಸ್ಸು ಮತ್ತು ಪರಿಸ್ಥಿತಿಗಳಿಗೆ ಅನುಗುಣವಾಗಿದೆಯೆಂಬುದಷ್ಟೇ.

೬೩. ಇಡೀ ಜಗತ್ತಿನ ಎದುರಿಗೆ ಮಾಡಬಹುದಾದದ್ದನ್ನು ಸಾಕ್ಷಿಗಳಿಲ್ಲದೆಯೇ ಮಾಡುವುದೇ ನಿಜವಾದ ಕಲಿತನ.

೬೪. ಠಕ್ಕು ಅಥವಾ ಕಪಟಾಚರಣೆ ಎಂಬುದು ದುರ್ಗುಣವು ಸದ್ಗುಣಕ್ಕೆ ಸಲ್ಲಿಸುವ ಕಾಣಿಕೆ.

೬೫. ಬಹುತೇಕ ವೇಳೆ ಬೂಟಾಟಿಕೆ, ಲಜ್ಜಾಪ್ರವೃತ್ತಿ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಮನೋಧರ್ಮ- ಇವು ಪುರುಷರ ಪೌರುಷ ಮತ್ತು ಸ್ತ್ರೀಯರ ಪಾತಿವ್ರತ್ಯದ ಮುಖ್ಯಾಂಶಗಳಾಗಿರುತ್ತವೆ.

೬೬. ಕೃತಜ್ಞತೆ ವ್ಯಾವಹಾರಿಕ ಸದ್ಭಾವನೆಯಿದ್ದಂತೆ : ಅದರಿಂದ ವ್ಯಾಪಾರ ನಡೆಯುತ್ತದೆ. ನಾವು ಸಾಲ ತೀರಿಸುವುದು ನಮ್ಮ ಲೆಕ್ಕವನ್ನು ಚುಕ್ತಾ ಮಾಡುವುದು ಯುಕ್ತವೆಂಬ ಕಾರಣಕ್ಕಾಗಿಯಲ್ಲ, ಜನರು ನಮಗೆ ಸಾಲ ನೀಡಲು ಮುಂದಾಗುವರೆಂಬ ಕಾರಣಕ್ಕಾಗಿ.

೬೭. ಕೃತಜ್ಞತೆಯ ಋಣವನ್ನು ತೀರಿಸುವವರೆಲ್ಲರೂ ತಾವೂ ಕೃತಜ್ಞರಾಗಿರುವರೆಂದು ಆತ್ಮಪ್ರಶಂಸೆ ಮಾಡಿಕೊಳ್ಳಲಾರರು.

೬೮. ನಾವು ಮಾಡುವ ಉಪಕೃತಿಗಳಿಗಾಗಿ ನಮಗೆ ದೊರಕುವ ಕೃತಜ್ಞತೆಯು ನಮ್ಮ ನಿರೀಕ್ಷೆಗಿಂತಲೂ ಕಡಿಮೆಯಾಗುವುದಕ್ಕೆ ಉಪಕಾರಿ ಮತ್ತು ಉಪಕೃತರೀರ್ವರ ಜಂಭ, ಅಹಂಭಾವವೇ ಕಾರಣ. ಏಕೆಂದರೆ, ಅವರೀರ್ವರಲ್ಲಿ ಉಪಕೃತಿಯ ಮೌಲ್ಯದ ಬಗ್ಗೆ ಒಮ್ಮತವಿರುವುದಿಲ್ಲ.

೬೯. ಸಾಲವನ್ನು ಮರುಪಾವತಿ ಮಾಡಲು ಮಿತಿ ಮೀರಿದ ತವಕವೇ ಒಂದು ಬಗೆಯ ಕೃತಘ್ನತೆ.

೭೦. ಅದೃಷ್ಟಶಾಲಿಗಳು ತಮ್ಮ ನಡತೆಯನ್ನು ತಿದ್ದಿಕೊಳ್ಳುವುದು ಅಪರೂಪವೇ. ಏಕೆಂದರೆ, ಅದೃಷ್ಟ ಬಲದಿಂದ ಅವರ ದುಷ್ಕೃತ್ಯಗಳು ಯಶಸ್ವಿಯಾದಾಗ, ಅವರು ತಾವೆಸಗಿದ ಕೃತ್ಯಗಳು ಸರಿಯಾಗಿದ್ದುದರಿಂದಲೇ ತಮಗೆ ಯಶಸ್ಸು ದೊರೆಯಿತೆಂದು ತಿಳಿಯುತ್ತಾರೆ.

೭೧. ಹೆಮ್ಮೆಯು ಮತ್ತೊಬ್ಬರ ಋಣದಲ್ಲಿರಲು ನಿರಾಕರಿಸಿದರೆ, ಸ್ವ-ಪ್ರೇಮವು ಮತ್ತೊಬ್ಬರಿಗೆ ಕೊಡಲು ನಿರಾಕರಿಸುತ್ತದೆ.

೭೨. ತಾನೇ ಸ್ವತಂತ್ರವಾಗಿ, ತನ್ನ ಸಾಧನೆಗಳ ಮೇಲೆಯೇ ವಿವೇಕಿಯಾಗಿರಲು ಪ್ರಯತ್ನಿಸುವುದು ಶುದ್ಧ ಅವಿವೇಕ.

೭೩. ನಾವು ಇತರರ ಲಾಭಕ್ಕಾಗಿ ದುಡಿಯುವಾಗ ನಮ್ಮ ಸ್ವ-ಪ್ರೇಮವು ಕರುಣೆಯ ಪ್ರಭಾವದಿಂದ ತನ್ನನ್ನು ತಾನು ಮರೆತಂತೆ ಕಂಡುಬರುವುದಾದರೂ, ಇದು ನಮ್ಮ ಉದ್ದೇಶಗಳನ್ನು ಸಾಧಿಸಿಕೊಳ್ಳುವ ಅತ್ಯಂತ ಖಚಿತವಾದ ಮಾರ್ಗ. ಉಚಿತವಾಗಿ ನೀಡಿದಂತೆ ನಟಿಸಿ ಬಡ್ಡಿಗೆ ಸಾಲ ಕೊಟ್ಟಂತೆ. ನಿಜವಾಗಿ ಅದು ಎಲ್ಲರನ್ನೂ ನಮ್ಮತ್ತ ಸೂಕ್ಷ್ಮಾತಿ ಸೂಕ್ಷ್ಮ ವಿಧಾನಗಳಿಂದ ಸೆಳೆದುಕೊಳ್ಳುವ ಮಾರ್ಗ.

೭೪. ಕೆಟ್ಟವನಾಗುವಷ್ಟು ಶಕ್ತನಲ್ಲದ ಯಾವೊಬ್ಬನೂ ಒಳ್ಳೆಯವನೆಂಬ ಮೆಚ್ಚುಗೆಗೆ ಅರ್ಹನಲ್ಲ. ಏಕೆಂದರೆ, ಉಳಿದೆಲ್ಲ ಒಳ್ಳೆಯತನ, ಸಾಮಾನ್ಯವಾಗಿ, ಕೇವಲ ಜಡತೆ ಇಲ್ಲವೆ ಇಚ್ಛಾಶಕ್ತಿಯ ಕೊರತೆ.

೭೫. ಬಹುಸಂಖ್ಯಾತ ಜನರಿಗೆ ಕೆಟ್ಟದ್ದನ್ನು ಮಾಡುವುದು ಅವರಿಗೆ ಬಹಳಷ್ಟು ಒಳ್ಳೆಯದನ್ನು ಮಾಡುವುದರಷ್ಟು ಅಪಾಯಕಾರಿಯಲ್ಲ.

೭೬. ಬಹಳಷ್ಟು ಕೆಲಸ- ಕಾರ್ಯಗಳು ಅಸಾಧ್ಯವಾದುವೇನಲ್ಲ; ಅವುಗಳನ್ನು ಯಶಸ್ವಿಗೊಳಿಸಲು ಸಾಧ್ಯವಾಗದಿರುವುದಕ್ಕೆ ಸಾಧನಗಳ ಕೊರತೆಗಿಂತಲೂ ಮಿಗಿಲಾಗಿ, ನಮ್ಮಲ್ಲಿ ಪಟ್ಟು ಹಿಡಿದು ಸಾಧಿಸುವ ಅಚಲ ನಿಷ್ಠೆ ಇಲ್ಲದಿರುವುದೇ ಕಾರಣ.

೭೭. ವಸ್ತುಗಳ ನಿಜವಾದ ಬೆಲೆಯನ್ನು ತಿಳಿದಿರುವುದೇ ಪರಮ ಶ್ರೇಷ್ಠ ಬುದ್ಧಿ ಚಾತುರ್ಯ.

೭೮. ಜೀವನದ ಪ್ರತಿಯೊಂದು ರಂಗದಲ್ಲಿಯೂ ಪ್ರತಿಯೊಬ್ಬ ಮನುಷ್ಯನೂ ಇತರರು ತನ್ನನ್ನು ಏನೆಂದು ತಿಳಿದುಕೊಳ್ಳಬೇಕೆಂದು ಇಚ್ಛಿಸುವನೋ ಅದಕ್ಕೆ ತಕ್ಕಂತಹ ವ್ಯಕ್ತಿತ್ವವನ್ನು ಪ್ರದರ್ಶಿಸುತ್ತಾನೆ, ಬಾಹ್ಯ ವೇಷವನ್ನು ಧರಿಸುತ್ತಾನೆ : ನಿಜವೆಂದರೆ, ಸಮಾಜವು ಸಂಪೂರ್ಣವಾಗಿ ಛದ್ಮ ವೇಷಧಾರಿಗಳಿಂದಲೇ ತುಂಬಿದೆಯೆಂದು ಹೇಳಬಹುದು.

೭೯. ಗಾಂಭೀರ್ಯವೆಂಬುದು ಮನಸ್ಸಿನ ದೋಷಗಳನ್ನು ರಹಸ್ಯವಾಗಿ ಮುಚ್ಚಿಡಲು ದೇಹವು ಅನುಸರಿಸುವ ಗೂಢ ತತ್ವ.

೮೦. ಸದಭಿರುಚಿಯು ಬುದ್ಧಿಶಕ್ತಿಗಿಂತಲೂ ಮಿಗಿಲಾಗಿ ವಿವೇಚನಾ ಸಾಮರ್ಥ್ಯದಿಂದ ಬರುತ್ತದೆ.

೮೧. ಸೌಜನ್ಯವೆಂಬುದು ಇತರರಿಂದ ಸೌಜನ್ಯವನ್ನೇ ಪಡೆದು, ನಾವು ಸುಸಂಸ್ಕೃತರೆಂದು ತೋರಿಸಿಕೊಳ್ಳುವ ಬಯಕೆ.

೮೨. ಪರಮಾರಿತನವು ಪರಿಮಿತ ಬುದ್ಧಿಶಕ್ತಿಯ ಕೂಸು. ನಮ್ಮ ದೃಷ್ಟಿಕ್ಷೇತ್ರದಾಚೆಗಿರುವ ಯಾವುದನ್ನೂ ನಾವು ಸುಲಭವಾಗಿ ನಂಬುವುದಿಲ್ಲ.

೮೩. ಬಹುಮಂದಿಗೆ ತಾವು ಮಾಡುವ ಕೆಟ್ಟದ್ದನ್ನೆಲ್ಲ ಗಣನೆಗೆ ತಂದುಕೊಳ್ಳಲು ಸಾಕಷ್ಟು ಸೂಕ್ಷ್ಮ ಗ್ರಹಣಶಕ್ತಿಯಿರುವುದಿಲ್ಲ.

೮೪. ಯೌವನವೆಂಬುದು ಒಂದು ಸುದೀರ್ಘ ಅಮಲು : ಅದು ಜ್ವರಾವಸ್ಥೆಯಲ್ಲಿರುವ ವಿವೇಚನೆ.

೮೫. ಉನ್ನತ ಪ್ರಶಂಸೆಗೆ ಪಾತ್ರರಾದ ವ್ಯಕ್ತಿಗಳ ಪಾಲಿಗೆ, ತಾವು ಅಲ್ಪ ವಿಷಯಗಳಿಗಾಗಿ ಪ್ರಶಂಸೆ ಗಳಿಸಲು ಹೆಣಗಾಡುತ್ತಲೇ ಇರುವುದಕ್ಕಿಂತಲೂ ಹೆಚ್ಚು ಹೀನಾಯವಾದದ್ದು ಬೇರೊಂದಿಲ್ಲ.

೮೬. ಸಾಮಾಜಿಕ ಜೀವನಕ್ಕೆ ಉಪಯುಕ್ತವಾದ ದುರ್ಗುಣಗಳನ್ನಷ್ಟೇ ಸದ್ಗುಣಗಳನ್ನಾಗಿ ಹೊಂದಿರುವ ಕೆಲವು ವ್ಯಕ್ತಿಗಳು ಸಮಾಜದಲ್ಲಿ ಒಳ್ಳೆಯ ಹೆಸರು ಪಡೆಯುತ್ತಾರೆ.

೮೭. ತನ್ನ ಸ್ಪಂದನಶೀಲತೆಗಾಗಿ ಹೆಮ್ಮೆಪಡುವ ದಯೆಯನ್ನು ಅತ್ಯಂತ ಕ್ಷುದ್ರ ಸ್ವ-ಹಿತವು ಉಸಿರು ಕಟ್ಟಿಸಿಬಿಡುತ್ತದೆ.

೮೮. ಅನುಪಸ್ಥಿತಿಯು ಸಾಧಾರಣವಾದ ಭಾವೋದ್ರೇಕಗಳನ್ನು ತಗ್ಗಿಸಿ, ದೊಡ್ಡ ಭಾವೋದ್ರೇಕಗಳನ್ನು ತೀವ್ರಗೊಳಿಸುತ್ತದೆ, ಗಾಳಿಯು ಮೇಣದ ಬತ್ತಿಯನ್ನು ಆರಿಸಿ, ಬೆಂಕಿಯನ್ನು ಹರಡಿಸಿ ದೊಡ್ಡದು ಮಾಡುವಂತೆ.

೮೯. ನಾವು ನಮ್ಮ ಸ್ನೇಹಿತರು ನಮ್ಮ ಬಗ್ಗೆ ಇಟ್ಟಿರುವ ಆದರ-ವಿಶ್ವಾಸಗಳನ್ನು ಉತ್ಪ್ರೇಕ್ಷೆಗೊಳಿಸಿ ಹೇಳಿಕೊಳ್ಳುವುದು, ಸಾಮಾನ್ಯವಾಗಿ ಕೃತಜ್ಞತೆಗಿಂತಲೂ ಮಿಗಿಲಾಗಿ ನಮ್ಮ ಸ್ವಂತ ಬೆಲೆಯನ್ನು ಹೆಚ್ಚಿಸಿಕೊಂಡು ಪ್ರಶಂಸೆ ಗಳಿಸುವ ಬಯಕೆಯಿಂದಲೇ.

೯೦. ಕೆಲವೊಮ್ಮೆ ಪರಿಹಾರೋಪಾಯಗಳಿಂದ ಉಲ್ಬಣಗೊಳ್ಳುವಂತಹ ಸನ್ನಿವೇಶಗಳೂ, ಕಾಯಿಲೆಗಳೂ ಇವೆ. ಆ ಪರಿಹಾರೋಪಾಯಗಳನ್ನು ಅವಲಂಬಿಸುವುದು ಯಾವಾಗ ಅಪಾಯಕಾರಿ ಎಂಬುದನ್ನು ತಿಳಿದಿರುವುದೇ ನಿಜವಾದ ವಿವೇಕ.

೯೧. ನಮಗೆ ಏನೆಲ್ಲ ಬೇಕೆಂಬುದು ನಮಗೆ ತಿಳಿದೇ ಇಲ್ಲ.

೯೨. ನಾವು ನಮ್ಮ ಬಗ್ಗೆ ಏನೇ ಒಳ್ಳೆಯದನ್ನು ಕೇಳಿದಾಗ, ಹೊಸದೇನನ್ನೂ ತಿಳಿಯುವುದಿಲ್ಲ, ಕಲಿಯುವುದಿಲ್ಲ!

೯೩. ಒಬ್ಬೊನೊಬ್ಬ ವ್ಯಕ್ತಿಯು ತನ್ನ ಸ್ವಂತ ಘನತೆಯ ಭಾವನೆಯನ್ನು ತನ್ನಲ್ಲಿಯೇ ಇಟ್ಟುಕೊಂಡಾಗ ಅದೆಷ್ಟು ಶ್ಲಾಘನೀಯವೋ, ಇತರರ ಮುಂದೆ ಪ್ರದರ್ಶಿಸಿದಾಗ ಅಷ್ಟೇ ಹಾಸ್ಯಾಸ್ಪದ.

೯೪. ದೊಡ್ಡವರ ಅತಿಯಾಸೆಗೆ ಕಡಿವಾಣ ಹಾಕಿ, ಸಣ್ಣವರ ದುರಾದೃಷ್ಟ ಮತ್ತು ಅನರ್ಹತೆಗಳಿಗಾಗಿ ಅವರನ್ನು ಸಮಾಧಾನಪಡಿಸಲೆಂದೇ ಮಿತವರ್ತನೆಯನ್ನು, ಸಂಯಮವನ್ನು ಸದ್ಗುಣವೆಂದು ಘೋಷಿಸಲಾಗಿದೆ.

೯೫. ಕೆಲವೊಮ್ಮೆ ಜೀವನದಲ್ಲಿ ಎಂತಹ ಸನ್ನಿವೇಶಗಳು ಒದಗಿಬರುತ್ತವೆಯೆಂದರೆ ಅವುಗಳಿಂದ ಪಾರಾಗುವುದು ಅರೆ-ಹುಚ್ಚರಿಗೆ ಮಾತ್ರ ಸಾಧ್ಯ.

೯೬. ದುರ್ಬಲ ವ್ಯಕ್ತಿಗಳು ಪ್ರಾಮಾಣಿಕರಾಗಿರಲಾರರು.

೯೭. ಹುಚ್ಚನ್ನು ವಾಸಿ ಮಾಡುವ ವಿಧಾನಗಳಿವೆ, ಆದರೆ, ಮೂರ್ಖರನ್ನು ಸರಿಪಡಿಸುವ ಯಾವ ವಿಧಾನಗಳೂ ಇಲ್ಲ.

೯೮. ಪ್ರೇಮ ಶಂಕೆಯಲ್ಲಿ ಪ್ರೇಮಕ್ಕಿಂತ ಸ್ವ-ಪ್ರೇಮ ಹೆಚ್ಚು.

೯೯. ನಾವು ನಮ್ಮಲ್ಲಿ ದೊಡ್ಡ ದೋಷ-ದೌರ್ಬಲ್ಯಗಳು ಇಲ್ಲವೆಂದು ಇತರರಿಗೆ ಮನವರಿಕೆ ಮಾಡಿಕೊಡಲೆಂದೇ, ನಮ್ಮ ಸಣ್ಣ-ಪುಟ್ಟ ದೋಷ-ದೌರ್ಬಲ್ಯಗಳನ್ನು ಒಪ್ಪಿಕೊಳ್ಳುತ್ತೇವೆ.

೧೦೦. ಅಸೂಯೆಯು ದ್ವೇಷಕ್ಕಿಂತಲೂ ಹೆಚ್ಚು ಕಠೋರ.

೧೦೧. ಪ್ರೀತಿ ಇರುವವರೆಗೂ ಕ್ಷಮೆ ಇರುತ್ತದೆ.

೧೦೨. ಕೆಲವೊಂದು ಸದ್ಗುಣಗಳು ಇಂದ್ರಿಯಗಳಿದ್ದಂತೆ : ಇಂದ್ರಿಯ ವಿಹೀನರಾದವರು ಅವುಗಳನ್ನು ಅನುಭವಿಸುವುದಾಗಲಿ, ಗ್ರಹಿಸವುದಾಗಲಿ ಸಾಧ್ಯವಿಲ್ಲ.

೧೦೩. ಅತಿ ದ್ವೇಷವು ನಮ್ಮನ್ನು ನಾವು ದ್ವೇಷಿಸುವವರಿಗಿಂತಲೂ ಕೆಳಮಟ್ಟಕ್ಕೆ ಇಳಿಸುತ್ತದೆ.

೧೦೪. ಮಹತ್ಸಾಧನೆ ಮಾಡಬೇಕೆನ್ನುವ ವ್ಯಕ್ತಿ ತನಗೆ ದೊರೆತ ಎಲ್ಲ ಅವಕಾಶಗಳ ಲಾಭವನ್ನು ಪಡೆದುಕೊಳ್ಳಲು ತಿಳಿದಿರಬೇಕು.

೧೦೫. ಸಸ್ಯಗಳಲ್ಲಿರುವಂತೆಯೇ ಬಹುತೇಕ ಮಂದಿ ಜನರಲ್ಲಿ ಅಡಗಿರುವ ಗುಪ್ತ ಗುಣಗಳನ್ನು ಅವಕಾಶ ಮಾತ್ರವೇ ಬೆಳಕಿಗೆ ತರುತ್ತದೆ.

೧೦೬. ಸನ್ನಿವೇಶಗಳು ನಮ್ಮನ್ನು ಇತರರಿಗೆ ತೋರಿಸಿಕೊಡುವುದಕ್ಕಿಂತಲೂ ಮಿಗಿಲಾಗಿ ನಮ್ಮನ್ನು ನಮಗೇ ತೋರಿಸಿಕೊಡುತ್ತವೆ.

೧೦೭. ನಮ್ಮೊಂದಿಗೆ ಸಹಮತ ಹೊಂದಿರುವವರನ್ನು ಬಿಟ್ಟರೆ, ಉಳಿದವರು ನಮ್ಮ ಕಣ್ಣಿಗೆ ವಿವೇಕಿಗಳಾಗಿ ಕಾಣಿಸುವುದಿಲ್ಲ.

೧೦೮. ಸೂಕ್ಷ್ಮಗ್ರಾಹಿ ಬುದ್ಧಿಶಕ್ತಿಯ ಅತಿದೊಡ್ಡ ಅನಾನುಕೂಲತೆಯೆಂದರೆ, ಗುರಿಯನ್ನು ತಲುಪದಿರುವುದಲ್ಲ, ಅದನ್ನು ದಾಟಿ ಹೋಗುವುದು.

೧೦೯. ನಾವು ಬುದ್ಧಿವಾದವನ್ನೇನೋ ನೀಡುತ್ತೇವೆ, ಆದರೆ, ಜನರ ನಡತೆಯ ಮೇಲೆ ಪ್ರಭಾವ ಬೀರುವುದಿಲ್ಲ.

೧೧೦. ನಮ್ಮ ಶೀಲವು ಕ್ಷೀಣಿಸಿದಂತೆಲ್ಲ ನಮ್ಮ ಅಭಿರುಚಿಯು ಕ್ಷೀಣಿಸುತ್ತದೆ.

೧೧೧. ಬೆಳಕು ವಸ್ತುಗಳನ್ನು ತೋರಿಸುವಂತೆ, ಅವಕಾಶವು ನಮ್ಮ ಗುಣಾವಗುಣಗಳನ್ನು ತೋರಿಸುತ್ತದೆ.

೧೧೨. ಅರ್ಹತೆ ಘನತೆ ಇಲ್ಲದೆ ಬದುಕಬಲ್ಲುದು. ಆದರೆ ಸ್ವಲ್ಪವಾದರೂ ಅರ್ಹತೆ ಇಲ್ಲದೆ ಘನತೆಯೆಂಬುದಿಲ್ಲ.

೧೧೩. ಅರ್ಹತೆಗೆ ಘನತೆ ಸಹಜ ಸೌಂದರ್ಯಕ್ಕೆ ಸೊಗಸಾದ ಉಡುಪಿದ್ದಂತೆ.

೧೧೪. ನಾವು ಜೀವನದ ವಿವಿಧ ಘಟ್ಟಗಳಿಗೆ ಪ್ರೊಚ್ಚ ಹೊಸದಾಗಿಯೇ ಬರುತ್ತೇವೆ; ನಮಗೆ ವಯಸ್ಸು ಎಷ್ಟೇ ಆಗಿದ್ದರೂ, ಪ್ರತಿಯೊಂದು ಘಟ್ಟದಲ್ಲಿಯೂ, ಸಾಮಾನ್ಯವಾಗಿ, ನಾವು ತೀರ ಅನನುಭವಿಗಳೇ ಆಗಿರುತ್ತೇವೆ.

೧೧೫. ನೀವು ಜಾಣತನದಲ್ಲಿ ಒಬ್ಬ ವ್ಯಕ್ತಿಯನ್ನು ಮೀರಿಸಬಹುದು, ಉಳಿದೆಲ್ಲರನ್ನಲ್ಲ.

೧೧೬. ಸ್ನೇಹದಲ್ಲಿ ಅತ್ಯಂತ ಕ್ಲಿಷ್ಟ ಕಾರ್ಯವೆಂದರೆ, ನಮ್ಮ ಸ್ನೇಹಿತನಿಗೆ ನಮ್ಮ ತಪ್ಪುಗಳನ್ನು ತೋರಿಸುವುದಲ್ಲ, ಆದರೆ, ಆತ ತನ್ನ ಸ್ವಂತ ತಪ್ಪುಗಳನ್ನು ಕಂಡುಕೊಳ್ಳುವಂತೆ ಮಾಡುವುದೇ ಆಗಿದೆ.

೧೧೭. ಹೆಚ್ಚು ಕಡಿಮೆ ನಮ್ಮ ಎಲ್ಲ ದೌರ್ಬಲ್ಯಗಳೂ ನಾವು ಅವುಗಳನ್ನು ಮುಚ್ಚಿಡಲು ಅನುಸರಿಸುವ ವಿಧಾನಗಳಿಗಿಂತಲೂ ಹೆಚ್ಚು ಕ್ಷಮಾರ್ಹ.

೧೧೮. ಕೆಲವೊಮ್ಮೆ ನಮ್ಮ ಬುದ್ಧಿಯೇ ನಮ್ಮನ್ನು ಶುದ್ಧ ತಿಳಿಗೇಡಿಗಳನ್ನಾಗಿ ಮಾಡಿಬಿಡುತ್ತದೆ.

೧೧೯. ವಯಸ್ಸಿನೊಂದಿಗೆ ಹೆಚ್ಚಾಗುವ ಉತ್ಸಾಹ ಹುಚ್ಚುತನವನ್ನು ಹೋಲುತ್ತದೆ.

೧೨೦. ಬಹುಮಂದಿಗೆ ಹೇಗೆ ವೃದ್ಧರಾಗಬೇಕೆಂಬುದೇ ತಿಳಿದಿಲ್ಲ.

೧೨೧. ನಾವು ನಮ್ಮ ಸ್ನೇಹಿತರಲ್ಲಿ ನಮಗೆ ಸಂಬಂಧಪಡದ ದೋಷಗಳನ್ನು ಧಾರಾಳವಾಗಿ ಕ್ಷಮಿಸುತ್ತೇವೆ.

೧೨೨. ಮಹತ್ಕಾರ್ಯಗಳನ್ನು ಬಿಚ್ಚು ಮನಸ್ಸಿನಿಂದ ಹೊಗಳುವುದು ಒಂದು ಅರ್ಥದಲ್ಲಿ ಅವುಗಳಲ್ಲಿ ಪಾಲ್ಗೊಂಡಂತೆಯೇ ಸರಿ. (ಪಾಲ್ಗೊಂಡಂತೆಯೇ ಸರಿ).

೧೨೩. ಜೀವನದ ವೃದ್ಧಾಪ್ಯದಲ್ಲಿ ಹೇಗೋ ಹಾಗೆ, ಪ್ರೇಮದ ವೃದ್ಧಾಪ್ಯದಲ್ಲಿಯೂ ನಾವು ಅನುಭವಿಸುವುದು ಕೇವಲ ನೋವು, ಸಂಕಟಗಳನ್ನೇ ಹೊರತು, ಹಿಂದೆ ಅನುಭವಿಸಿದ ಸುಖ-ಸಂತೋಷಗಳನ್ನಲ್ಲ.

೧೨೪. ಅವಕಾಶ ಮತ್ತು ಚಂಚಲತೆ ಲೋಕವನ್ನು ಆಳುತ್ತವೆ.

೧೨೫. ಅಸೂಯೆ ಇಲ್ಲದಿರುವುದೇ ಮಹಾಪುರುಷನ ಲಕ್ಷಣ.

೧೨೬. ನಮ್ಮ ಶತ್ರುಗಳು ನಮ್ಮ ಬಗ್ಗೆ ತಳೆದಿರುವ ಅಭಿಪ್ರಾಯವು ನಾವು ನಮ್ಮ ಬಗ್ಗೆ ಇಟ್ಟುಕೊಂಡಿರುವ ಅಭಿಪ್ರಾಯಕ್ಕಿಂತಲೂ ಸತ್ಯಕ್ಕೆ ಹೆಚ್ಚು ಸಮೀಪವಾಗಿರುತ್ತದೆ.

೧೨೭. ವೃದ್ಧಾಪ್ಯವು ಮರಣದಂಡನೆಗೊಳಪಟ್ಟಂತೆ ಯೌವನದ ಸುಖ-ಸಂತೋಷಗಳನ್ನು ನಿಷೇಧಿಸುವ ದುಷ್ಟ ಪ್ರಭು.

೧೨೮. ನಿಜವಾದ ಕರುಣೆಗಿಂತಲೂ ಅಪರೂಪವಾದದ್ದು ಬೇರೊಂದಿಲ್ಲ; ತಾವು ಕರುಣಾಳುಗಳೆಂದು ತಿಳಿದುಕೊಂಡಿರುವವರಲ್ಲಿ ಹೆಚ್ಚು ಪಾಲು ಮಂದಿ ಯಾವ ತೊಂದರೆಯನ್ನೂ ತೆಗೆದುಕೊಳ್ಳಲೊಲ್ಲದ ಅಲ್ಪ ತೃಪ್ತರು ಇಲ್ಲವೆ ದುರ್ಬಲರು.

೧೨೯. ತಪ್ಪು ಕೇವಲ ಒಂದು ಪಕ್ಷದ್ದಾದರೆ ಜಗಳಗಳು ಬಹಳ ಹೊತ್ತು ನಡೆಯುವುದಿಲ್ಲ.

೧೩೦. ಚೆಲುವಿಲ್ಲದ ಯೌವನ, ಯೌವನವಿಲ್ಲದ ಚೆಲುವುಗಳೆರಡೂ ನಿಷ್ಪ್ರಯೋಜಕ.

೧೩೧. ಒಣ ಪ್ರತಿಷ್ಠೆಯ ಎಲ್ಲ ಪ್ರಕಾರಗಳನ್ನೂ ಎಣಿಸುವುದು ಸಾಧ್ಯವಿಲ್ಲ.

೧೩೨. ನಾವು ನಮ್ಮನ್ನು ದೂಷಿಸುವುದು ಹೊಗಳಿಕೆಯನ್ನು ಗಳಿಸುವ ಸಲುವಾಗಿ.

೧೩೩. ನಿಜವಾದ ಸ್ನೇಹಿತನಿಗಿಂತಲೂ ಅಮೂಲ್ಯವಾದ ಸ್ವತ್ತು ಮತ್ತೊಂದಿಲ್ಲ. ಆದಾಗ್ಯೂ, ನಾವು ಅದನ್ನು ಗಳಿಸಿಕೊಳ್ಳಲು ಮನಸ್ಸು ಮಾಡವುದೇ ಇಲ್ಲ.

೧೩೪. ಮೊದಲನೆಯ ಆಸೆಯನ್ನು ಹತ್ತಿಕ್ಕುವುದು ನಂತರದ ಎಲ್ಲ ಆಸೆಗಳನ್ನು ಈಡೇರಿಸುವುದಕ್ಕಿಂತಲೂ ತುಂಬ ಸುಲಭ.

೧೩೫. ಮನುಷ್ಯರನ್ನು ಅರ್ಥ ಮಾಡಿಕೊಳ್ಳುವುದು ಗ್ರಂಥಗಳ ಅಧ್ಯಯನಕ್ಕಿಂತಲೂ ಹೆಚ್ಚು ಮುಖ್ಯವಾದದ್ದು.

೧೩೬. ನಾವು ಎಷ್ಟೊಂದು ಕಷ್ಟವನ್ನು ಅನುಭವಿಸಬೇಕೆಂಬುದನ್ನು ಅರ್ಥ ಮಾಡಿಕೊಳ್ಳುವುದೇ ಒಂದು ಬಗೆಯ ಸುಖ.

೧೩೭. ನಿಮ್ಮೊಳಗೆ ನೀವು ಶಾಂತಿಯನ್ನು ಕಂಡುಕೊಳ್ಳಲಾರದ ಮೇಲೆ, ಅದನ್ನು ನೀವು ಬೇರೆಡೆ ಅರಸುವುದು ವ್ಯರ್ಥ.

೧೩೮. ಜನರು ಅನ್ಯಾಯವನ್ನು ದ್ವೇಷಿಸುವುದು ಅದರ ಮೇಲಿನ ದ್ವೇಷದಿಂದಲ್ಲ, ಅದರಿಂದ ಉಂಟಾಗುವ ಹಾನಿಯಿಂದಾಗಿ.

೧೩೯. ನಮ್ಮ ಪರಮ ಸ್ನೇಹಿತರ ಕಷ್ಟ ಕೂಡ ನಮಗೆ ಏನೋ ಒಂದು ರೀತಿಯಲ್ಲಿ ಹಿತಕರವಾಗಿಯೇ ಕಾಣಿಸುತ್ತದೆ.

೧೪೦. ಸ್ವಭಾವಜನ್ಯ ಕ್ರೌರ್ಯಕ್ಕಿಂತಲೂ ಮಿಗಿಲಾಗಿ ಸ್ವ-ಪ್ರೇಮದಿಂದಲೇ ಹೆಚ್ಚು ಮಂದಿ ಕ್ರೂರಿಗಳಾಗುತ್ತಾರೆ.

೧೪೧. ವಿವೇಕಿಯಾದವನು ಸ್ವಲ್ಪದರಿಂದಲೇ ಸುಖಿಯಾಗುತ್ತಾನೆ. ಆದರೆ, ಅವಿವೇಕಿಗೆ ಯಾವುದರಿಂದಲೂ ತೃಪ್ತಿ ದೊರಕದು. ಹೆಚ್ಚು-ಕಡಿಮೆ ಮಾನವರೆಲ್ಲರೂ ಅಸುಖಿಗಳಾಗಿರುವುದಕ್ಕೆ ಇದೇ ಕಾರಣ.

೧೪೨. ನಾವು ಇತರರಿಗೆ ಸಹಾಯ ಮಾಡುವ ಸ್ಥಿತಿಯಲ್ಲಿರುವವರೆಗೂ ಇತರರು ನಮಗೆ ಕೃತಜ್ಞರಾಗಿಯೇ ಇರುತ್ತಾರೆ.

೧೪೩. ಮಿತಪಾನವೆಂಬುದು ಆರೋಗ್ಯದ ಬಗ್ಗೆ ಚಿಂತೆ ಅಥವಾ ಪರಿಮಿತ ಸಾಮರ್ಥ್ಯ.

೧೪೪. ಮಹಿಳೆಯ ಪಾಲಿಗೆ ನರಕವೆಂದರೆ ಮುಪ್ಪು.

೧೪೫. ಕೆಲವು ದುರ್ಗುಣಗಳು ಅಸಾಧಾರಣ ಶಕ್ತಿ-ಸಾಮರ್ಥ್ಯಗಳೆನಿಸುತ್ತವೆ.

೧೪೬. ಕೆಲವು ಜನರು ಸ್ವಲ್ಪ ಕಾಲ ನಾವು ಹಾಡಿ ನಲಿಯುವ ಜನಪ್ರಿಯ ಹಾಡುಗಳಂತಿರುತ್ತಾರೆ.

ರೋಷ್‌ಫೋಕೊನ ಅತ್ಯಂತ ಸಾರಭೂತ, ಅತ್ಯಂತ ಪ್ರಸಿದ್ಧ ಸಾರೋಕ್ತಿಗಳ ಈ ಕನ್ನಡ ಅನುವಾದವು ನಮ್ಮ ಕನ್ನಡ ಜನತೆಯಲ್ಲಿ ವಿಶ್ವ ಸಾಹಿತ್ಯದ ಈ ಅಪೂರ್ವ ಕೃತಿಯ ಬಗ್ಗೆ ಆಸಕ್ತಿಯನ್ನು ಕೆರಳಿಸುವಂತಾಗಲಿ.

□

ವಿ. ಶ್ರೀನಿವಾಸ
ನಂ. ೨೧೩, ನೇ ಕ್ರಾಸ್, ೧ನೇ ಜಿ ಮುಖ್ಯರಸ್ತೆ, ೧ನೇ ಬ್ಲಾಕ್, ೧ನೇ ಮೈನ್
ಕೋರಮಂಗಲ, ಬೆಂಗಳೂರು - ೫೬೦ ೦೩೪
ದೂರವಾಣಿ : ೨೫೫೨ ೬೬೭೫

# ವಿಮರ್ಶೆಯ ಭಾಷೆ

ಆಂಗ್ಲ ಮೂಲ : ಐ.ಎ. ರಿಚರ್ಡ್ಸ್
ಅನುವಾದ : ಬಿ.ಎನ್. ಶ್ರೀಕೀರ್ತಿ

ನವ್ಯ ಸೌಂದರ್ಯ ಶಾಸ್ತ್ರದ ಅನಾನುಕೂಲಗಳು ಯಾವುದೇ ರೀತಿಯಲ್ಲಿ ಒಂದು ವಿಮರ್ಶಾ ಸಿದ್ಧಾಂತಕ್ಕೆ ಆಧಾರವಾಗಿದ್ದರೂ ವೈಜ್ಞಾನಿಕ ಪರ್ಯಾಲೋಚನೆಗೂ ಮುಂಚಿತವಾಗಿ ನಡೆದ ಸೌಂದರ್ಯ ಸ್ವರೂಪ ಉನ್ನತ ಬೆಳವಣಿಗೆಯನ್ನು ಪರಿಗಣಿಸಲೇಬೇಕಾಗುತ್ತದೆ. ಅಂತಿಮವಾದ, ಅನಿರ್ವಚನೀಯವಾದ, ಪ್ರತಿ ಹೇಳಲಾಗದ ಸಾಧಾರಣ ಆಲೋಚನೆಯನ್ನು ನಿಸ್ಸತ್ವಗೊಳಿಸುವ ಸೌಂದರ್ಯ ದರ್ಶನವು ಕನಿಷ್ಟವಾಗಿಯಾದರೂ ನಿರಾಕರಿಸಲ್ಪಡುತ್ತದೆ. ಅಲ್ಲದೆ ಅದರೊಂದಿಗೆ ಸಮಾನವಾದ ಸುಳ್ಳು ಅಸ್ತಿತ್ವಗಳು ದೂರ ಸರಿಯಲ್ಪಡುತ್ತವೆ ಅಥವಾ ಶೀಘ್ರದಲ್ಲೇ ದೂರ ಸರಿಯುತ್ತವೆ. ತಮ್ಮ ಅಸ್ತಿತ್ವದಲ್ಲಿ ಕಾವ್ಯ ಮತ್ತು ಪ್ರೇರಣೆ ಪ್ರಾಮಾಣಿಕವಾಗಿ ಗೌರವಾನ್ವಿತವಾದ ಸ್ಥಾನಕ್ಕೆ ಮಹತ್ವ ನೀಡುತ್ತವೆ.

'ಕಾವ್ಯ ಜೀವನದಂತೆ ಒಂದು ವಿಷಯವಾಗಿದೆ....ಅವಶ್ಯವಾಗಿಯೂ ಒಂದು ನಿರಂತರವಾದ ದ್ರವ್ಯ ಅಥವಾ ಶಕ್ತಿ, ಕಾವ್ಯವೂ ಐತಿಹಾಸಿಕವಾಗಿ ಸಮನ್ವಿತವಾದ ಒಂದು ವಿಕಸನ, ಅನುಕ್ರಮವಾಗಿ ಸಮಗ್ರವಾಗಿ ಪ್ರಮಾಣೀಕರಿಸಿದ ಒಂದು ಸರಣಿ. ಹೋಮರ್ ಅಥವಾ ಹೋಮರನ ನಂತರದಿಂದ ಈವರೆಗೆ ಪ್ರತಿ ಕವಿಯು ಒಂದು ನಿರ್ದಿಷ್ಟ ಶ್ರೇಣಿ ಮತ್ತು ಸ್ಥಾನದವರೆಗೆ ಕಾವ್ಯದ ಶಕ್ತಿ ಮತ್ತು ಬೆಳವಣಿಗೆಯ ದನಿಯಾಗಿದ್ದಾನೆ; ಅವನಲ್ಲಿ ಕ್ಷಣಕಾಲ ಕಾವ್ಯವೂ ಗೋಚರಿಸಿ, ಕರ್ಣಗೋಚರವಾಗಿ ಅವತರಿಸುತ್ತದೆ ಮತ್ತು ಅವನ ಪ್ರಸ್ತುತದ ಕವಿತೆಗಳು ಕ್ಷಣಿಕ ಅವತರಣಿಕೆಯಾಗಿ ಉಳಿದ ದಾಖಲೆಯಾಗಿವೆ...ತನ್ನ ವಿಸ್ತೃತವಾದ ಶಕ್ತಿ ಮತ್ತು ಉನ್ನತವಾದ ಕ್ರಿಯೆಯೊಂದಿಗೆ ಕವಿತೆಯ ಬೆಳವಣಿಗೆಯು ಅನಂತವಾಗಿದೆ.' (ಜಿ.ಡಬ್ಲ್ಯೂ. ಮಕೆಯಲ್, Lectures on Poetry, Introduction).

ಒಂದು ಶ್ರದ್ಧಾಪೂರಿತವಾದ ಅನ್ವೇಷಣೆಯು ಇನ್ನೂ ಕೂಡ ಇತರ ಹಲವು 'ನಿಗೂಢ ವ್ಯಕ್ತಿಗಳನ್ನು' ಕಂಡುಹಿಡಿಯಬಹುದು, ಏಕೆಂದರೆ ಒಂದು ಅಲ್ಪ ಗಂಭೀರ ಗುಣದ ಬಹಳಷ್ಟು ಭಾಗವು ಶಾಬ್ದಿಕ ಮೆಳೆಯೊಳಗೇ ಆಶ್ರಯಿಸಿದೆ. ರಚನೆ, ವಿನ್ಯಾಸ, ಆಕಾರ, ಛಂದೋಗತಿ, ಅಭಿವ್ಯಕ್ತಿ.... ಇವುಗಳು ಅನೇಕ ವೇಳೆ ಕೇವಲ ಶೂನ್ಯ ಸಂಕಥನವಾಗಿರುವುದಿಲ್ಲ. ಆ ಕಾರಣಕ್ಕಾಗಿ ಒಂದು ವಿಮರ್ಶೆಯ 'ಸಿದ್ಧಾಂತವು ವಿವರಿಸಬಹುದಾದಂತಹ ಬದಲಾವಣೆಗಳನ್ನು ಒದಗಿಸಬೇಕಾಗುತ್ತದೆ.

ಭಾವವು ಪ್ರಸ್ತುತ ಭಾಷೆಗೆ ವ್ಯಥವಾಗಿ ನಿಲ್ಲುವ ಸಂದರ್ಭದಲ್ಲಿ ಭಾಷಾ ಸಂಬಂಧವಾದ ಭ್ರಮೆಯ ಕ್ಲಿಷ್ಟತೆಯು ಮುಂದುವರಿಯಲೇಬೇಕಾಗುತ್ತದೆ. ನಮ್ಮ ಮಾತಿನ ಎಲ್ಲಾ ಸ್ವಾಭಾವಿಕ ತಿರುವುಗಳು, ವಿಶೇಷವಾಗಿ ಕಲೆಯನ್ನು ಚರ್ಚಿಸುವಲ್ಲಿ ಉಪಯೋಗಿಸುವ ಭಾಷೆಗಳು ದಾರಿ ತಪ್ಪಿಸುತ್ತವೆ ಎಂದು ಗುರುತಿಸಬೇಕಾಗುತ್ತದೆ. ಅಂತಹವುಗಳಿಗೆ ನಾವು ಎಷ್ಟು ರೂಢಿಯಾಗಿದ್ದೇವೆಂದರೆ ಆ ಮಾತುಗಳು ಬಿಟ್ಟುಹೋದ ಅಧ್ಯಾಹಾರ ಎಂದು ತಿಳಿದಿದ್ದರೂ ಮರೆಯಲು ಸುಲಭವಾದ ಅಂಶವಾಗಿದೆ. ಹಲವು ಸಂದರ್ಭಗಳಲ್ಲಿ ಯಾವುದೇ ಅಧ್ಯಾಹಾರವು ಇದೆ ಎಂದು ಗುರುತಿಸಲು ಬಹಳಷ್ಟು ಕಷ್ಟವಾಗುತ್ತದೆ. ಒಂದು ಚಿತ್ರವು ನಮ್ಮಲ್ಲಿ ಮೌಲ್ಯಯುತವಾದ ಮತ್ತು ಒಂದು ನಿರ್ದಿಷ್ಟವಾದ ಅನುಭವವನ್ನು ನೀಡುತ್ತದೆ ಎಂದು ಹೇಳುವುದರ ಬದಲಾಗಿ ಅದು ಸುಂದರವಾಗಿದೆ ಎಂದಷ್ಟೆ ಹೇಳಲು ನಮಗೆ ರೂಢಿಯಾಗಿದೆ. ಒಂದು ಚಿತ್ರವನ್ನು ಇದು ಸುಂದರವಾಗಿದೆ ಎಂದಷ್ಟೇ ಪರಿಗಣಿಸುವ ಸತ್ಯವು ಕೇವಲ ಶಬ್ದ ಸಂಕೇತದ ಒಪ್ಪಿಗೆಯನ್ನು ಸೂಚಿಸುವ ಮೊದಲೆ ಅದನ್ನು ಬದಲಾಯಿಸಿ ವಿವರಿಸುವುದು ಒಂದು ಉನ್ನತವಾದ ಮತ್ತು ಕಷ್ಟಕರವಾದ ಸಾಧನೆಯಾಗಿತ್ತು. ಇಂದಿಗೂ ಕೂಡ ವ್ಯಾಕರಣಾ ರಚನೆಯ ಶಕ್ತಿಯು ದಾರಿ ತಪ್ಪಿಸುವಂತಹದಾಗಿದೆ. ಸೌಂದರ್ಯ ಎಂದರೆ ನಿರ್ದಿಷ್ಟ ಗುಣಲಕ್ಷಣಗಳನ್ನು ವಸ್ತುಗಳೊಂದಿಗೆ ಸಂಯೋಜಿಸಿ ಅವುಗಳನ್ನು ಸುಂದರವಾದುದು ಎಂದು ಪ್ರತಿಬಿಂಬಿಸುವ ಭ್ರಮೆಯು ಎಲ್ಲಾ ವ್ಯಕ್ತಿಗಳ ಮಾನಸಿಕ ಬೆಳವಣಿಗೆಯಲ್ಲಿನ ಒಂದು ನಿರ್ದಿಷ್ಟ ಘಟ್ಟದಲ್ಲಿ ಬಹುಶಃ ಅನಿವಾರ್ಯವಾಗಿದೆ.

ಈ ಒಂದು ಭ್ರಮೆಯಿಂದ ತಪ್ಪಿಸಿಕೊಂಡವರಲ್ಲಿ ಮತ್ತು ವಸ್ತುಗಳು ಗುಣಗಳನ್ನು ಹೊಂದಿವೆ ಎಂಬಂತೆ ನಿರಂತರವಾಗಿ ಮಾತನಾಡಬಲ್ಲೆವು ಎಂದು ಚೆನ್ನಾಗಿ ಬಲ್ಲವರು ನಮ್ಮಲ್ಲಿ ಒಂದಲ್ಲ ಒಂದು ರೀತಿಯ ಪರಿಣಾಮವನ್ನುಂಟು ಮಾಡುತ್ತಾರೆ ಎಂದು ಹೇಳಲೇಬೇಕಾಗುತ್ತದೆ. ಈ ರೀತಿಯಾಗಿ ತೋರಿಸಲ್ಪಡುವ ತಪ್ಪು ಅಭಿಪ್ರಾಯವು ಮತ್ತು ಆ ಕಾರಣಕ್ಕೆ ಒಂದು ವಿಶಿಷ್ಟವಾದ ಅಡಚಣೆಯನ್ನುಂಟು ಮಾಡುತ್ತದೆ ಮತ್ತು ಹಾಗಿದ್ದರೂ ಕೂಡ ಕೆಲವು ದಕ್ಷ ವ್ಯಕ್ತಿಗಳು ಈ ದಿನಗಳಲ್ಲಿ ಸೌಂದರ್ಯದ ಒಂದು ಗುಣವಿದೆ ಎಂಬ ನಿಗೂಢ ದೃಷ್ಟಿಯನ್ನು ಹೊಂದಲು ಬಹಳಷ್ಟು ಮೋಸ ಹೋಗಿದ್ದಾರೆ. ಆದಾಗಿಯೂ ಕೂಡ ಕಲೆಯ ಬಗೆಗಿನ ಎಲ್ಲಾ ಚರ್ಚೆಗಳಲ್ಲಿಯೂ ಭಾಷೆಯಿಂದಾದ ಒಂದು ತಡೆಯನ್ನು ಈ ದೃಷ್ಟಿಯೆಡೆಗೆ ಅನುಭವಿಸಬಹುದು. ಈ ಅನುಭವವು ಅಸಂಖ್ಯಾತ ಸಮಸ್ಯೆಗಳನ್ನು ವೃದ್ಧಿಗೊಳಿಸುತ್ತದೆ ಅಲ್ಲದೆ ನಾವು ಅವುಗಳನ್ನು ನಿರಂತರವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಎಲ್ಲಾ ಕಲೆಗಳಿಗೆ ಉಪಯೋಗಿಸಬಹುದಾದಂತಹ ಪದಗಳಾದ ರಚನೆ, ಆಕಾರ, ಸ್ಥಿರತೆ, ಸಂಯೋಜನೆ, ವಿನ್ಯಾಸ, ಏಕತೆ, ಅಭಿವ್ಯಕ್ತಿ, ವರ್ಣಕಲೆಯ ವಿಮರ್ಶೆಯಲ್ಲಿ ಬಳಸುವಂತಹ ಗಾಢತೆ, ಚಲನೆ, ಬಂಧ, ದೃಢತೆ, ಸಾಹಿತ್ಯ ವಿಮರ್ಶೆಯಲ್ಲಿ ಬಳಸುವಂತಹ ಛಂದೋಗತಿ, ಒತ್ತು, ಕಥಾವಸ್ತು, ಸ್ವಭಾವ, ಸಂಗೀತದಲ್ಲಿ ಉಪಯೋಗಿಸುವಂತಹ ಸಾಮರಸ್ಯ, ವಾತಾವರಣ, ಬೆಳವಣಿಗೆ

ಇವುಗಳೆಲ್ಲವೂ ಉದಾಹರಣೆಗಳಾಗಿವೆ. ಈ ಎಲ್ಲಾ ಪದಗಳು ಮನಸ್ಸಿನ ಹೊರಗೆ ವಸ್ತುಗಳಲ್ಲಿ ಸಹಜವಾಗಿರುವ ಗುಣಗಳಾಗಿ ಪರಿಗಣಿಸಿದರೂ ಇವುಗಳೆಲ್ಲವೂ ವರ್ಣ ದ್ರವ್ಯಗಳ ಒಟ್ಟುಗೂಡಿದ ಸ್ಥಿತಿಯಂತೆ, ಒಂದು ವರ್ಣಚಿತ್ರದಂತೆ, ನಿಸ್ಸಂದೇಹವಾಗಿಯೂ ಮನಸ್ಸಿನ ಹೊರಗಡೆಯೆ ಇದೆ. ಅದೇ ರೀತಿಯಾಗಿ ಕಾವ್ಯದ ಸಂದರ್ಭದಲ್ಲಿಯೂ ಕೂಡ ಮುದ್ರಣ ಮತ್ತು ಹಾಳೆಯಲ್ಲದೆ ಆರೋಪಿಸಿದ ಗುಣಗಳೆಲ್ಲವೂ ಹೊಂದಿವೆ ಎಂಬ ಪ್ರವೃತ್ತಿಯನ್ನು ತಡೆಹಿಡಿದಿಲ್ಲ.

ಆದರೆ ವಾಸ್ತವವಾಗಿ ಇತ್ತೀಚಿನವರೆವಿಗೂ ನಾವು ಮಾತನಾಡುವ ಭಾಷೆಯು ನಮ್ಮಿಂದ ಎಲ್ಲಾ ವಿಷಯಗಳನ್ನು ಮರೆಮಾಚುವಲ್ಲಿ ಯಶಸ್ವಿಯಾಗಿದೆ. ಸಂಗೀತ, ಕಾವ್ಯ, ವರ್ಣಚಿತ್ರ, ಶಿಲ್ಪಕಲೆ ಅಥವಾ ವಾಸ್ತುಶಿಲ್ಪ ಇವುಗಳ ಬಗ್ಗೆ ನಾವು ಚರ್ಚಿಸುವಲ್ಲಿಯೂ ನಿರ್ದಿಷ್ಟ ಭೌತ ವಸ್ತುಗಳಿಂದ ತಂತಿಯ ಕಂಪನ, ಹಾಳೆಯ ಮೇಲೆ ಮುದ್ರಿತ ಗುರುತುಗಳು, ವರ್ಣ ದ್ರವ್ಯಗಳು ಮತ್ತು ತೈಲಚಿತ್ರಗಳು ಶಿಲೆಗಳು ಸಮೂಹಗಳೆಲ್ಲವೂ ನಾವು ಮಾತನಾಡುತ್ತಿರುವ ಬಗ್ಗೆ ಆಗಿವೆ. ಆದರೂ ಕೂಡ ವಿಮರ್ಶಕರಂತೆ ನಾವು ಹೇಳಿದ ಅವಲೋಕನಗಳೆಲ್ಲವೂ ಸರಿಹೊಂದುವುದು ಮನಸ್ಸಿನ ಸ್ಥಿತಿಗಳಿಗೆ ಮತ್ತು ಅನುಭವಕ್ಕೇ ಹೊರತು ಆ ವಸ್ತುಗಳಿಗಲ್ಲ.

ಈ ಅವಲೋಕನದ ಬಗ್ಗೆ ಆಗಿಂದಾಗೆ ಒಂದು ನಿರ್ದಿಷ್ಟ ಅಪರಿಚಿತತನವು ಅನುಭವಕ್ಕೆ ಉಂಟಾದರೂ ಪ್ರತಿಫಲನದೊಂದಿಗೆ ಅದು ಕ್ಷೀಣಿಸುತ್ತದೆ. ಯಾರಾದರೊಬ್ಬರು ಒಂದು ಕೃತಿಯನ್ನು ಭಾವಾತಿರೇಕವುಳ್ಳ ಕೃತಿ ಎಂದು ಹೇಳಿದರೆ ಆತ ಹೇಳುತ್ತಿರುವುದು ಮನಸ್ಸಿನ ಒಂದು ಸ್ಥಿತಿಗೆ ಎಂದು ಒಪ್ಪಿಕೊಳ್ಳಲು ಕಷ್ಟವಾಗುವುದಿಲ್ಲ. ಆದರೆ ಜನಸಾಮಾನ್ಯರ ಒಂದು ದೊಡ್ಡ ಸಭೆಯನ್ನು ಒಬ್ಬರನ್ನೊಬ್ಬರು ನಿರ್ದಿಷ್ಟವಾಗಿ ಸರಿದೂಗುತ್ತಾರೆ ಎಂದು ಹೇಳಿದರೆ ಅದು ಅಸ್ಪಷ್ಟ ಎನಿಸುತ್ತದೆ. ಅದೇ ರೀತಿಯಾಗಿ ಆತನು ಸಂಗೀತದಲ್ಲಿ ಸಮಯ, ದೃಶ್ಯ ಕಲೆಯಲ್ಲಿ ರೂಪ, ನಾಟಕದಲ್ಲಿ ಕಥಾ ವಸ್ತುವಿನ ಬಗ್ಗೆ ಚರ್ಚಿಸುತ್ತಾ ಹೋದರೆ ಎಲ್ಲಾ ಸಮಯದಲ್ಲೂ ಮಾನಸಿಕ ಘಟನೆಗಳು ಮರೆಯಾಗುತ್ತದೆ ಎಂಬುದು ಅರಿವಾಗುತ್ತದೆ, ಶಾಬ್ದಿಕ ಸಾಧನವು ನಮ್ಮ ನಡುವೆ ಮತ್ತು ನಾವು ವ್ಯವಹರಿಸುವ ವಿಷಯಗಳೊಂದಿಗೆ ಘಟಿಸುತ್ತವೆ. ಅಂತೆಯೆ ವಾಸ್ತವವಾಗಿ ಉಪಯುಕ್ತವಾದ ಪದಗಳು ಅಮೂಲ್ಯವಾದವುಗಳು, ಸಂಭಾಷಣೆಯಲ್ಲಿ ತಾತ್ಕಾಲಿಕವಾಗಿಯೋ, ಬದಲಿಯಾಗಿಯೋ ಅಥವಾ ಅನುಕೂಲಕ್ಕಾಗಿಯೂ ಇರುತ್ತದೆ. ಅಂತಹವುಗಳನ್ನು ಜನರ ಸಾಮಾನ್ಯ ಹೆಸರುಗಳೆಂದು ಪರಿಗಣಿಸಬೇಕಾಗುತ್ತದೆ. ಆದರೆ ಅವುಗಳನ್ನು ಸಂಕ್ಷಿಪ್ತವಾಗಿ ಬಳಸುವ ಮುಂಚೆ ಸವಿಸ್ತಾರವಾದ ವಿವರಣೆಯು ಅವಶ್ಯವೆನಿಸುತ್ತದೆ. ಆದ್ದರಿಂದ ಇಂತಹ ಪದಗಳು ಕಾಣಿಸುವಂತೆ ಸೂಚಿಸುವುದಾದರೂ ಅಸಂಖ್ಯಾತ ಕಠಿಣ ಅನ್ವೇಷಣೆಗಳು ಸೃಷ್ಟಿಯಾಗಿ ಅವುಗಳ ಉದ್ದೇಶಿತ ಅರ್ಥವು ಸೋಲಲು ಮುಖ್ಯ ಕಾರಣವಾಗಿ ಕೊನೆಗಾಣುತ್ತದೆ.

ಆದ್ದರಿಂದ ತೀರ ಸರಳವಾದ ಎಲ್ಲಾ ಹೇಳಿಕೆಗಳನ್ನು, ಸಂಭಾಷಣಾತ್ಮಕ ಶಿಷ್ಟತೆಗಳನ್ನು, ಪಾಂಡಿತ್ಯ ಪ್ರದರ್ಶನದ ಮತ್ತು ಅಪೂರ್ವವಾದ ವಾಕ್ಸರಣಿಗೆ ನಿರ್ದಿಷ್ಟವಾಗಿ ಪರಿವರ್ತಿಸಲು ನಾವು ಸಿದ್ಧರಾಗಿರಲೇಬೇಕಾಗುತ್ತದೆ. ಎಲ್ಲಾ ರೀತಿಯ ಗೊಂದಲ ಮತ್ತು ಅನಾನುಕೂಲಗಳ ನಡುವೆಯೂ ಪ್ರಸ್ತುತದ ಈ ವಿಶಿಷ್ಟವಾದ, ಭಾವನಾತ್ಮಕವಾದ ವಾಕ್ಸರಣಿಯು ಮುಖ್ಯವಾಗಿ ಯಾವ ಕಾರಣಕ್ಕೆ ಉಳಿದುಕೊಂಡಿದೆ ಎಂಬುದನ್ನು ಹುಡಕಬೇಕಾಗುತ್ತದೆ. ಈ ಬಗೆಯ ಭಾಷೆಯು ಭಾವನಾತ್ಮಕ

ಉದ್ದೇಶಕ್ಕಾಗಿ ಕಡೆಗಣಿಸಲಾಗದು. ಆದರೆ ಸ್ಪಷ್ಟತೆಗೆ ನಿರ್ದಿಷ್ಟವಾಗಿ ಏನು ನಡೆಯುತ್ತಿದೆ ಎಂಬ ಪರೀಕ್ಷೆಗಾಗಿ ಪರಿವರ್ತಿಸುವುದು ಸಮಾನವಾದ ಅನಿವಾರ್ಯತೆಯಾಗಿದೆ.

ಅತ್ಯಂತ ವಿಮರ್ಶಾತ್ಮಕ ಹೇಳಿಕೆಗಳು ಸಂಕ್ಷಿಪ್ತ ರೂಪದಲ್ಲಿ ವ್ಯಕ್ತಪಡಿಸಲಾಗುತ್ತದೆ. ಅಂದರೆ ಒಂದು ವಸ್ತುವು ನಿದಿಷ್ಟವಾದ ಅನುಭವಗಳನ್ನು ಉಂಟುಮಾಡುತ್ತದೆ ಮತ್ತು ಆ ವಸ್ತುವು ನಿರ್ದಿಷ್ಟ ಗುಣಗಳನ್ನು ಹೊಂದಿದೆ ಎಂಬ ಹೇಳಿಕೆಯ ರೂಪವು ಒಂದು ನಿಯಮವಾಗಿ ಸೂಚಿಸುವಂತೆ ಇರುತ್ತದೆ. ಆದರೆ ವಿಮರ್ಶಕನು ಮುಂದುವರಿದು ಹಲವು ಬಾರಿ ತನ್ನ ಮನಸ್ಸಿನಲ್ಲಿನ ಪರಿಣಾಮವು ವಸ್ತುವಿನ ನಿರ್ದಿಷ್ಟವಾದ ವಿಶೇಷವಾದ ಲಕ್ಷಣಗಳು ಎಂಬ ಕಾರಣವನ್ನು ದೃಢೀಕರಿಸುತ್ತಾನೆ. ಈ ಸಂದರ್ಭದಲ್ಲಿ ಆತ ಆ ವಸ್ತುವಿನ ಬಗೆಗೆ ತನ್ನಲ್ಲಿ ಉಂಟಾದ ಪರಿಣಾಮದ ಜೊತೆ ಮತ್ತೇನನ್ನೊ ಗುರುತಿಸುತ್ತಾನೆ. ಈ ರೀತಿಯ ಪರಿಪೂರ್ಣವಾದ ವಿಮರ್ಶೆಯನ್ನೆ ನಾವು ನಿರೀಕ್ಷಿಸುವುದು. ಆಗಿದ್ದರೂ ವಿಮರ್ಶಕನ ಸೂಕ್ಷ್ಮ ದೃಷ್ಟಿಯು ಉನ್ನತವಾಗಿ ಸಹಕಾರಿಯಾಗುವ ಮೊದಲು ಒಂದು ವಸ್ತುವಿನ ಗುಣಲಕ್ಷಣಗಳು ಮತ್ತು ಅದರ ಅವಲೋಕನದ ಪರಿಣಾಮದ ಅನುಭವಗಳ ನಡುವೆ ಒಂದು ಅತ್ಯಂತ ಸ್ಪಷ್ಟವಾದ ಮಿತಿ ಅವಶ್ಯವಾದುದು. ದುರದೃಷ್ಟವಶಾತ್ ವಿಮರ್ಶೆಯ ಬಹು ಭಾಗವು ಗೊಂದಲಮಯ ಉದಾಹರಣೆಗಳಿಂದ ಸೃಷ್ಟಿಯಾಗಿದೆ.

ಈ ಸಂದರ್ಭದಲ್ಲಿ ಎರಡು ವಿವರಣೆಗಳನ್ನು ಪರಿಚಯಿಸುವುದು ಸೂಕ್ತವಾಗುತ್ತದೆ. ಒಂದು ಅನುಭವವು ನಿರ್ದಿಷ್ಟ ರೀತಿಗಳಲ್ಲಿ ಮೌಲ್ಯಯುತವಾದದ್ದು ಎಂದು ಹೇಳುವುದಲ್ಲದೆ ಒಂದು ವಿಚಾರಶೀಲ ವಸ್ತುವು ನಿರ್ದಿಷ್ಟ ಲಕ್ಷಣಗಳಿಂದ ರೂಪಿತಗೊಂಡದ್ದು ಎಂದು ಹೇಳುವ ಸಂಪೂರ್ಣವಾದ ವಿಮರ್ಶಾತ್ಮಕವಾದ ಹೇಳಿಕೆಯಲ್ಲಿ ಅನುಭವದ ಮೌಲ್ಯವನ್ನು ವಿವರಿಸುವುದನ್ನು ನಾವು ವಿಮರ್ಶಾತ್ಮಕ ಭಾಗವೆಂದು ಹೇಳಬಹುದು. ವಸ್ತು ಅಥವಾ ವಿಷಯ ವಿವರಿಸುವಂತಹುದನ್ನು ನಾವು ತಾಂತ್ರಿಕ ಭಾಗವೆಂದು ಹೇಳಬಹುದು. ಅದೇ ರೀತಿಯಾಗಿ ನಾವು ಮರದ ಮತ್ತು ಕಲ್ಲಿನ ವಸ್ತುಗಳ ಬಗ್ಗೆ ಭಿನ್ನವಾಗಿ ಅನುಭವಿಸುವುದು ಒಂದು ತಾಂತ್ರಿಕ ಹೇಳಿಕೆಯಾಗಿದೆ. ಅದರಂತೆಯೆ ಗದ್ಯಕ್ಕಿಂತಲೂ ಪದ್ಯಕ್ಕೆ ಛಂದಸ್ಸು, ಅದಿರುವಂತೆಯೆ, ಹೆಚ್ಚು ಸೂಕ್ತವಾಗಿದೆ ಎಂಬುದು ಒಂದು ತಾಂತ್ರಿಕ ಹೇಳಿಕೆಯೆ, ಆದರೆ ಇಲ್ಲಿ ವಿಮರ್ಶಾತ್ಮಕ ಭಾಗವೂ ಕೂಡ ಸೇರಿರುತ್ತದೆ ಎಂಬುದು ಸ್ಪಷ್ಟವಾಗಿದೆ. ಅನುಭವಗಳು ಹುಟ್ಟುವ ಅಥವಾ ಅವುಗಳನ್ನು ಮೂಡಿಸುವ ವಿಧಗಳು ಮತ್ತು ಅರ್ಥಗಳ ಕುರಿತಾದ ಎಲ್ಲಾ ಹೇಳಿಕೆಗಳು ತಾಂತ್ರಿಕ ಭಾಗವೇ ಆಗಿದೆ. ಆದರೆ ಅನುಭವಗಳ ಮೌಲ್ಯಗಳು ಮತ್ತು ಮೌಲ್ಯಯುತವಾದುದು ಎಂದು ಪರಿಗಣಿಸುವ ಕಾರಣಗಳು ವಿಮರ್ಶಾತ್ಮಕ ಹೇಳಿಕೆಗಳೇ ಆಗಿವೆ. ಈ ವಿಮರ್ಶಾತ್ಮಕ ಹೇಳಿಕೆಗಳು ಬರಿಯ ಮನೋವಿಜ್ಞಾನದ ಹೇಳಿಕೆಗಳ ಒಂದು ಭಾಗವನ್ನಷ್ಟೆ ಅನುಸರಿಸುವುದು ಎಂದು ತೋರಿಸಲು ನಾವು ಪ್ರಯತ್ನಿಸಬಹುದು ಅದರೊಂದಿಗೆ ಮೌಲ್ಯವನ್ನು ವಿವರಿಸಲು ಯಾವುದೇ ವಿಶೇಷವಾದ ನೈತಿಕ ಅಥವಾ ಆಧ್ಯಾತ್ಮಿಕ ಮನೋಭಾವನೆಗಳನ್ನು ಪರಿಚಯಿಸುವುದು ಬೇಕಿಲ್ಲ.

ನಿಜವಾದ ಅವಶ್ಯಕತೆಯು ತಾಂತ್ರಿಕ ಮತ್ತು ವಿಮರ್ಶಾತ್ಮಕ ಹೇಳಿಕೆಗಳ ನಡುವಿನ ವ್ಯತ್ಯಾಸವೆ ಆಗಿದೆ. ಕಲಾ ಇತಿಹಾಸದ ಕೆಲವು ಅತ್ಯಂತ ಕುತೂಹಲವಾದ ಭಾಗಗಳಲ್ಲಿ ಗೊಂದಲವು ಉಂಟಾಗಿದೆ. ನಿರ್ದಿಷ್ಟ ಸಂದರ್ಭಗಳಲ್ಲಿ ಒಂದು ನಿರ್ದಿಷ್ಟ ಕೌಶಲವು ಶ್ಲಾಘಿಸುವಂತಹ ಫಲಿತಾಂಶಗಳನ್ನು

ಮುಂದಿಡುತ್ತದೆ. ಮೊದಲನೆಯದಾಗಿ ಕೌಶಲದ ನಿಸ್ಸಂದೇಹ ಲಕ್ಷಣಗಳು ಉತ್ಕೃಷ್ಟತೆಯ ನಿಶ್ಚಿತ ಸಂಕೇತಗಳಾಗಿ ಪರಿಗಣಿಸಬೇಕಾಗುತ್ತದೆ. ನಂತರದಲ್ಲಿ ಉತ್ಕೃಷ್ಟತೆಯೇ ಆಗುತ್ತದೆ. ಹೇಗಿದ್ದರೂ ಶ್ಲಾಘಿಸುವಂತಹ ಈ ರೀತಿಯ ತೋರಿಕೆಯ ಗುರುತುಗಳನ್ನು ಯಾವುದು ತೋರಿಸುವುದಿಲ್ಲವೋ ಅಂತಹವು ಯಾವುದೇ ತೃಪ್ತಕರವಾದ ಪರಿಗಣನೆಯನ್ನು ಪಡೆಯುವುದಿಲ್ಲ. ಥಾಮಸ್ ರೈಮರ್ ಷೇಕ್ಸ್‌ಪಿಯರ್‌ನ್ನು ಕಳಂಕಿಸಿದ್ದು, ಮಿಲ್ಟನ್‌ನ ಅನಿರ್ದಿಷ್ಟ ವಿರಾಮಗಳ ಬಗ್ಗೆ ಡಾ. ಜಾನ್ಸನ್‌ನ ದೃಷ್ಟಿಕೋನ, ಪೋಪ್‌ನ ಫಲಾಂತರದ ವಿಜಯೋತ್ಸವ, ಪ್ರಾಚೀನ ರೂಪದ ಶಿಲ್ಪಕೃತಿ ಇವುಗಳೆಲ್ಲವೂ ಪ್ರಖ್ಯಾತವಾದ ಉದಾಹರಣೆಗಳಾಗಿವೆ. ಇವುಗಳು ಅಪರಿಮಿತವಾಗಿ ದ್ವಿಗುಣಗೊಳ್ಳಲುಬಹುದು. ಆದರೆ ಇದಕ್ಕೆ ವಿರುದ್ಧವಾದ ಸ್ಥಿತಿಯು ಸಾಮಾನ್ಯವಾಗಿ ಸಮಾನವಾಗಿರುತ್ತದೆ. ಒಂದು ನಿಸ್ಸಂಶಯವಾದ ತಾಂತ್ರಿಕ ನ್ಯೂನತೆಯನ್ನು ಒಂದೇ ರೀತಿಯಲ್ಲಿ ಮತ್ತು ವಿಶೇಷವಾದ ಸಂದರ್ಭದಲ್ಲಿ ಪರಿಗಣಿಸಬೇಕಾಗುತ್ತದೆ. ಅದು ಯಾವುದೇ ಒಂದು ಸಾಲಿನಲ್ಲಿ ಅತಿಯಾದ ಒಂದು ಅಕ್ಷರವಿಬಹುದು ಅಥವಾ ಅವ್ಯವಸ್ಥಿತ ಮತ್ತು ಅಪಪ್ರಾಸಬದ್ಧವಾಗಿರಬಹುದು. ಹಾಗೆಯೇ ಯಾವುದೇ ಅಪಪ್ರಾಸಬದ್ಧ ಭಾವಗೀತೆಯನ್ನು ನ್ಯೂನವೆಂದು ಪರಿಗಣಿಸಬೇಕಾಗುತ್ತದೆ.

ಮೌಲ್ಯಗಳಿಗೆ ಕೌಶಲವನ್ನು, ಅರ್ಥಗಳಿಗೆ ಅಂತ್ಯವನ್ನು ತಪ್ಪಾಗಿ ತಿಳಿದುಕೊಳ್ಳುವ ಬದಲಾಗಿ ವಿವರಣೆಯಿಂದ ಸಂಪೂರ್ಣತೆಯನ್ನು ವಿಮರ್ಶಿಸುವ ಯುಕ್ತಿಯು ವಾಸ್ತವವಾಗಿ ವಿಮರ್ಶಕನನ್ನು ಅತ್ಯಂತ ಯಶಸ್ಸಿನೆಡೆಗೆ ನಡೆಸುತ್ತದೆ. ಒಂದು ಪದ್ಯದ ಎಲ್ಲಾ ಪರಿಗಣನೆಯನ್ನು ನಿರ್ಲಕ್ಷಿಸಿ ನ್ಯೂನತೆಯುಳ್ಳ ಪ್ರಾಸವು ಸಾಕಷ್ಟು ಆಧಾರವಾಗಿದೆ ಎಂದು ಯೋಚಿಸುವ ಓದುಗರು ಎಷ್ಟು ಪ್ರಬುದ್ಧರು ಎಂಬುದು ಒಬ್ಬ ಶಿಕ್ಷಕ ಮಾತ್ರ ತಿಳಿದಿರುತ್ತಾನೆ. ಕಾವ್ಯದ ಅರ್ಥವನ್ನು ಛಂದೋವಿನ್ಯಾಸದ ಭ್ರಮೆಯುಳ್ಳ ಹಠವಾದಿಗಳು ಸ್ವಲ್ಪ ಮಾತ್ರವೇ ತಿಳಿದಿರುತ್ತಾರೆ. ಒಂದು ಪದ್ಯದಲ್ಲಿ ಏನು ಮಾಡಬೇಕೆಂಬುದು ತಿಳಿಯದಿದ್ದಾಗ ಮಾತ್ರ ಅದರ ಬಾಹ್ಯ ವಿಷಯಗಳ ಬಗ್ಗೆ ನಾವು ಲಕ್ಷ್ಯ ನೀಡುತ್ತೇವೆ.

[ಐವರ್ ಆಮಸ್ಟ್ರಾಂಗ್ ರಿಚರ್ಡ್ಸ್ (೧೮೯೩-೧೯೭೯) ಇಂಗ್ಲೆಂಡಿನ ಒಬ್ಬ ಕವಿ ಮತ್ತು ವಿಮರ್ಶಕ, ಕೇಂಬ್ರಿಡ್ಜನಲ್ಲಿ ವಿದ್ಯಾಭ್ಯಾಸ ಪ್ರಾರಂಭಿಸಿ ೧೯೩೯ರಲ್ಲಿ ಹಾರ್ವರ್ಡ್ಗೆ ತೆರಳಿ ಭಾಷಾಶಾಸ್ತ್ರ ಮತ್ತು ಶಿಕ್ಷಣ ಅಧ್ಯಯನಕ್ಕೆ ಹಲವು ವರ್ಷ ತೊಡಗಿಸಿಕೊಂಡವನು. ಸಾಹಿತ್ಯ ಕ್ಷೇತ್ರದಲ್ಲಿ ರಿಚರ್ಡ್ಸ್‌ನು ಅತ್ಯಂತ ಹೆಸರುವಾಸಿಯಾಗಿರುವುದು ಆತನ 'Principles of Literary Criticism' (1924) 'Science and Criticism' (1926) ಮತ್ತು ಇವುಗಳೆಲ್ಲಕ್ಕಿಂತ ಇಂಗ್ಲೀಷ್ ಅಧ್ಯಯನ ಮತ್ತು ಬೋಧನೆಯಲ್ಲಿ ಕ್ರಾಂತಿಯನ್ನುಂಟು ಮಾಡಿದ 'Practical Criticism' A Study of Literary Judgement' (1929) ಕೃತಿ. ರಿಚರ್ಡ್ಸ್ ಕವಿಗಳಲ್ಲಿನ ಮತ್ತು ಸಹೃದಯರಲ್ಲಿನ ಅನಿಶ್ಚಿತತೆ, ಭಾವಾತಿರೇಕತೆ ಮತ್ತು ಸೋಮಾರಿತನದ ಬಗ್ಗೆ ದಾಳಿ ಮಾಡುತ್ತಾನೆ. ಆದರೆ ಬಹುಶಃ ಈತನ ಅತ್ಯಂತ ಉನ್ನತವಾದ ಕೊಡುಗೆಯು ಪಠ್ಯದ ಸಮೀಪ ಅಧ್ಯಯನದ ಮತ್ತು ಗೊತ್ತು ಗುರಿಯಿಲ್ಲದ ಸಾಮಾನ್ಯೀಕರಣದ ಅವಶ್ಯಕತೆಯ ಬಗ್ಗೆಯದಾಗಿದೆ. ಈತನ ಪದ್ಧತಿಯು ಹಲವು ಶಾಲೆ ಮತ್ತು ವಿಶ್ವವಿದ್ಯಾನಿಲಯದ ತರಗತಿಗಳ ಮಾನದಂಡವಾಗಿದೆ.

ಪ್ರಸುತ್ತದ ಪ್ರಬಂಧ "The Language of Criticisms" ಎಂಬುದನ್ನು ರಿಚರ್ಡ್ಸ್‌ನ 'Principles of Literary Criticism' (1924) ಎಂಬ ಕೃತಿಯಿಂದ ಆಯ್ದುಕೊಳ್ಳಲಾಗಿದೆ. ಈ

ಪ್ರಬಂಧವಲ್ಲಿ ಲೇಖಕನು ವಿಮರ್ಶೆಯಲ್ಲಿ ಬಳಸುವ ಭಾಷೆಗಿಂತಲೂ ಮನಸ್ಸಿನಲ್ಲಿ ಸೃಷ್ಟಿಯಾಗುವ ಭಾಷೆಯನ್ನು ಮನೋವಿಜ್ಞಾನದ ಬೆಳಕಿನಡಿಯಲ್ಲಿ ಪರೀಕ್ಷಿಸಿ ಭಾಷೆಯು ಹೇಗೆ ಮನಸ್ಸಿನ ಸ್ಥಿತಿಯಂತೆ ಸೃಷ್ಟಿಯಾಗುತ್ತದೆ ಮತ್ತು ಅದರ ಪರಿಣಾಮಗಳು ವಿಮರ್ಶೆಯ ಭಾಷೆಯಲ್ಲಿ ಯಾವ ರೀತಿ ಕಾರ್ಯ ನಿರ್ವಹಿಸುತ್ತದೆ ಮತ್ತು ಹೇಗೆ ನಿರ್ವಹಿಸಬೇಕು ಎಂಬುದನ್ನು ತಿಳಿಸುತ್ತಾನೆ.]

□

---

ಶ್ರೀಕೀರ್ತಿ ಬಿ.ಎನ್.
ಆಂಗ್ಲ ಉಪನ್ಯಾಸಕರು, ವಿಶ್ವವಿದ್ಯಾನಿಲಯ ಸಂಜೆ ಕಾಲೇಜು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ಪಂಪ-ರನ್ನರ ಅಹಿಂಸಾ ಪ್ರತಿಪಾದನೆ

ಪ್ರೊ. ಕೃಷ್ಣಮೂರ್ತಿ ಹನೂರು

ಪಂಪನ ವಿಕ್ರಮಾರ್ಜುನ ವಿಜಯದ ಹದಿಮೂರನೇ ಆಶ್ವಾಸವು ಕಥಾನಾಯಕ ದುರ್ಯೋಧನನ ಮರಣ ಸಂಗತಿಯನ್ನು ಹೇಳುವಂಥದ್ದು. ಈತನ ಅಂತ್ಯವನ್ನು ಪಂಪ ತುಸು ಉದಾರವಾಗಿಯೇ ಪ್ರಸ್ತಾಪಿಸಿದ್ದಾನೆ. ಹಾಗೆಯೇ ಕರ್ಣನ ಸಾವನ್ನು ಹೇಳುವಾಗಲೂ ಪಂಪ ತಾನು ಬಹಳ ಮೆಚ್ಚಿಕೊಂಡು ಅರಿಕೇಸರಿಯನ್ನೂ ಮರೆತು, ಓದುಗರೆಲ್ಲ ಕರ್ಣನನ್ನು ಮಾತ್ರ ನೆನೆಯಲು ಕರೆ ಕೊಡುತ್ತಾನೆ. ಪಂಪ ತನ್ನ ವ್ಯಕ್ತಿತ್ವವನ್ನೇ ಕರ್ಣನಲ್ಲಿ ಕಂಡಿರಬೇಕು. ಕರ್ಣನ ಹುಟ್ಟು, ಬೆಳವಣಿಗೆ, ಪ್ರಯಾಣ, ನಂತರ ದುರ್ಯೋಧನನನ್ನು ಆ ಮುಂದೆ ತನ್ನಲ್ಲಿ ಅಂತರ್ಗತವಾಗಿದ್ದ ನಿಷ್ಠೆ, ಶೌರ್ಯ, ತ್ಯಾಗ ಈ ಗುಣಗಳನ್ನು ಮೆರೆದದ್ದನ್ನು ಅಪಾರವಾಗಿ ಮೆಚ್ಚಿದ ಪಂಪ ಕರ್ಣನ ಪಾತ್ರವನ್ನು ಅನನ್ಯವೆಂದುಕೊಂಡ.

ಒಟ್ಟಿನಲ್ಲಿ ಈ ಮಹಾಭಾರತ, ರಾಮಾಯಣಗಳನ್ನು ನೋಡುವ ಕ್ರಮ ದಕ್ಷಿಣ ಭಾರತೀಯ ಕವಿಗಳಲ್ಲೇ ಬೇರೆಯಾಗಿರುತ್ತದೆ. ತಮಿಳಿನ ಕವಿ ಕಂಬನಾಗಲಿ, ಮಲೆಯಾಳಂ ಕವಿ ಶಕ್ತಿ ಭದ್ರನಾಗಲಿ ವಾಲ್ಮೀಕಿ ರಾಮಾಯಣವನ್ನು ನೋಡುವ ಕ್ರಮವೇ ಬೇರೆ. ಉತ್ತರಭಾರತದ ಆರ್ಯಪ್ರಣೀತ ಕಾವ್ಯಗಳು, ಪುರುಷ ಪಾರಮ್ಯವನ್ನು ಹೇಳುವ ಕಾವ್ಯಗಳಾದರೆ, ತಮಿಳುನಾಡಿನ ಶಿಲಪ್ಪದಿಕಾರಂ ಮತ್ತು ಮಣಿಮೇಖಲೈ ಕಾವ್ಯಗಳು ಸ್ತ್ರೀ ಪಾರಮ್ಯವನ್ನು ಕುರಿತು ಹೇಳುತ್ತವೆ. ಈ ಹಿನ್ನೆಲೆಯಲ್ಲಿ ರಾಮಾಯಣ ಮಹಾಭಾರತಗಳನ್ನು ದಕ್ಷಿಣಭಾರತೀಯ ಪ್ರಾಚೀನ ಕವಿಗಳು ಬೇರೊಂದು ದೃಷ್ಟಿಯಿಂದಲೇ ಗಮನಿಸಿ ಪ್ರತಿ ನಾಯಕರನ್ನು ಉದಾತ್ತೀಕರಿಸುವ ಯತ್ನವನ್ನು ತಮಗರಿವಿಲ್ಲದೆಯೇ ಮಾಡಿರುತ್ತಾರೆ.

ಹನ್ನೆರಡನೆಯ ಶತಮಾನದಲ್ಲಿ ಬಂದ ವಚನಕಾರರು ಸಂಪೂರ್ಣವಾಗಿ ತಾವು ರಾಮಾಯಣ ಮಹಾಭಾರತಗಳನ್ನು ಗಮನಿಸಿಯೇ ಇಲ್ಲವೇನೋ ಎಂಬಂತೆ ಇಲ್ಲಿನ ಸಾಮಾಜಿಕ ವಿಷಮತೆ,

ಜಾತಿಪದ್ಧತಿ, ಇತಿಹಾಸದ ದುರಂತವನ್ನು ವಚನಗಳಲ್ಲಿ ಮೇಲಿಂದ ಮೇಲೆ ಪ್ರಸ್ತಾಪಿಸುತ್ತಾರೆ. ಹರಿಹರ ರಾಘವಾಂಕರೂ ಒಂದು ಅರ್ಥದಲ್ಲಿ ಇದನ್ನೇ ಮುಂದುವರೆಸುತ್ತಾರೆ. ಈ ಅರ್ಥದಲ್ಲಿ ರನ್ನನು ತನ್ನ ಕೃತಿ ಸಾಹಸಭೀಮ ವಿಜಯದ ನಾಯಕನನ್ನಾಗಿ ಭೀಮನನ್ನು ತಿಳಿದಿದ್ದರೂ ಇಡೀ ಕಾವ್ಯದಲ್ಲಿ ವಿಜೃಂಭಿಸುವುದು ದುರ್ಯೋಧನ ವಿಲಾಪವೇ ಎಂಬುದು ಈಗಾಗಲೇ ಎಲ್ಲರ ಗಮನಕ್ಕೆ ಬಂದ ಮುಖ್ಯ ಅಂಶ. ದುರ್ಯೋಧನನನ್ನು ಕಾವ್ಯ ನಾಯಕನನ್ನಾಗಿ ನೋಡುವುದಕ್ಕಿಂತಲೂ ಕಾವ್ಯದ ಒಟ್ಟು ಹಿನ್ನೆಲೆಯಲ್ಲಿರುವ ಅಹಿಂಸಾಭಾವ ಇನ್ನೂ ಮುಖ್ಯ ಧ್ವನಿಯಾಗಿದೆ.

ಅಹಿಂಸೆಯ ತತ್ವದ ಹಿನ್ನೆಲೆಯ ಧರ್ಮವನ್ನು ನಂಬಿದ ಪಂಪ, ರನ್ನರು ಈ ತತ್ವವನ್ನು ಯುದ್ಧದ ಹಿನ್ನೆಲೆಯಲ್ಲಿ, ಅದರಿಂದ ಏರ್ಪಡುವ ಹಿಂಸೆಯನ್ನು ಅತ್ಯಂತ ಸೂಕ್ಷ್ಮವಾಗಿ ನಿರೂಪಿಸುತ್ತಾರೆ. ಯುದ್ಧದ ಹಿಂಸೆಯನ್ನು ಕಾಣುತ್ತ ಹೋಗುವವನು ಸ್ವತಃ ದುರ್ಯೋಧನನೇ. ದುರ್ಯೋಧನ ತನ್ನ ದುರಂತ ಅಥವಾ ಸಾವಿನ ಅಂಜಿಕೆಯಲ್ಲಿದ್ದಾನೆ. ಸಾವಿನ ಭಯ ಆತನ ಅಂತರಂಗದಲ್ಲಿ ಮನೆ ಮಾಡಿದೆ. ಸಾವಿನ ಭಯವನ್ನು ತಪ್ಪಿಸಿಕೊಳ್ಳಲು ಆತ ಎಲ್ಲಿಯಾದರೂ ಅಡಗಿಕೊಳ್ಳಬೇಕಾಗಿದೆ. ಇಡೀ ಕಾವ್ಯದಲ್ಲಿ ದುರ್ಯೋಧನ ವಿಜೃಂಭಿಸುವ ಪರಿ ನೋಡಿದರೆ ಅವನು ಹಾಗೆ ಎಲ್ಲಿಯೂ ಅಡಗಿ ಕೂರಬೇಕಾದ ಪರಿಸ್ಥಿತಿಯೇ ಇರುವುದಿಲ್ಲ. ಭೂಮಿಯೆಲ್ಲ ತನ್ನದೇ ಎಂದು ಪರಿಭಾವಿಸುತ್ತಾನೆ. ಹೀಗೆ ಪಂಪ ಆದಿಪುರಾಣದಲ್ಲಿಯೂ ಭರತನ ಮೂಲಕ ಭೂಮಿಯನ್ನೆಲ್ಲ ನನ್ನದೇ ಎಂಬ ಆಕಾಂಕ್ಷೆ ಹುಟ್ಟಿಸಿ, ಆ ಮುಂದೆ ಅದೇ ಭಾವನೆಯನ್ನು ಬಾಹುಬಲಿಯ ಮುಂದೆ ಹುಡಿಗುಟ್ಟಿಸುತ್ತಾನೆ.

ರನ್ನನೂ ಸಹ ಕುರುಕ್ಷೇತ್ರದಲ್ಲಿ ದುರ್ಯೋಧನನನ್ನು ಏಕಾಂಗಿಯಾಗಿ ನಿಲ್ಲಿಸಿ ಆತನ ಅಹಂಕಾರವನ್ನು ದುಃಖ ಮತ್ತು ಭಯದ ಹಿನ್ನೆಲೆಯಲ್ಲಿ ಮುರಿಯುತ್ತಾನೆ. ಹೀಗಾಗಿ ಗದಾಯುದ್ಧ ಎಂದರೆ ಅದು ಹಿಂಸೆಯ ಪರಿಣಾಮದ ನಿರೂಪಣೆ. ಈ ಪರಿಣಾಮದ ನಿರೂಪಣೆ ಸ್ಪಷ್ಟವಾಗುವುದು ಪುಲ್ಮರುಳಿನ ಮೂಲಕ. ಪ್ರಥಮ ಬಾರಿಗೆ ಪಂಪ ಈ ಪುಲ್ಮರುಳುಗಳನ್ನು ತನ್ನ ವಿಕ್ರಮಾರ್ಜುನವಿಜಯ ಕೃತಿಯ ಹದಿಮೂರನೇ ಆಶ್ವಾಸದಲ್ಲಿ ತರುತ್ತಾನೆ. ಷೇಕ್ಸ್‌ಪಿಯರನ ಮ್ಯಾಕ್‌ಬೆತ್ ನಾಟಕದಲ್ಲಿ ನಾಯಕನ ದುರಾಸೆ ಪಿಶಾಚಿಗಳ ನೃತ್ಯ ಮತ್ತು ಹಾಡಿನಲ್ಲಿ (ಸೊಗಸೇ ಹೊಲಸು, ಹೊಲಸೇ ಸೊಗಸು-ಅನುವಾದ ಡಿ.ವಿ.ಜಿ.) ಗೋಚರವಾಗುವಂತೆ ದುರ್ಯೋಧನನ ರಾಜ್ಯ ಸಂಪಾದನೆಯ ಸೊಗಸಿನ ಕನಸು ಈಡೇರದೆ ಕುರು ಕ್ಷೇತ್ರದ ರಕ್ತದ ಮಡುವಿನಲ್ಲಿ ಅದರ ದುರ್ವಾಸನೆಯಲ್ಲಿ ಹೂತುಹೋಗುತ್ತದೆ.

ಭೀಷ್ಮರೊಡನೆ ತಾನು ಇನ್ನೂ ಛಲಕ್ಕಾಗಿ ಬದುಕುವನೆಂಬ ಕೂಗು ಆತನ ಮರಣದ ತುದಿಯನ್ನಷ್ಟೇ ಸ್ಪಷ್ಟಪಡಿಸುತ್ತದೆ. ಇಲ್ಲಿ ದುರ್ಯೋಧನನ ದುರ್ಮರಣವೂ ಒಂದು ಬಗೆಯ ಹಿಂಸೆಯನ್ನೇ ಸಾರುತ್ತದೆ. ರಾಜ್ಯಾಕಾಂಕ್ಷೆಯ ಪರಿಣಾಮವೇ ಯುದ್ಧ. ನಮ್ಮ ಇತಿಹಾಸದ ದುರಂತ ಯುದ್ಧದಲ್ಲಿ ಅಡಗಿದೆ. ಗೆದ್ದ ಅರಸರೂ ನಾನಾ ರೀತಿಯ ದುರಂತಗಳಿಗೆ ಒಳಗಾಗುವವರೇ ಸರಿ. ಪಾಂಡವರು ಕುರುಕ್ಷೇತ್ರವನ್ನು ಗೆದ್ದರೂ ಕೊನೆ ಕೊನೆಯಲ್ಲಿ ಹೆತ್ತ ಮಕ್ಕಳ ಸಾವನ್ನೂ ಕಣ್ಣಾರೆ ನೋಡಬೇಕಾದ ಸ್ಥಿತಿಗೆ ತಲುಪುತ್ತಾರೆ. ಪಾಂಡವರ ಗೆಲುವು ಎಂದರೆ ಎಲ್ಲರನ್ನೂ ಕಳೆದುಕೊಂಡು ತಾವು ಮಾತ್ರ ಅನಾಥರಾಗಿ ಉಳಿದದ್ದಷ್ಟೆ. ಈ ಅನಾಥ ಪ್ರಜ್ಞೆಯನ್ನು ದುರ್ಯೋಧನ ಗದಾಯುದ್ಧ ಪೂರ್ವದಲ್ಲೇ ಅನುಭವಿಸಿರುತ್ತಾನೆ. ಅವನು ಕುರುಕ್ಷೇತ್ರ ಯುದ್ಧಾನಂತರ ಸತ್ತಮೇಲೆ ಸಾವಿನ ಭಯ, ಅನಾಥಪ್ರಜ್ಞೆ ಪಾಂಡವರಿಗೆ ವರ್ಗಾಯಿಸಲ್ಪಡುತ್ತದೆ. ಹೀಗೆ ಯುದ್ಧ ಮತ್ತು ಅದರ ಹಿಂಸೆಯ ವ್ಯಾಖ್ಯಾನ ಮತ್ತು ವ್ಯಥೆಗಳನ್ನು ರನ್ನ ಅತ್ಯಂತ ವಿಷದವಾಗಿ ದುರ್ಯೋಧನ ಬಾಯಲ್ಲಿ ಹೊರಹಾಕಿಸುತ್ತಾನೆ.

ಎಷ್ಟಾದರೂ ಜೈನಧರ್ಮ ಅಹಿಂಸೆಯ ಹಿನ್ನೆಲೆಯಲ್ಲಿ ಹುಟ್ಟಿಬಂದದ್ದು. ಇದನ್ನು ಒಪ್ಪಿಕೊಂಡ ರನ್ನ ಕೃತಿಯ ನಾಯಕ ದುರ್ಯೋಧನ ಬಯಸಿಬಯಸಿ ಹೂಡಿದ ಯುದ್ಧದ ಪರಿಣಾಮವೇನಾಯಿತೆನ್ನುವುದನ್ನು, ಕುರುಕ್ಷೇತ್ರ ನೆಲವನ್ನು ವಿವರವಾಗಿ ವರ್ಣಿಸುವುದರ ಮೂಲಕ ಸಾಹಸಭೀಮ ವಿಜಯ ಖಂಡಕಾವ್ಯವನ್ನು ರಚಿಸಿದ್ದಾನೆ. ಇಲ್ಲಿ ಕೃತಿಯ ಹೆಸರು ಭೀಮನ ಸಾಹಸ ಮತ್ತು ಆತನ ವಿಜಯ ಎಂದಿದೆ. ಇದರಲ್ಲಿ ಸಾಹಸ ಮತ್ತು ವಿಜಯಕ್ಕಿಂತಲೂ ಯುದ್ಧದ ತೀವ್ರಪರಿಣಾಮವೇ ಓದುಗರ ಗಮನವನ್ನು ಸೆಳೆಯುತ್ತದೆ. ಈ ಹೊತ್ತಿಗೂ ಸಾಹಸಭೀಮ ವಿಜಯ ಶೀರ್ಷಿಕೆಗಿಂತ ಗದಾಯುದ್ಧ ಎಂಬ ಹೆಸರೇ ಹೆಚ್ಚು ಪ್ರಚಾರದಲ್ಲಿದ್ದು ಅದು ಸ್ವಲ್ಪಮಟ್ಟಿಗೆ ಯುದ್ಧದ ಪರಿಣಾಮವನ್ನೇ ಹೇಳುವಂತಿದೆ.

ರನ್ನ ತನ್ನ ಆಶ್ರಯದಾತನಾದ ಸತ್ಯಾಶ್ರಯ ತೈಲಪನನ್ನು ಅನ್ಯಮಾರ್ಗವಿಲ್ಲದೆ ಒಪ್ಪಿಕೊಂಡಿರುವುದು ಸರಿ. ಪಂಪ ಸ್ವೀಕರಿಸಿರುವ ಮಾರ್ಗವೂ ಇದೇ. ಇದು ಸಾಹಸಭೀಮ ವಿಜಯ ಮತ್ತು ವಿಕ್ರಮಾರ್ಜುನ ವಿಜಯ ಕೃತಿಗಳ ಹೊರ ವ್ಯವಸ್ಥೆ. ಆದರೆ ಕೃತಿಯ ಒಳಗಿನ ವ್ಯವಸ್ಥೆಯಿಂದಲೇ ಹುಟ್ಟುವ ಕಥೆ ಪಂಪ ರನ್ನರ ಅಂತರಂಗವನ್ನು ತೀವ್ರವಾಗಿ ಸೆಳೆದಿದೆ. ಅದರಿಂದಲೇ ಸಾಹಸಕ್ಕೊಂದು ಹೆಸರಾದ, ಸತ್ಯಕ್ಕೊಂದು ವ್ಯಕ್ತಿತ್ವವೆನಿಸುವ, ಪರಿಸ್ಥಿತಿಯ ಕೂಸಾದ, ಅದೃಷ್ಟದೊಡನೆ ಹೋರಾಡುವ ಕರ್ಣನನ್ನು ಪಂಪ ಮೆಚ್ಚಿಕೊಂಡಿದ್ದಾನೆ. ರನ್ನನೂ ದುರ್ಯೋಧನನ ಛಲವನ್ನು ಅವನ ಸ್ನೇಹ ಶ್ರೀಮಂತಿಗೆಯನ್ನು ಒಪ್ಪಿಕೊಂಡಿರುತ್ತಾನೆ. ಇದು ಕೃತಿಯ ಒಳಗಿನಿಂದಲೇ ಹುಟ್ಟುವ ಭಾವ. ಪಂಪನೂ ರನ್ನನಂತೆ ತನ್ನ ಕೃತಿಯನ್ನು ವಿಕ್ರಮಾರ್ಜುನವಿಜಯ ಎಂದು ಅರಿಕೇಸರಿಯನ್ನು ನೆನಪಿನಲ್ಲಿರಿಸಿಕೊಂಡು ಕರೆದಿದ್ದರೂ ಈ ಶೀರ್ಷಿಕೆ ನಮ್ಮ ಮನಸ್ಸಿನಲ್ಲಿರುವುದಕ್ಕಿಂತ ಕವಿಯೇ ಎಲ್ಲರನ್ನೂ ಮರೆತು ಹೇಳುವ ಕರ್ಣ ಓದುಗರ ಅಂತರಂಗವನ್ನು ಮುಟ್ಟುತ್ತಾನೆ. ಈ ಕಾರಣದಿಂದ ಕೃತಿಯ ಶೀರ್ಷಿಕೆಗಳು ಮತ್ತು ಕೃತಿಯ ಹೊರ ಆವರಣದಲ್ಲಿ ನಡೆಯುವ ತಾಂತ್ರಿಕ ಬದಲಾವಣೆಗಳು ಹಿಂದೆ ಸರಿಯುತ್ತವೆ. ರನ್ನನ ಸಾಹಸಭೀಮವಿಜಯ ಶೀರ್ಷಿಕೆ, ಸತ್ಯಾಶ್ರಯ ತೈಲಪನ ಪ್ರಸ್ತಾಪ ಮತ್ತೆ ಭೀಮನ ಸಾಹಸಗಳೆಲ್ಲವೂ ಹೊರ ವಿವರಗಳಾದರೆ ಕೃತಿಯ ಅಂತರಂಗ ಮಾತ್ರ ಬೇರೆಯೇ ಇದೆ. ಅದು ರನ್ನನ ಪ್ರತಿಭೆ ಅಥವಾ ಅಂತರಂಗದ ಜತೆ ಬೆಸೆದುಕೊಂಡಿದೆ. ಕವಿಯ ಮನಸ್ಸಿಗೆ ಆಶ್ರಮದಾತರ ಸಂಬಂಧವಿರಬಹುದು, ಆದರೆ ಯಾರ ಹಂಗೂ ಇರುವುದಿಲ್ಲ. ಈ ಅರ್ಥದಲ್ಲಿ ಪಂಪ ರನ್ನರ ಮೂಲಮಹಾಭಾರತದ ತಾಂತ್ರಿಕ ಬದಲಾವಣೆಗಳು ಏನೇ ಇದ್ದರೂ ಅಂತರಂಗ ಹಿಂಸೆಯ ವಿಕಾರವನ್ನೂ ತಾವು ನಂಬಿದ ಧರ್ಮರೀತಿಯ ಅಹಿಂಸೆಯ ಮಹತ್ವವನ್ನು ಒಪ್ಪಿಕೊಂಡಿದೆ. ಆ ಕಾರಣಕ್ಕಾಗಿಯೇ ಪಂಪರನ್ನರು ಯುದ್ಧರಂಗದಲ್ಲಿ ದುರ್ಯೋಧನ ನಡೆದು ಹೋಗಬೇಕಾದರೆ ಅವನ ಮನಸ್ಸಿನ ವಿಕಾರವನ್ನು ಯುದ್ಧದ ವಿಷಮತೆಯನ್ನು ಪುಲ್ಮರಳಿನ ವೇಷ ಮತ್ತು ಮಾತುಕತೆಯಲ್ಲಿ ಬಿಂಬಿಸಲು ಪ್ರಯತ್ನಿಸುತ್ತಾರೆ. ಆ ಪುಲ್ಮರುಳು, ಕುರುಕ್ಷೇತ್ರ ಯುದ್ಧಕ್ಕೆ, ಆ ಸಂಬಂಧ ಜರುಗಿದ ಎಲ್ಲ ದುರಂತಕ್ಕೆ ದುರ್ಯೋಧನನೇ ಕಾರಣ, ಅದಕ್ಕೆ ಶಿಕ್ಷೆ ಭೀಮನಿಂದಲೇ ಆಗಬೇಕಾಗಿದೆ ಎಂದು ನುಡಿಯುತ್ತವೆ. ತನ್ನ ಮಕ್ಕಳ, ಗುರುಗಳ, ಬಂಧುಗಳ, ಸ್ನೇಹಿತರ ಶವಗಳನ್ನು ನೋಡುತ್ತ ಬರುವ ದುರ್ಯೋಧನನಿಗೆ ತಾನು ಮಾಡಿದ ಅವಿವೇಕಕ್ಕೇ ಸಾವೇ ಶಿಕ್ಷೆ ಎಂದು ತಿಳಿದು ಅದನ್ನು ತಾನೇ ಆಹ್ವಾನಿಸುತ್ತಾನೆ. ಅದಕ್ಕೊಂದು ದಂಡನೆಯ ಶಕ್ತಿಯಾಗಿ ಭೀಮ ಬರುತ್ತಾನಷ್ಟೆ. ಭೀಮದುರ್ಯೋಧನರ ಯುದ್ಧ ಅತ್ಯಂತ ಆವೇಶದಿಂದ ವರ್ಣಿಸಲ್ಪಟ್ಟಿದೆಯಾದರೂ, ದುರ್ಯೋಧನನ ಕುರುಕ್ಷೇತ್ರ ಪ್ರಮಾಣ,

ಸತ್ತವರ ಸಾವಿಗೆ ಮೌನವೃಕ್ಷಗಳು ಗಮನ ಸೆಳೆಯುವಂತೆ. ಪರಾಕ್ರಮಿಗಳಿಬ್ಬರ ಜೀವಂತ ಯುದ್ಧ ಗಮನ ಸೆಳೆಯುವುದಿಲ್ಲ. ಈ ಯುದ್ಧ ಭಾಗ ಕೇವಲ ಅನುಕರಣ ಪದಗಳಿಂದ ಕೂಡಿದೆ. ಇದು ಹಿಂದೆ ನಡೆದ ಯುದ್ಧದ ಇನ್ನೊಂದು ಭಾಗವಷ್ಟೆ, ಆದರೆ ರಣರಂಗದಲ್ಲಿ ಸತ್ತವರನ್ನು ನೋಡಿ ದುರ್ಯೋಧನ ದುಃಖಿಸುವ ಭಾಗ ಮಾತ್ರ ಎಲ್ಲೂ ಪುನರಾವರ್ತನೆಯಾಗುವ ಸನ್ನಿವೇಶವಲ್ಲ.

ಸಾಮಾನ್ಯವಾಗಿ ಕಾವ್ಯಗಳನ್ನು ನಾಯಕನ ಯುದ್ಧವನ್ನು ದಿಗ್ವಿಜಯವೆಂತಲೋ ಸಾಧನೆಯೆಂತಲೋ ಬಿಂಬಿಸಲಾಗುತ್ತದೆ. ಅದು ಯಥಾಸ್ಥಿತಿ. ಇದಕ್ಕೆ ಮಾರುಹೋಗಿಯೇ ರನ್ನ ತನ್ನ ಕೃತಿಯನ್ನು ಸಾಹಸಭೀಮ ವಿಜಯ ಎಂದೇ ಕರೆದಿರುತ್ತಾನೆ. ಆದರೆ ಇಡೀ ಕಾವ್ಯದ ಸಂಗತಿ ಯಥಾಸ್ಥಿತಿಯನ್ನು ಬದಿಗಟ್ಟಿ ಯುದ್ಧದುರಂತದ ಹಿನ್ನಲೆಯನ್ನು ತೆಗೆದುಕೊಳ್ಳುತ್ತದೆ. ಇದರ ಸೂಕ್ಷ್ಮ ಬೀಜಗಳು ಅಡಗಿರುವುದು ಪಂಪನಲ್ಲೇ. ಪಂಪನೂ ಅಹಿಂಸೆಯನ್ನು ಪರಮೋಚ್ಚ ಎಂದು ಹೇಳುವ ಜೈನ ಧರ್ಮವನ್ನು ನಂಬಿದವನೇ. ಪಂಪ ತಾನು ಯುದ್ಧದಲ್ಲಿ ಮಹಾಪರಾಕ್ರಮಿ ಎಂದು ಕೊಂಡರೂ, ಬಾಹುಬಲಿಯ ತ್ಯಾಗ, ವೈರಾಗ್ಯ ಕರ್ಣನ ಸತ್ಯ ಮತ್ತು ದಾನ ಗುಣಗಳೇ ಶ್ರೇಷ್ಠವಾದದ್ದು ಎಂದು ಸ್ಪಷ್ಟವಾಗಿ ತಿಳಿದಿರುವನು. ಅಂತೆಯೇ ರನ್ನ ಭೀಮ ಮತ್ತು ಸತ್ಯಾಶ್ರಯನ್ನು ನಂಬಿಕೊಂಡಿದ್ದೂ, ಆತನ ಅಂತರಂಗ ಅಹಿಂಸೆಯನ್ನು ಪ್ರತಿಪಾದಿಸುತ್ತಲೇ ಮುನ್ನಡೆಯುತ್ತದೆ. ಹೀಗಾಗಿ ಪಂಪನ ವಿಕ್ರಮಾರ್ಜುನ ವಿಜಯದ ಹದಿಮೂರನೇ ಆಶ್ವಾಸ ಮಾತ್ರವನ್ನೇ ಆರಿಸಿಕೊಂಡು ತನ್ನ ಧರ್ಮ ಮೂಲತತ್ವವನ್ನು ರನ್ನ ಗದಾಯುದ್ಧದಲ್ಲಿ ಪ್ರತಿಪಾದಿಸುತ್ತಾನೆ.

□

ಪ್ರೊ. ಕೃಷ್ಣಮೂರ್ತಿ ಹನೂರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು-೬

# ರಾಜಶೇಖರ ನೀರಮಾನ್ವಿ ಅವರ 'ಹಂಗಿನರಮನೆಯ ಹೊರಗೆ' : ಒಂದು ಅವಲೋಕನ

ಪ್ರೊ. ವಿ.ಜಿ. ಪೂಜಾರ್

ಶ್ರೀ ರಾಜಶೇಖರ ನೀರಮಾನ್ವಿ ಅವರು ಹೈದ್ರಾಬಾದ ಕರ್ನಾಟಕ ಪ್ರದೇಶದ ಪ್ರಮುಖ ಕಥೆಗಾರರಲ್ಲಿ ಒಬ್ಬರು. ಇವರು ವೃತ್ತಿಯಿಂದ ಭೂಗರ್ಭಶಾಸ್ತ್ರ ಪ್ರಾಧ್ಯಾಪಕರಾಗಿದ್ದರೂ ಪ್ರವೃತ್ತಿಯಿಂದ ಕಥೆಗಾರರಾಗಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ತಮ್ಮ ದಿಟ್ಟವಾದ ಹೆಜ್ಜೆಗಳನ್ನು ಮೂಡಿಸಿದ್ದಾರೆ. ಜಯತೀರ್ಥ ರಾಜಪುರೋಹಿತ, ಶಾಂತರಸ, ಅಮರೇಶ ನುಗಡೋಣಿ, ಶ್ರೀಕಾಂತ ಪಾಟೀಲ, ರಾಜಶೇಖರ ಕಂಠಿ, ರಾಜಶೇಖರ ಹತಗುಂದಿ, ಗೀತಾನಾಗಭೂಷಣ, ಬಾಲಚಂದ್ರ ಜಯಶೆಟ್ಟಿ ಮುಂತಾದ ಹೈದ್ರಾಬಾದ ಕರ್ನಾಟಕದ ಕಥೆಗಾರರಲ್ಲಿ ರಾಜಶೇಖರ ನೀರಮಾನ್ವಿ ಅವರೂ ಒಬ್ಬರು. ಇವರ ಕಥೆಗಳಲ್ಲಿ ರಾಯಚೂರು ಜಿಲ್ಲೆಯ ಗ್ರಾಮೀಣ ಪ್ರದೇಶದ ಜನತೆಯ ಜೀವನ ವಿಧಾನ ನೈಜವಾಗಿ ಮೂಡಿನಿಂತುದನ್ನು ಕಾಣುವೆವು. ಗುಲಬರ್ಗಾ ಬೀದರ ಹಾಗೂ ರಾಯಚೂರು ಜಿಲ್ಲೆಗಳು ಹೈದ್ರಾಬಾದ ನಿಜಾಂನ ಆಡಳಿತಕ್ಕೆ ಒಳಪಟ್ಟು ನಲುಗಿ ಹೋದಂತಹವು. ಸ್ವಾತಂತ್ರ್ಯಪೂರ್ವದ ಹಾಗೂ ಸ್ವಾತಂತ್ರ್ಯಾನಂತರ ಒಂದು ವರ್ಷ ಈ ಭಾಗದ ಜನ ನಿಜಾಂನ ಕಪಿಮುಷ್ಠಿಯಲ್ಲಿ ನಾನಾ ವಿಧದ ತೊಂದರೆಗಳನ್ನು ಅನುಭವಿಸಿದರು. ಹಳ್ಳಿಗಾಡಿನ ಜನತೆಯ ಅಜ್ಞಾನ, ಮೇಲ್ವರ್ಗದವರ ಕ್ರೌರ್ಯ ಹೆಣ್ಣುಮಕ್ಕಳ ಮೇಲೆ ನಡೆಯುವ ದೌರ್ಜನ್ಯ ಅದರಲ್ಲೂ ಕೆಳವರ್ಗದ ಹೆಣ್ಣುಮಕ್ಕಳ ಮೇಲೆ ನಡೆಯುವ ಲೈಂಗಿಕ ಹಲ್ಲೆ, ಇವೆಲ್ಲವನ್ನೂ ನೋಡುತ್ತ ಅಸಹಾಯಕರಂತೆ ಜೀವಿಸುವ ಮುಗ್ಧ ಜನರು ಈ ಮುಂತಾದ ವಿಷಯಗಳನ್ನು ಅತ್ಯಂತ ನೈಜವಾಗಿ ನೀರಮಾನ್ವಿ ಅವರು ತಮ್ಮ ಕಥೆಗಳಲ್ಲಿ ಹಾಸುಹೊಕ್ಕಾಗಿ ನೆಯ್ದುದುದನ್ನು ಕಾಣುವೆವು. ನೀರಮಾನ್ವಿಯವರು ಅತ್ಯಂತ ಪ್ರತಿಭಾನ್ವಿತ ಕಥೆಗಾರರು ಎನ್ನಲಿಕ್ಕೆ ಅವರು ತಮ್ಮ ಕಥೆಗಳಿಗೆ ಪಡೆದ ಪ್ರಶಸ್ತಿ ಪದಕಗಳೇ ಜ್ವಲಂತ ಸಾಕ್ಷಿಯಾಗಿವೆ. 'ಹಂಗಿನರಮನೆಯ ಹೊರಗೆ' ಕಥಾಸಂಕಲನಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

ರಾಷ್ಟ್ರಮಟ್ಟದಲ್ಲೂ ಇವರ ಕಥೆಗಳು ಮನ್ನಣೆ ಪಡೆದಿವೆ. ಅವರ ಇನ್ನೊಂದು ಕಥಾಸಂಕಲನ 'ಕರ್ಪೂರದ ಕಾಯದಲ್ಲಿ' ಇದೂ ಕೂಡ ಅತ್ಯಂತ ಜನಪ್ರಿಯವಾಗಿದೆ. ಒಂದು ವಿಶಿಷ್ಟ ಬಗೆಯ ಓದುಗರನ್ನು ಇವರ ಕಥೆಗಳು ಹೊಂದಿದುದು ವಿಶೇಷವಾಗಿದೆ. ಇವರ ಕಥೆಗಳು ಅಂತರಾಳದಲ್ಲಿ ಬಂಡಾಯದ ಧ್ವನಿಯನ್ನು ಒಳಗೊಂಡಿದ್ದರೂ ಅದು ವಾಚ್ಯವಾಗಿ ಬರದೆ ಸೂಚ್ಯವಾಗಿ ಕಾಣಿಸಿಕೊಂಡುದನ್ನು ಗುರುತಿಸುವೆವು. ಅವರ ಕಥೆಗಳು ನವ್ಯಕಥೆಗಳ ಮಾದರಿಯನ್ನು ಅನುಸರಿಸಿದಂಥವು. ಹೈದ್ರಾಬಾದ ಕರ್ನಾಟಕದ ಗ್ರಾಮೀಣ ಪ್ರದೇಶದ ಜನತೆಯ ಜೀವನವಿಧಾನ, ಬಡತನ, ಸಣ್ಣತನ, ಪ್ರೇಮ, ಹಾದರ ಹೀಗೆ ಹಲವಾರು ವಿಷಯಗಳನ್ನು ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸುವ ಚಿತ್ರಕಶಕ್ತಿ ಹಾಗೂ ಸೋಪಜ್ಞತೆಯನ್ನು ಇವರ ಕಥೆಗಳಲ್ಲಿ ಕಾಣುವೆವು.

'ಹಂಗಿನರಮನೆಯ ಹೊರಗೆ' ಸಂಕಲನದಲ್ಲಿ 'ಭೂತ', 'ವೃತ್ತಿ', 'ಹಂಗಿನರಮನೆಯ ಹೊರಗೆ', 'ಬಿಸಿಲುಗುದುರೆ' ಹಾಗೂ 'ದುರಸ್ತಿ' ಎಂಬ ಐದು ಕಥೆಗಳು ಸಮಾವೇಶಗೊಂಡಿವೆ. ಮನುಷ್ಯನಿಗೆ ಅಂಟಿದ ಅಜ್ಞಾನ, ಭ್ರಮೆ, ಮೌಢ್ಯಗಳನ್ನು ಸಾಂಕೇತಿಕವಾಗಿ ಸೂಚಿಸುವುದನ್ನು 'ಭೂತ' ಕಥೆಯಲ್ಲಿ ಕಾಣುವೆವು. 'ಭೂತ'ವು ಕಾಲವನ್ನೂ, ದೆವ್ವವನ್ನೂ ಹಾಗೂ ಮನುಷ್ಯನಿಗೆ ಅಂಟಿದ ಅಜ್ಞಾನವನ್ನು ಪರಿಣಾಮಕಾರಿಯಾಗಿ ಸೂಚಿಸುವುದನ್ನಿಲ್ಲಿ ಕಾಣುವೆವು. ಜಾತಿ ಪದ್ಧತಿ, ಪ್ರಾಣಿಬಲಿ, ಅನ್ಯಾಯ, ಅತ್ಯಾಚಾರ, ಅಜ್ಞಾನ, ಮೂಢನಂಬಿಕೆ, ಅನಕ್ಷರತೆ, ಬಡತನ ಡಾಂಭಿಕತೆ, ಮಾಟ-ಮಂತ್ರ, ಮೋಸ-ವಂಚನೆ, ಇವೆಲ್ಲವೂ ನಮ್ಮ ದೇಶದ ಜನಕ್ಕಂಟಿಕೊಂಡು ಬಂದ ಭೂತಗಳು. ಈ ಬಗೆಯ ಭೂತದಿಂದ ಬಿಡಿಸಿಕೊಂಡಾಗಲೇ ನಮ್ಮ ದೇಶ ಅಭಿವೃದ್ಧಿ ಹೊಂದುವುದು. ಜನ ನೆಮ್ಮದಿಯಿಂದ ಬಾಳುವರು. ಎಲ್ಲೆಲ್ಲೂ ಶಾಂತಿ ನೆಲೆಸುವುದು. ನಾಡು ಸುಭಿಕ್ಷವಾಗುವುದು. ಹೀಗಾಗಬೇಕಾದರೆ ಜನತೆಯಲ್ಲಿ ತಿಳಿವು, ವೈಚಾರಿಕ ಮನೋಭಾವ, ವೈಜ್ಞಾನಿಕ ದೃಷ್ಟಿಕೋನ, ಬೆಳೆಯಬೇಕು. ಎಲ್ಲರೂ ಶಿಕ್ಷಿತರಾಗಬೇಕು. ಶಿಕ್ಷಣ ಜನತೆಯಲ್ಲಿನ ಅಜ್ಞಾನದ ಪರದೆಯನ್ನು ಹರಿಯುವ ಸಾಧನವಾಗಿದೆ. ಎಲ್ಲರೂ ಶಿಕ್ಷಿತರಾದರೆ, ತಿಳಿವಳಿಕೆಯುಳ್ಳವರಾದರೆ ಭೂತ ತನ್ನಿಂದ ತಾನೇ ಓಡಿಹೋಗುವುದು ಎಂಬ ಆಶಯವನ್ನು ಈ ಕಥೆ ತುಂಬ ಮಾರ್ಮಿಕವಾಗಿ ಒಳಗೊಂಡಿದೆ. ಈ ಕಥೆ ನಿಜಕ್ಕೂ ಓದುಗನನ್ನು ಚಿಂತನೆಗೆ ತೊಡಗಿಸುತ್ತದೆ.

ನಾಯಿ ಅತ್ಯಂತ ನಂಬಿಗಸ್ತ ಪ್ರಾಣಿ. ಅಂಥ ನಂಬಿಕೆ ಜನರಲ್ಲಿ ಇಲ್ಲವೆನ್ನುವ ಆಶಯವನ್ನು 'ವೃತ್ತಿ' ಕಥೆಯಲ್ಲಿ ಕಾಣುವೆವು. ಜನರೆಲ್ಲರೂ ಈ ಭೂಮಿಯಲ್ಲೇ ನೆಲೆಸಿದರೂ ಮೇಲು-ಕೀಳು, ಜಾತಿ-ಭೇದ, ಬಡತನ-ಶ್ರೀಮಂತಿಕೆಯ ತಾರತಮ್ಯ, ರಜಾಕಾರರ ಹಾವಳಿ, ಜನತೆಯ ಅತಂತ್ರ ಸ್ಥಿತಿಗತಿ ಮುಂತಾದವು ರಾಜಾರೋಷವಾಗಿ ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ನಡೆದುದನ್ನಿಲ್ಲಿ ಚಿತ್ರಿಸಲಾಗಿದೆ. ಪ್ರಾಣಿಯೊಂದರ (ನಾಯಿ) ಸಾವಿನೊಂದಿಗೆ ಪ್ರಾರಂಭವಾಗುವ ಈ ಕಥೆ ಓದುಗರಲ್ಲಿ ಕುತೂಹಲ ಕೆರಳಿಸುತ್ತ ಓದಿಸಿಕೊಳ್ಳುವ ಜೀವಗುಣವನ್ನು ಹೊಂದಿದೆ.

ಮನುಷ್ಯ ತನ್ನ ಕಾಲ ಮೇಲೆ ನಿಂತು ಜೀವಿಸಬೇಕೇ ವಿನಾ ಇನ್ನೊಬ್ಬರ ಆಸರೆಯಲ್ಲಿ ಹಂಗಿನಲ್ಲಿ ಇರಬಾರದು, ಸ್ವಂತಿಕೆಯನ್ನು ಹೊಂದಿ ಸ್ವಾನುಭವದಿಂದ ಧೈರ್ಯದಿಂದ ಬಾಳಬೇಕೆಂಬ ಆಶಯವನ್ನು 'ಹಂಗಿನರಮನೆಯ ಹೊರಗೆ' ಕಥೆ ಹೊಂದಿದೆ. ರಾಯಚೂರು ಪರಿಸರದ ಹಳ್ಳಿಗಾಡಿನ ಭಾಷೆಯ ಸೊಗಡನ್ನು ಈ ಕಥೆಯಲ್ಲಿ ಕಾಣುವೆವು. ಸ್ವಾತಂತ್ರ್ಯಪೂರ್ವದಲ್ಲಿನ ಹಳ್ಳಿಗಾಡಿನ ಜನತೆಯ ಜೀವನ

ವಿಧಾನವನ್ನು ಇಲ್ಲಿ ಅತ್ಯಂತ ನೈಜವಾಗಿ ಬಿಂಬಿಸಲಾಗಿದೆ. ಹಳ್ಳಿಗಾಡಿನ ಜನತೆಯ ಸಾಂಸ್ಕೃತಿಕ-ಸಾಹಿತ್ಯಿಕ ಹಾಗೂ ಭಾಷಿಕ ಬದುಕಿಗೆ ಒಂದು ರೀತಿಯ ಕಲಾತ್ಮಕವಾದ ಮೆರುಗನ್ನು ಈ ಕಥೆಯಲ್ಲಿ ಕೊಟ್ಟಿದನ್ನು ಕಾಣುವೆವು. ಪ್ರಾಮಾಣಿಕತೆ ಇಂದು ಎಲ್ಲಾ ಕ್ಷೇತ್ರಗಳಲ್ಲೂ ಮಾಯವಾಗುತ್ತಿದೆ. ಜನ ಪ್ರಾಮಾಣಿಕ ಜೀವನ ನಡೆಸಿದಾಗ ಮಾತ್ರ ಅವರ ಬದುಕಿನಲ್ಲಿ ನೆಮ್ಮದಿ ನೆಲೆಸುವುದು. ಅದರಲ್ಲೂ ಅವರು ತಮ್ಮ ಕಾಲ ಮೇಲೆ ನಿಂತು ಸ್ವಾವಲಂಬಿಗಳಾಗಿ ಜೀವನ ನಡೆಸಿದರೆ ಇನ್ನೂ ಸುಖಿಗಳಾಗುವರು. 'ಆಳಾಗಿ ದುಡಿದವ ಅರಸಾಗಿ ಉಣ್ಣುವ' ಎನ್ನುವ ಗಾದೆಗೆ ಆತನ ಬದುಕು ಭಾಷ್ಯ ಬರೆದಂತಾಗುವುದು. ಮಾನವ ಇಲ್ಲದುದರ ಬಗ್ಗೆ ತಲೆ ಕೆಡಿಸಿಕೊಳ್ಳಬಾರದು, ಚಿಂತಿಸಬಾರದು, ಇದ್ದುದರ ಬಗ್ಗೆ ಯೋಚಿಸಬೇಕು. ಇದ್ದುದರಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕು. ಇಲ್ಲದ್ದಕ್ಕೆ ಕೈಹಾಕಿ ಅದು ಸಿಗದೇ ಹೋದಾಗ ಪಶ್ಚಾತ್ತಾಪಪಡುತ್ತ ಕೂಡಬಾರದು ಎಂಬ ಸದಾಶಯವನ್ನು ಕಥೆಗಾರರು ಈ ಮೂಲಕ ನೀಡಿದ್ದಾರೆ. ವ್ಯಕ್ತಿ ಒಳ್ಳೆಯವನಾಗಲಿಕ್ಕೂ, ಕೆಟ್ಟನಾಗಲಿಕ್ಕೂ ತಾನೇ ಕಾರಣನು, ಕಷ್ಟ-ಸುಖಗಳಿಗೂ ಅವನೇ ಹೊಣೆ. ಸುಖವೇ ಬರಲಿ ದುಃಖವೇ ಬರಲಿ ಅವನ್ನು ಸಮಸಮನಾಗಿ ಸ್ವೀಕರಿಸುವ ಸ್ಥಿತಪ್ರಜ್ಞತೆಯನ್ನು ತಾಳಿದಾಗಲೇ ಮಾನವನ ಜೀವನಕ್ಕೆ ಬೆಲೆ ಬರುವುದು. ಬಡತನ ಸಿರಿತನಗಳು ಶಾಶ್ವತವಲ್ಲ ಏರಿದ ಜೋಕಾಲಿ ಇಳಿಯಲೇಬೇಕು. ಹಾಗೆ ಸಿರಿತನ-ಬಡತನಗಳು ಕ್ಷಣಿಕವಾದಂಥವು. ಮಾನವ ಜೀವಿಸುವವರೆಗೆ ಇವಾವುದರ ಗೋಜಿಗೂ ಹೋಗದೆ ಸಮತಾಭಾವನೆಯಿಂದ ಬದುಕಬೇಕು. ಯಾವುದೇ ಧರ್ಮ, ಪಂಥ, ಮೇಲು-ಕೀಳುಗಳಿಗೆ ಒಳಗಾಗದೆ ಎಲ್ಲರೂ ಒಂದೇ ಎಂಬ ಭಾವನೆಯನ್ನು ಬೆಳೆಸಿಕೊಂಡು ಬದುಕಬೇಕು. ಹೀಗೆ ಬದುಕಿದಾಗ ಮಾತ್ರ ಆತನ ಬದುಕು ಸಾರ್ಥಕವಾಗುವುದು ಎಂಬ ಸದಾಶಯವನ್ನು ಈ ಕಥೆ ಹೊಂದಿದೆ. ನಿಜಕ್ಕೂ ಈ ಕಥೆ ನಮ್ಮನ್ನು ಯೋಚಿಸುವಂತೆ ಮಾಡುವುದರೊಂದಿಗೆ ನಿಜವಾದ ಅರ್ಥದಲ್ಲಿ ಮಾನವರನ್ನಾಗಿಸುವತ್ತ ಮುನ್ನಡೆಸುತ್ತದೆ. ಒಂದು ಬಗೆಯ ಹೊಸ ಸಂವೇದನೆಯ ತಾಕಲಾಟವನ್ನು ಈ ಕಥೆಯಲ್ಲಿ ಕಾಣುವೆವು. ಮನುಷ್ಯನ ಅಂತರಾಳವನ್ನು ಬಗೆಯುವ ಕಾರ್ಯವನ್ನು ಈ ಕಥೆಯಲ್ಲಿ ಕಥೆಗಾರರು ನಡೆಸಿದುದನ್ನು ಗುರುತಿಸುವೆವು. ಮನುಷ್ಯ ಅರಿವನ್ನು ಜಾಗೃತಗೊಳಿಸಿಕೊಳ್ಳಬೇಕು. ತನ್ನರಿವೇ ತನಗೆ ಗುರುವಾಗಬೇಕು. ಭಾವನೆಯ ಕೈಯಲ್ಲಿ ಬುದ್ಧಿಯನ್ನು ಕೊಡದೆ ಸ್ಥಿತಪ್ರಜ್ಞಸ್ಥಿತಿಯನ್ನು ತಂದುಕೊಳ್ಳುವ ಮಟ್ಟಕ್ಕೆ ಬೆಳೆಯಬೇಕು ಅಂದಾಗ ಆತನಲ್ಲಿ ಧೈರ್ಯ ಸ್ಥೈರ್ಯ ನೆಲೆಗೊಳ್ಳುವವು. ಅತೀ ಭಾವುಕತನ, ಪುಕ್ಕಲುತನ ಮನುಷ್ಯನನ್ನು ಕುಬ್ಜವಾಗಿಸುವವು. ಒಟ್ಟಿನಲ್ಲಿ ಮಾನವ ವಿಶಾಲಭೂಮಿಕೆಯ ಮೇಲೆ ತನ್ನ ಹೃದಯ ವೈಶಾಲ್ಯತೆಯಿಂದ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕು. ಆತ್ಮಾಭಿಮಾನವನ್ನು ಹೊಂದಿ ಜೀವಿಸಬೇಕು. ಇದರಲ್ಲೇ ಜೀವನದ ಸಾಫಲ್ಯವಿದೆಯೆಂದು ಸಾರುವ ಈ ಕಥೆ ನಿಜಕ್ಕೂ ಮನೋಜ್ಞವಾಗಿದೆ.

ಭೂತ, ಭವಿಷತ್ತುಗಳಿಗಿಂತ ವರ್ತಮಾನ ಮುಖ್ಯವೆಂಬ ಆಶಯವನ್ನು 'ಬಿಸಿಲುಗುದುರೆ' ಕಥೆ ಹೊಂದಿದೆ. ಮನುಷ್ಯ ಭ್ರಮೆಯಲ್ಲಿ ಕಲ್ಪನೆಯಲ್ಲಿ ಬಾಳಬಾರದು ಮನುಷ್ಯನಿಗೆ ಕನಸುಗಳಿರಬೇಕು. ಆದರೆ ಆ ಕನಸುಗಳು ಕೈಗೂಡುವಂತಿರಬೇಕೇ ವಿನಾ ಬಿಸಿಲುಗುದುರೆಯಂತೆ ಮಾಯವಾಗುವಂತಿರ ಬಾರದು. ಒಳ್ಳೆಯದು-ಕೆಟ್ಟದ್ದು, ಕಷ್ಟ-ಸುಖ ಇವೆಲ್ಲ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಇವು ಮನುಷ್ಯನನ್ನು ಆವರಿಸಿರುವಂಥವೇ ಆಗಿವೆ. ಕಷ್ಟ ಬಂದಾಗ ಕುಗ್ಗುವುದು, ಸುಖ ಬಂದಾಗ ಹಿಗ್ಗುವುದು ಸಾಮಾನ್ಯ ಜನರಿಗೆ ಸಹಜವಾದುದು. ಆದರೆ ಹೀಗೆ ಮಾಡದೆ ಸಮಸ್ಥಿತಿ ಸಮಚಿತ್ತ

ಹೊಂದಿ ಎರಡನ್ನೂ ಸಮಸಮನಾಗಿ ಸ್ವೀಕರಿಸುವುದನ್ನು ಮಾನವ ರೂಢಿಸಿಕೊಳ್ಳಬೇಕು ಅಂದಾಗ ಆತನ ಬದುಕಿಗೆ ಬೆಲೆ ಬರುವುದು. ಕಾಲ ಬದಲಾದಂತೆ ನಾವು ಬದಲಾಗಬೇಕು. ನಮ್ಮ ಬದುಕಿನಲ್ಲೂ ಪರಿವರ್ತನೆ ಆಗಬೇಕು. ಅಂದರೆ ನಮ್ಮ ವಿಚಾರಗಳಲ್ಲಿ ಬದಲಾಗಬೇಕು. ಹೊಸ ಕಾಲದ ವಿದ್ಯಮಾನಗಳಿಗೆ ಸ್ಪಂದಿಸುತ್ತ ಬದುಕುವ ಜೀವಗುಣವನ್ನು ನಾವು ಹೊಂದಬೇಕೆಂಬ ಆಶಯವನ್ನು ಈ ಕಥೆ ಒಳಗೊಂಡಿದೆ. ಪ್ರತಿಯೊಬ್ಬರೂ ನಿರಂಕುಶಮತಿಗಳಾಗಿ ಬದುಕಬೇಕು. ಜನಕಂಜಿ ನಡೆಯದೆ ಮನಕಂಜಿ ನಡೆಯಬೇಕು, ಆತ್ಮಸಾಕ್ಷಿಗೆ ತಕ್ಕಂತೆ ನಡೆಯಬೇಕು. ಸಮಾಜ ನಿರ್ಮಿಸಿಕೊಂಡ ಸಣ್ಣತನ, ಕಟ್ಟುಪಾಡು, ಮೌಢ್ಯದ ಗೋಡೆಗಳನ್ನೆಲ್ಲ ಕೆಡವಿ ಹಾಕಿ ಮುನ್ನಡೆಯಬೇಕು. ಯಾರ ಮುಲಾಜಿಗೂ ಒಳಗಾಗಬಾರದು, ತನ್ನತನವನ್ನು ಮಾರಿಕೊಂಡು ಜೀವಿಸಬಾರದು ಎಂಬೆಲ್ಲ ಜೀವನ ಮೌಲ್ಯಗಳನ್ನು ಈ ಕಥೆ ಪರಿಣಾಮಕಾರಿಯಾಗಿ ಒಳಗೊಂಡುದನ್ನು ಗುರುತಿಸುವೆವು.

ಮನುಷ್ಯನ ಮನಸ್ಸಿನ ದ್ವಂದ್ವ 'ದುರಸ್ತಿ' ಕಥೆಗಳಲ್ಲಿ ಪರಿಣಾಮಕಾರಿಯಾಗಿ ಮೂಡಿನಿಂತಿದೆ. ಮನಸ್ಸನ್ನು ನಾವು ದುರಸ್ತಿ ಮಾಡಿಕೊಳ್ಳಬೇಕು. ಮಾನವನಲ್ಲಿ ಪ್ರಾಮಾಣಿಕತೆ ಹಾಗೂ ಆಷಾಢಭೂತಿ ಎಂಬೆರಡು ಗುಣ ಅವಗುಣಗಳಿವೆ. ಅವಗುಣ ಕಳೆದುಕೊಂಡು ಸದ್ಗುಣವನ್ನು ಅಳವಡಿಸಿಕೊಳ್ಳಬೇಕು. ಸೈಕಲ್ ರಿಕ್ಷಾ ದುರಸ್ತಿ ಹಾಗೂ ಮನುಷ್ಯನ ಸ್ವಭಾವ ದುರಸ್ತಿ ಈ ಕಥೆಯಲ್ಲಿ ಮಾರ್ಮಿಕವಾಗಿ ಮೂಡಿಬಂದಿದೆ. ಹಳ್ಳಿ ಜನ-ನಗರ ಜನ ಈರ್ವರಲ್ಲೂ ಒಂದು ವಿಧದ ತಾರತಮ್ಯವಿರುವುದನ್ನಿಲ್ಲಿ ಕಥೆಗಾರರು ಸೂಕ್ಷ್ಮವಾಗಿ ನಿರೀಕ್ಷಿಸಿ ಗುರುತಿಸಿದುದನ್ನು ಕಾಣುವೆವು. ಮಾನವ ತನ್ನ ಮನಸ್ಸನ್ನು ನಿರಾಳವಾಗಿಸಿಕೊಳ್ಳಬೇಕು, ಸ್ವಚ್ಛವಾಗಿರಿಸಿಕೊಳ್ಳಬೇಕು. ಮನಸ್ಸಿನಲ್ಲಿ ದ್ವಂದ್ವ, ಇತ್ತಂಡ ಯೋಚನೆಗಳಿರಬಾರದು. ನಡೆ-ನುಡಿಯಲ್ಲಿ ನೇರತೆ ಇರಬೇಕು. ವಿಚಾರಗಳಲ್ಲಿ ಸ್ಪಷ್ಟತೆ ಇರಬೇಕು ಒಳ್ಳೆಯದೇ ಇರಲಿ, ಕೆಟ್ಟದ್ದೇ ಇರಲಿ ಇವನ್ನು ಸ್ವೀಕರಿಸಿ ದಿಟ್ಟತನದಿಂದ ಬದುಕುವ ಕಲೆಯನ್ನು ಮಾನವ ಕಲಿತುಕೊಳ್ಳಬೇಕೆನ್ನುವ ಸದಾಶಯವನ್ನು ಈ ಕಥೆ ಮಾರ್ಮಿಕವಾಗಿ ಹೊಂದಿದೆ. ಮನುಷ್ಯ ಸ್ವಭಾವದ ವಿವಿಧ ಮಜಲುಗಳ ಚಿತ್ರಣ ಇಲ್ಲಿ ಅನ್ಯಾದೃಶವಾಗಿ ಮೂಡಿ ನಿಂತುದನ್ನು ಗುರುತಿಸುವೆವು. ಮನುಷ್ಯ ಅಡ್ಡ ದಾರಿ ಹಿಡಿಯುವ ಮೊದಲೇ ಆತನ ಮನಸ್ಸನ್ನು ದುರಸ್ತಿ ಮಾಡಬೇಕು. ಆಮೇಲೆ ದುರಸ್ತಿ ಮಾಡಲು ಹೋದರೆ ಕೋತಿಗೆ ಹೆಂಡ ಕುಡಿಸಿದಂತಾಗುವುದು ಎಂಬ ಕಥೆಗಾರರ ಅನುಭವೋಕ್ತಿ ಈ ಕಥೆಯಲ್ಲಿ ಸೊಗಸಾಗಿ ಅನಾವರಣಗೊಂಡಿದೆ. ಮನುಷ್ಯ ತಾನು ಮೊದಲು ತನ್ನ ಮನಸ್ಸನ್ನು ದುರಸ್ತಿ ಮಾಡಿಕೊಳ್ಳಬೇಕು, ಅನಂತರ ಸುತ್ತಲಿನ ಜನರ ಮನಸ್ಸನ್ನು ದುರಸ್ತಿ ಮಾಡುವ ಕೆಲಸಕ್ಕೆ ತೊಡಗಬೇಕು. ತಾನು ಒಳ್ಳೆಯವನಾದರೂ ಪರಿಸರವೂ ಒಳ್ಳೆಯದಾಗುವುದು ಎಂಬ ನುಡಿ ಈ ಕಥೆಯಲ್ಲಿ ಸಾಕಾರಗೊಂಡಿದೆ.

ಹೈದ್ರಾಬಾದ ಕರ್ನಾಟಕ ಪ್ರದೇಶ ಸಾಹಿತ್ಯ ಸಂಸ್ಕೃತಿಯ ದೃಷ್ಟಿಯಿಂದ ಹಿಂದುಳಿದಿದೆಯೆನ್ನುವ ಮಾತು ಇಂದು ಕ್ಲೀಷೆಯಾಗಿದೆ. ಈ ಮಾತನ್ನು ನಿಜಕ್ಕೂ ಸುಳ್ಳಾಗಿಸುವ ಅನೇಕ ಪ್ರತಿಭೆಗಳು ಇಲ್ಲಿವೆ ಎನ್ನಲು ಶ್ರೀ ರಾಜಶೇಖರ ನೀರಮಾನ್ವಿಯವರೇ ಸಾಕ್ಷಿಯಾಗಿದ್ದಾರೆ. ನಿಜಕ್ಕೂ ಅವರ ಕಥೆಗಳು ತುಂಬ ವಿಚಾರ ಪರಿಪ್ಲುತವೂ, ಅರ್ಥಗರ್ಭಿತವೂ ಹಾಗೂ ಹೈದ್ರಾಬಾದ ಕರ್ನಾಟಕ ಪ್ರದೇಶದ ಜನತೆಯ ಜೀವನ ವಿಧಾನದ ಮೇಲೆ ಹೊಸ ಬೆಳಕು ಚೆಲ್ಲುವಂತಹವೂ ಆಗಿವೆ. ಹೈದ್ರಾಬಾದ ಕರ್ನಾಟಕ ಪ್ರದೇಶದ ಜನತೆಯ ಮುಗ್ಧತೆ, ಅಜ್ಞಾನ, ಬಡತನ, ಸಣ್ಣತನ, ಶೋಷಣೆಗೆ ಒಳಗಾದ ರೀತಿ ಇವೆಲ್ಲ ಇಲ್ಲಿ ಸ್ವಜವಾಗಿ ಮೂಡಿನಿಂತಿವೆ. ಇಂಥ ಅನಿಷ್ಟಗಳನ್ನು ಗೆದ್ದು ಮನುಷ್ಯ ಹೇಗೆ

ಮೇಲೆ ಮೇಲಕ್ಕೆ ಏರಬೇಕೆಂಬುದನ್ನು ಈ ಕಥೆಗಳು ಮನೋಜ್ಞವಾಗಿ ಸೂಚಿಸುತ್ತವೆ. ಹೈದ್ರಾಬಾದ ಕರ್ನಾಟಕ ಪ್ರದೇಶ ಶರಣರ, ಜೈನರ ಹಾಗೂ ಹರಿದಾಸರ ಹಾಡಿನ ಬೀಡಾಗಿದೆ ಹಾಗೂ ತತ್ವಪದಕಾರರ ಕನ್ನೆ ನೆಲವಾಗಿದೆ. ರಾಜಶೇಖರ ನೀರಮಾನ್ವಿ ಅವರ ಮೇಲೆ ತತ್ವಪದಕಾರರ ಹಾಡುಗಳ ಪ್ರಭಾವವಾದುದನ್ನು ನಾವಿಲ್ಲಿ ಗುರುತಿಸುವೆವು. ಒಟ್ಟಿನಲ್ಲಿ ನೀರಮಾನ್ವಿ ಅವರ ಕಥೆಗಳು ಮಾನವ ಜೀವನದ ಮರ್ಮವನ್ನು ತಿಳಿಸುವಲ್ಲಿ ಯಶಸ್ವಿಯಾಗಿವೆ. ಮಾನವ ಮಹಾಂತನಾಗುವ ರಹಸ್ಯವನ್ನು ಇವು ಮೌನವಾಗಿ ಸ್ಫೋಟಿಸಿವೆ. ಮನುಷ್ಯ ಮೌಢ್ಯತೆಯಿಂದ ಹೇಗೆ ಮೇಲೆ ಬರಬೇಕೆಂಬುದನ್ನು ಇವರ ಕಥೆಗಳು ಸೂಚ್ಯವಾಗಿ ತಿಳಿಸುವುದರ ಜೊತೆಗೆ ನಮ್ಮನ್ನು ಗಾಢವಾದ ಚಿಂತನೆಗೆ ತೊಡಗಿಸುತ್ತವೆ. ಈ ಜೀವಗುಣ ನೀರಮಾನ್ವಿ ಅವರ ಕಥೆಗಳಲ್ಲಿರುವುದರಿಂದಲೇ ಅವರ ಕಥೆಗಳು ಜನಮನ್ನಣೆ ಗಳಿಸಿವೆ. ಆಧುನಿಕ ಕಥಾ ಸಾಹಿತ್ಯದಲ್ಲಿ ನೀರಮಾನ್ವಿ ಅವರ ಕಥೆಗಳಿಗೆ ವಿಶೇಷವಾದ ಸ್ಥಾನವಿದೆಯೆನ್ನುವಲ್ಲಿ ಯಾವ ಸಂಶಯವೂ ಇಲ್ಲ.

□

---

ಡಾ. ವ್ಹಿ.ಜಿ. ಪೂಜಾರ್
ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು, ಕನ್ನಡ ಅಧ್ಯಯನ ಸಂಸ್ಥೆ, ಜ್ಞಾನಗಂಗಾ
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

# ಪಂಜೆಯವರ ಕವಿತೆಗಳು

ಅಮೃತ ಸೋಮೇಶ್ವರ

ಹೊಸಗನ್ನಡದ ಆದ್ಯ ಆಚಾರ್ಯರಲ್ಲೊಬ್ಬರಾದ ಪಂಜೆಯವರ ಕವಿತೆಗಳು ಸಂಖ್ಯೆಯ ದೃಷ್ಟಿಯಲ್ಲಿ ವಿಪುಲವಲ್ಲ. ಅವರ ಉಪಲಬ್ಧ ಕವಿತಾ ಕೃತಿಗಳು ಒಟ್ಟು ೬೯ ಶೀರ್ಷಿಕೆಗಳೊಳಗೆ ಅಡಗುತ್ತವೆ. ಒರಿಯಂಟಲ್ ಲಾಂಗ್‌ಮನ್ ಸಂಸ್ಥೆ ಪ್ರಕಟಿಸಿದ ಅವರ ಪದ್ಯ ಸಂಕಲನವನ್ನು ೫ ಭಾಗಗಳಾಗಿ ವಿಂಗಡಿಸಿದ್ದಾರೆ.

೧. ಜೋಗುಳಗಳು ಮತ್ತು ನಡತೆಯ ಗೀತಗಳು.

೨. ಚಿಕ್ಕ ಕಥೆಗಳು ಮತ್ತು ಲಘು ಹಾಸ್ಯ ಕಥನಗಳು.

೩. ನಿಸರ್ಗ ಗೀತಗಳು ಮತ್ತು ಭಾವಗೀತಗಳು.

೪. ದೇಶಭಕ್ತಿಯ ಮತ್ತು ಸಾಮಾಜಿಕ ಹಾಡುಗಳು.

೫. ಹಳೆಯ ಶೈಲಿಯಲ್ಲಿ ರಚಿಸಿದ ಪದ್ಯಗಳು.

ಈ ಎಲ್ಲ ರಚನೆಗಳನ್ನು ನೋಡಿದಾಗ ಇವುಗಳಲ್ಲಿ ಮುಕ್ಕಾಲು ಮೂರು ವೀಸ ಪಾಲು ಮಕ್ಕಳಿಗೋಸ್ಕರ ರಚಿತವಾದವುಗಳೆಂದು ತಿಳಿಯಬಹುದು. ಹುಟ್ಟು ಶಿಕ್ಷಕರಾದ ಪಂಜೆಯವರು ಅಂದಿನ ದಿನಗಳಲ್ಲಿ ಮಕ್ಕಳ ಸಾಹಿತ್ಯದ ಕೊರತೆಯನ್ನು ಕಂಡುಕೊಂಡುದು ಮಾತ್ರವಲ್ಲ ಆ ಕೊರತೆಯನ್ನು ತುಂಬಲು ತಾವೇ ಮುಂದಾದುದನ್ನು ನೋಡುತ್ತೇವೆ. ಬಾಲ ಸಾಹಿತ್ಯ ಮಂಡಲದ ಪ್ರಧಾನ ಪ್ರೇರಕರು ಪಂಜೆಯವರೆಂಬುದನ್ನು ಮರೆಯುವಂತಿಲ್ಲ. ಪಂಜೆಯವರ ಪದ್ಯಗಳಲ್ಲಿ ಹೆಚ್ಚಿನವು

ಅವರ ಕಾಲದಲ್ಲೇ ಪ್ರಕಟವಾಗಿದ್ದ ಪದ್ಯಪುಸ್ತಕ ೧, ೨, ೩ರಲ್ಲಿ ಅಚ್ಚಾಗಿದ್ದು ಅವುಗಳಲ್ಲಿ ಹಲವು ಅಂದಿನ ಮಕ್ಕಳಿಗೆ ಅತ್ಯಂತ ಪ್ರಿಯವಾಗಿದ್ದವು. ಬೇಂದ್ರೆಯವರೆಂದಂತೆ "ಈ ಜನಪ್ರಿಯ ಕವನಗಳು ಕನ್ನಡ ಮಕ್ಕಳಿಗೆ ಇನ್ನುಳಿದವರು ಪಡೆಯುವ ಸುಖವನ್ನೇ ಕೊಡುವ ಕಾಮಧೇನುಗಳಾಗಿದ್ದವು". ಇವುಗಳಲ್ಲಿ ಹೆಚ್ಚಿನವು ಸೊಗಸಾದ ಅಭಿನಯ ಗೀತಗಳಾಗಿವೆ.

ಪಂಜೆಯವರ ಕಾವ್ಯೋದ್ದೇಶವು ಮುಖ್ಯವಾಗಿ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡುದರಿಂದಲೇ ಬದುಕಿನ ಬಹಳಷ್ಟು ಮಗ್ಗುಲುಗಳ, ಸಂಕೀರ್ಣ ಸಮಸ್ಯೆಗಳ, ಮಾನವ ಮನೋಲೋಕದ ವೈಚಿತ್ರ್ಯಗಳ ಅಭಿವ್ಯಕ್ತಿಯನ್ನು ಅವರ ಕವಿತೆಗಳಲ್ಲಿ ವಿಶೇಷವಾಗಿ ಕಾಣಲಾರೆವು. ಉತ್ತಮ ಜೀವನ ರಸಿಕರು ಅವರಾಗಿದ್ದರೂ ಶೃಂಗಾರ ರಸದ ಒಂದೇ ಒಂದು ಪದ್ಯವನ್ನು ಅವರ ರಚನೆಗಳಲ್ಲಿ ನಾವು ಕಾಣದಿರಲೂ ಅದೇ ಕಾರಣವೆನಿಸುತ್ತದೆ. ಶೃಂಗಾರ ರಸದ ಅಭಾವವಿದ್ದರೂ ಸರ್ವಜನ ರೋಚಕವಾದ ಅದರಲ್ಲೂ ಮಕ್ಕಳ ಮನಸ್ಸನ್ನು ಬೇಗನೆ ಸೆರೆ ಹಿಡಿಯಬಲ್ಲ ಹಾಸ್ಯರಸದ ಕಾರಂಜಿ ಅವರ ಹಲವು ಕವಿತೆಗಳಲ್ಲಿ ಸಾಕಷ್ಟು ಹೊಮ್ಮುವುದನ್ನು ಕಾಣಬಹುದು.

ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲೇ ಹೊಸಗನ್ನಡದ ಗಾಳಿ ಬೀಸತೊಡಗಿದುದನ್ನು ನಾವು ಗಮನಿಸಬಹುದು. ಕನ್ನಡದಲ್ಲಿ ಪತ್ರಿಕೆಗಳು ಪ್ರಾರಂಭವಾಗಿದ್ದವು. ದೇಶೀಯ ಭಾಷೆಗಳ ಬಗೆಗೆ ಒಂದು ಎಚ್ಚರ ಭಾರತದ ಎಲ್ಲೆಡೆಯಲ್ಲಿ ಉಂಟಾಗಿದ್ದಂತೆ ಕನ್ನಡ ನಾಡಿನಲ್ಲೂ ಉಂಟಾಗಿದ್ದಿತು. ಸ್ವಾತಂತ್ರ್ಯ ಕುತೂಹಲ, ದೇಶಭಕ್ತಿ, ಸಂಸ್ಕೃತಿ ಪ್ರೇಮ, ನವೀನತೆಯ ಶೋಧನೆ ಇತ್ಯಾದಿ ಗುಣಗಳು ಜನತೆಯಲ್ಲೂ, ಜನತೆಯ ಮನಸ್ಸಿನ ಬಿಂಬವಾದ ಸಾಹಿತ್ಯದಲ್ಲೂ ಮೊಗದೋರಿಸಲಾರಂಭಿಸಿದ್ದವು. ಇಂಗ್ಲಿಷ್ ವಿದ್ಯಾಭ್ಯಾಸವೂ ಈ ದಿಶೆಯಲ್ಲಿ ವಿಶಿಷ್ಟ ಪ್ರಚೋದನೆಯನ್ನು ನೀಡಿತ್ತು. ಇಂಗ್ಲಿಷ್ ಮತ್ತು ಇಂಗ್ಲಿಷಿನ ಮೂಲಕ ಯುರೋಪಿನ ಹಲವು ಭಾಷಾ ಸಾಹಿತ್ಯಗಳ ಪರ್ಯಾಯ ಪರಿಚಯದಿಂದ ಆದ ಪ್ರಭಾವ, ಬಂಗಾಲಿ, ಮರಾಠೀ ಮುಂತಾದ ಭಾಷೆಗಳಲ್ಲಿನ ನೂತನ ಸಾಹಿತ್ಯದ ವರ್ಚಸ್ಸು ಕನ್ನಡದ ನವೋದಯ ಸಾಹಿತ್ಯದ ಹಿನ್ನೆಲೆಯಲ್ಲಿ ಕೆಲಸ ಮಾಡಿವೆ. ಪರಂಪರೆ ಮತ್ತು ಇತಿಹಾಸಗಳನ್ನು ಶೋಧಿಸುವ ಪ್ರಜ್ಞೆಯೊಂದಿಗೆ ಕಾವ್ಯಸಂಪ್ರದಾಯದ ಅನಪೇಕ್ಷಿತ ಬಿಗಿಯಿಂದ ಬಿಡಿಸಿಕೊಳ್ಳುವ ಪ್ರಯತ್ನವೂ ಈ ವೇಳೆ ನಡೆಯಲಾರಂಭಿಸಿತ್ತು. ಇಂಗ್ಲಿಷ್ ಭಾಷೆಯ ರಚನೆಗಳ ಭಾಷಾಂತರ ಕಾರ್ಯವೂ ಅಲ್ಲಿ ಇಲ್ಲಿ ತೊಡಗಿತ್ತು. ಪಂಜೆಯವರ ಹಿರಿಯ ಸಮಕಾಲೀನರಾದ ಹಟ್ಟಿಯಂಗಡಿ ನಾರಾಯಣರಾವ್, ಎಸ್.ಜಿ. ನರಸಿಂಹಾಚಾರ್ಯ, ಜಯರಾಯಾಚಾರ್ಯ, ಗೋವಿಂದರಾಜ ಅಯ್ಯಂಗಾರ್ ಮೊದಲಾದವರು ಇಂಗ್ಲಿಷಿನ ಕೆಲವು ಕವಿತೆಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದರು.

ಪಂಜೆಯವರೂ ಕೆಲವು ಇಂಗ್ಲಿಷ್ ಕವಿತೆಗಳನ್ನು ಕನ್ನಡಕ್ಕೆ ರೂಪಾಂತರಿಸಿದ್ದಾರೆ, ಅಥವಾ ಇಂಗ್ಲಿಷ್ ಕವಿತೆಗಳ ಪ್ರೇರಣೆಯಿಂದ ಕೆಲವನ್ನು ಬರೆದಿದ್ದಾರೆ. ಇಂಗ್ಲಿಷಿನ Ballad ಕಥನ ಕವನಗಳ ಪ್ರಭಾವವನ್ನು ಹೊಂದಿಯೂ, ಅಂಥ ಪ್ರಭಾವವೇನೂ ಆಗಿಲ್ಲವೇನೋ ಎನ್ನುವಷ್ಟು ನೈಜವಾಗಿ ಕನ್ನಡದಲ್ಲಿ ಸರಳವಾದ ಕಥನ ಕವನಗಳನ್ನು ಕಟ್ಟಿದ್ದಾರೆ. ಹೊಸಗನ್ನಡದ ಕಥನ ಕವನಕ್ಕೆ ಅವರೇ ಮೂಲ ಪುರುಷರು. ಪಂಜೆಯವರ ಕಥನ ಕವನಗಳಲ್ಲಿ ಮನಸ್ಸನ್ನು ತಟ್ಟನೆ ಹಿಡಿಯುವ ಕವನವೆಂದರೆ 'ಡೊಂಬರ ಚೆನ್ನೆ'. ಒಂದು ಐತಿಹ್ಯದ ಎಳೆಯನ್ನು ಹಿಡಿದುಕೊಂಡು ಹೆಣೆಯಲಾದ ಈ ಕೃತಿ ತನ್ನ ನಾಟಕೀಯ ಗುಣದಿಂದಾಗಿ ಒಂದು ಮೋಡಿಯ ಬೀಸನ್ನು ಬೀಸುತ್ತದೆ. ಇಂಗ್ಲಿಷಿನ ಬ್ಯಾಲೆಡ್‌ನ

ಲಕ್ಷಣಗಳಲ್ಲಿ ಕೆಲವಾಗಿರುವ ಅನಿರೀಕ್ಷಿತ ಆರಂಭ, ಸಂವಾದ ಮತ್ತು ಕ್ರಿಯೆಯ ಮೂಲಕ ಕಥೆಯ ನಿರೂಪಣೆ, ಸರಳ ಭಾಷೆ, ನಾಟಕೀಯ ಗುಣ, ಪ್ರಸಂಗೋಚಿತ ವರ್ಣನೆ-ಇತ್ಯಾದಿಗಳನ್ನು ಮೈಗೂಡಿಸಿಕೊಂಡಿರುವ ಈ ಕಥನ ಕವನವು ಆಧುನಿಕ ಕಥನ ಯುಗದ ಪ್ರಾರಂಭಿಕ ರಚನೆಯಾದರೂ ಅದ್ಭುತ ಅಭಿವ್ಯಕ್ತಿ ಸಿದ್ಧಿಯನ್ನು ದೊರಕಿಸಿಕೊಂಡಿದೆ.

ನೋಟಕನಾಗಿದ್ದ ಅರಸ ಡೊಂಬರನ ಮಗಳ ಆಟಕ್ಕೆ ಸೋತು ತನ್ನ ಇಂಗಿತವನ್ನು ಪ್ರಕಟಿಸುತ್ತಾನೆ. ಗುಟ್ಟು ಬಯಲಾಯಿತೆಂದು ತಂದೆ ಮಗಳಿಬ್ಬರೂ ತಟ್ಟನೆ ನದಿಗೆ ಹಾರಿಕೊಳ್ಳುತ್ತಾರೆ. ಅವರನ್ನು ನೀರಿನಿಂದೆತ್ತಿದಾಗ ನಿಗೂಢ ವಿಚಾರವೊಂದು ಬಯಲಾಗುತ್ತದೆ. ಆ ಹುಡುಗಿ ಅರಸು ಬಲ್ಲಾಳನ ಸೋದರತ್ತೆಯ ಮಗಳೆಂದೂ, ಡೊಂಬನ ವಿದ್ಯೆಗೆ ಮರುಳಾದ ಆಕೆಯ ತಾಯಿ ಆತನೊಂದಿಗೆ ಗುಟ್ಟಾಗಿ ಓಡಿ ಹೋಗಿದ್ದಳೆಂದೂ ತಿಳಿದಾಗ ಕತೆಗೆ ಹೊಸ ತಿರುವು ದೊರಕುತ್ತದೆ. ಡೊಂಬನು ಸತ್ತರೂ ಡೊಂಬರ ಚೆನ್ನೆಯು ಅರಸನ ಚೆನ್ನೆಯಾಗಿ ಅರಮನೆ ಸೇರುತ್ತಾಳೆ. 'ಆರಿ ದೂರಕೆ ಅಲೆದ ಕಡಲಿನ ನೀರೆ ಕಡಲನ್ನು' ಕೂಡುತ್ತದೆ. ಪ್ರಾಚೀನ ಕಥಾ ಕಾವ್ಯಗಳಂತೆ ಧರಣೆ ಮಂಡಲ ದೇಶ ಕೋಶಗಳ ಬಣ್ಣನೆಗೆ ಹೊರಡದೆ ನೇರವಾಗಿ ನಾಟಕದ ದೃಶ್ಯವೊಂದಕ್ಕೆ ತೋರು ಬೆರಳಿಟ್ಟಂತೆ ಕಥನ ಮೊದಲಾಗುತ್ತದೆ.

'ಬೆರಗು ಕಣ್ಣಿನ ಬೆರಳ ಮೀಸೆಯ ಬೆರಸಿದಾ ನಗು ಮೋರೆಯ ಅರಸನಿದ್ದನು ಡೊಂಬರಾಟಕೆ ಸೆರೆಯ ಸಿಕ್ಕಿದ ಮನದಲಿ' ಒಂದು ನಿಶ್ಚಲ, ಆದರೆ ಜೀವಂತ ಚಿತ್ರಕ್ಕೆ ಚೌಕಟ್ಟು ಹಾಕಿದಂತಿದೆ ಈ ವರ್ಣನೆ. ಕವನದ ಭಾಷೆ ಕಥನದ ಕ್ರಿಯೆಯೊಂದಿಗೆ ಎಷ್ಟು ಏಕಕವಾಗಿ ತಿರುವುಗೊಂಡಿಯೆಂಬುದಕ್ಕೆ ಕೆಳಗಿನ ನುಡಿಗಳು ಸಾಕ್ಷಿ.

'ಆಗ ಬಡಿಯಿತು ಡೋಲು ಬಡ ಬಡ ಬಾಗಿ ಅರಸಿಗೆ ತಲೆಯನು ಬೇಗ ತಿರ್ರನೆ ತಿರುಗಿ ಸರ್ರನೆ ಲಾಗ ಹಾಕಿದ ಡೊಂಬನು. ನೀರಿನೊಂದಿಗೆ ಆರು ಬಿಂದಿಗೆ ಹೇರಿ ನೆತ್ತಿಯ ಮೇಲಕೆ ಹಾರಿ ದಿಕ್ಕಿಟ ಕುಣಿದ ನಕ್ಕಟ ನೀರು ಹೊರಗಡೆ ಚೆಲ್ಲದೆ', 'ಹಣ್ಣು ಬಿಡದಾ ಸಣ್ಣ ಬಳ್ಳಿಯ ಬೆಡಗಿನ ಮಣ್ಣೊಳಾಡುವ ಬೆಣ್ಣೆ'ಯಂತಿಪ ಡೊಂಬರ ಚೆನ್ನೆಗಣೆಯ ಮೇಲೆ ತೋರಿದ ಚಮತ್ಕಾರ ಚಿತ್ತಾಕರ್ಷಕವಾಗಿದೆ !'

ಮಣೆಮ ಹಗ್ಗಕೆ ಹಾರಿ ಸಿದಿದಳು ಕುಣಿವ ಮರಿ ಸಿಡಿಲಂತೆಯೆ  
ಹೆಣೆಮ ಮೈಯನು ಹಾವಿನಂತೆಯೆ ಗಣೆಗೆ ಸರಿದಳು ಸರ್ರನೆ  
ಕೊರಳು ವಾಲಿತು ಹೆರಳು ಜೋಲಿತು ಕುರುಳು ತೇಲಿತು ತರಳೆಯ  
ಉರುಳುತಲೆ ಕಾಲ್ ಬೆರಳ ಕೊನೆಯಲಿ ಮರಳಿ ಹೊಲಿದಳು ಜಡೆಯನು

ಡೊಂಬರ ಚೆನ್ನೆಯಲ್ಲಿ ಅರಸನ ಮನವು ತಟ್ಟನೆ ಸಿಲುಕಿದುದನ್ನು ಪಂಜೆಯವರು ಚಿತ್ರಿಸುವ ಸೊಗಸೇ ಅನ್ಯಾದೃಶವಾದದ್ದು :

ಬಿಗಿದು ಬಿಚ್ಚುವ ಬಿಚ್ಚಿ ಬಿಗಿಯುವ ಮುಗಿಲ ಕೂದಲ ಬಲೆಯಲಿ ಇಗೊ ಇಗೋ ಸಿಲುಕಿದುದು ಅರಸನ ಮಿಗದ ಕಣ್ಣಳ ಜೋಡಿಯು, ಕತೆಯ ಓಟ, ಸನ್ನಿವೇಶಗಳ ಚಿತ್ರಕ ಶಕ್ತಿ, ಭಾವನೆಗಳ ಮಿಡಿತ, ವರ್ಣನೆಗಳ ಸಹಜತೆ, ಪ್ರಾಸ ಯಮಕಗಳ ಅಕೃತಕ ಅಲಂಕಾರಗಳಿಂದ ಕೂಡಿದ 'ಡೊಂಬರ ಚೆನ್ನೆ' ಎಂದೂ ಮಾಸದ ಒಂದು ಕಲಾಕೃತಿಯಾಗಿದೆ.

'ಕಡೆಕಂಜಿ' ಕಥನ ಕಾವ್ಯವು ವ್ಯಕ್ತಿಯೊಬ್ಬನ ಬದುಕಿನ ಏಳು ಬೀಳಿನ ಬಗೆಯನ್ನೂ, ತನ್ನಲ್ಲಿ ಉಳಿದ ಕೊನೆಯ ಕರುವೊಂದರ ದೆಸೆಯಿಂದ ಆತ ಅರಸನ ಕರುಣೆಗೆ ಪಾತ್ರನಾದುದನ್ನೂ ವಿವರಿಸುತ್ತದೆ. ಕುಡಿತದ ಚಟದಿಂದುಂಟಾದ ಸಾಲ ಸೋಲಗಳನ್ನೂ ಕೊನೆಗೆ ಪಶ್ಚಾತ್ತಾಪವನ್ನೂ ಸೂಚಿಸುವ ಈ ಕಥನವು ಪರ್ಯಾಯವಾಗಿ ಒಂದಿಷ್ಟು ನೀತಿ ಬೋಧೆಯನ್ನೂ ತನ್ನ ಒಡಲಲ್ಲಿ ಇರಿಸಿಕೊಂಡಿದೆ. Words Worth ಕವಿಯ "The last of the flock" ಎಂಬುದು ಈ ಕಾವ್ಯಕ್ಕೆ ಪ್ರೇರಣೆ ಎನ್ನಲಾಗಿದ್ದರೂ ಹಾಗೆಂದು ಸ್ವತಃ ಪಂಜೆಯವರು ಹೇಳಿಕೊಂಡಂತಿಲ್ಲ.

ಬಿರಮು ಸೆಟ್ಟಿಯ ಹೃದ್ರಾವಕ ಕಥೆಯನ್ನು ಕೇಳಿಸಿಕೊಂಡ ಕಾರ್ಕಳದರಸನ ಬಾಯಿಯಿಂದ ಕವಿ ಹೇಳಿಸಿದ ಮಾತೊಂದು ಉಳುವ ವರ್ಗದ ಕುರಿತಾದ ಕಾಳಜಿಯಿಂದ ಕೂಡಿದೆಯಲ್ಲದೆ ಗದ್ದಿಗೆಯಲ್ಲಿ ಕುಳಿತವರಿಗೆ ಗದ್ದೆ ಗೇಯುವವರ ಗೋಳು ಕಿವಿಯ ಮೇಲೆ ಬೀಳುವುದು ಎಷ್ಟು ಅಪೂರ್ವದೆಂಬುದನ್ನು ಸೂಚಿಸುತ್ತದೆ :

ಬಿದ್ದುದಿಲ್ಲವು ಗದ್ದಿಗೆಯ ಮೇಲಿದ್ದ ನಮ್ಮೀ ಕಿವಿಯಲಿ
ಗದ್ದೆ ಉಳುವರ ಉದ್ದ ಗೋಳಿನ ಸದ್ದು ಸುದ್ದೀ ತನಕವಾ

ಪ್ರಜೆಗಳ ಹಾಗೂ ಪ್ರಭುಗಳ ಸಂಬಂಧ ಹೇಗಿರಬೇಕೆಂಬ ಆದರ್ಶವನ್ನು ಹೊತ್ತ ಈ ಕವನದಲ್ಲಿ ಕಥನ ಕ್ರಿಯೆಯ ರೋಚಕ ಬೆಳವಣಿಗೆಯನ್ನು ಮಾತ್ರ ಅಷ್ಟಾಗಿ ಕಾಣಲಾರೆವು.

'ನಾಗಣ್ಣನ ಕನ್ನಡಕ' ಎಂಬುದನ್ನು ಕಥನ ಕವನವೆನ್ನುವಂತಿಲ್ಲ. ಹಾಸ್ಯ ರಸ ಪ್ರಧಾನವಾದ ಈ ರಚನೆ ಕನ್ನಡಕದ ನೆವದಲ್ಲಿ ಕನ್ನಡವನ್ನು ಕಲಿಯಬೇಕೆಂಬ ಆಶಯವನ್ನು ಮೊಳಗಿಸುತ್ತದೆ.

ಮೇಲಿನ ಮೂರು ರಚನೆಗಳಿಗೆ ಪಂಜೆಯವರು 'ತ್ರಿವುಡೆ' ಛಂದಸ್ಸನ್ನು ಬಳಸಿಕೊಂಡಿದ್ದಾರೆ. ಇದನ್ನು ಗೋವಿನ ಕಥೆಯ ಮಟ್ಟು ಎಂದು ಕರೆಯಲಾಗಿದ್ದರೂ ರಚನಾ ವಿನ್ಯಾಸದಲ್ಲಿ ಗೋವಿನ ಕಥೆಯ ಬಂಧಕ್ಕೂ ಇದಕ್ಕೂ ತುಸು ವ್ಯತ್ಯಾಸವಿದೆ. ದಲಿತ, ಬಂಡಾಯ ಧ್ವನಿಗಳು ನಿಚ್ಚಳವಾಗಿ ಕೇಳಿಬರುತ್ತಿರುವ ಈ ವರ್ತಮಾನದಲ್ಲಿ ನಿಂತು ಪಂಜೆಯವರ ಒಂದು ಕ್ರಾಂತಿಕರಾಕವಾದ ಕವನ, 'ಹೊಲೆಯನ ಹಾಡು' ಎಂಬುದರತ್ತ ತಿರುಗಿದಾಗ ಅಚ್ಚರಿಯೆನಿಸುತ್ತದೆ.

'ಉಳ್ಳಯ್ಯಾ ದಯೆಗೊಳ್ಳಯ್ಯಾ' ಎಂದು ಮೊದಲಿಡುವ ಈ ಕವಿತೆಯಲ್ಲಿ ಕೇಳಿಕೆಯೂ ಇದೆ; ವಸ್ತು ಚಿತ್ರವೂ ಇದೆ, ಎಚ್ಚರಿಕೆಯೂ ಇದೆ. ಅಸ್ಪೃಶ್ಯನ ಮೂಕ ವೇದನೆಗೆ ಇಲ್ಲಿ ಅಚಾನಕ್ಕಾಗಿ ಬಾಯಿ ಬಂದುಬಿಟ್ಟಿದೆ. ತನ್ನ ಪಾಡು ಇದ್ದಕ್ಕಿದ್ದಂತೆ ಅವನಿಗೆ ಅರ್ಥವಾಗಿದೆ. ಅದಕ್ಕೆ ಕಾರಣವೂ ಹೊಳೆದಿದೆ. ಕೋಪವೂ ಕೆದರಿದೆ.

ನೋಡು ಸ್ವರಾಜ್ಯಕ್ಕೆ ನಾವೂರು ಗೋಲು
ನೀಡಣ್ಣ ದಮ್ಮಯ್ಯ ಕೊಡು ಸರಿ ಪಾಲು
ಬೇಡಿದಾಗಲೆ ಬಿಟ್ಟು ಕೊಡುವುದೆ ಮೇಲು
ಬೇಡ ನಾಂ ಸೆಳೆದು ಕೊಂಬೆವು ನಮ್ಮ ಪಾಲು
ನಂದಿಸು ಕಿಡಿಯಲ್ಲೆ ಹೊಲೆಯನ ಹಗೆಯ
ಬಂದಿಸು ಕೈಗೆ ಕೈ ನಮ್ಮ ಸಲುಗೆಯ

ಎಂಬಂತಹ ಸಾಲುಗಳಲ್ಲಿ ಕಂಡುಬರುವ ದಲಿತನ ಕುದಿತ, ಸಾಮಾಜಿಕ ಅನ್ಯಾಯಕ್ಕೆ ಸವಾಲೊಡ್ಡಿ ಪ್ರತಿಕ್ರಿಯೆ ತೋರುವ ಶಕ್ತಿಯುತ ಕವಿತೆಗಳಿಗಾಗಿ ಪಂಜೆಯವರಿಂದ ಮೊದಲಾಗಿ ಕವಿ ಸಿದ್ಧಲಿಂಗಯ್ಯನವರವರೆಗೆ ಸುದೀರ್ಘ ಕಾಲ ಕಾಯಬೇಕಾಯಿತೆಂಬುದನ್ನು ಎಣಿಸುವಾಗ ಪಂಜೆಯವರ ಈ ಕವನದ ಸಾಮಾಜಿಕ ಮೌಲ್ಯ ವಿದಿತವಾಗುತ್ತದೆ. ಪಂಜೆಯವರು ತಮ್ಮ ಹರಿಜನ ವಿದ್ಯಾರ್ಥಿಗಳನ್ನೂ ಬಹುವಚನದಲ್ಲಿ ಕರೆಯುತ್ತಿದ್ದರಂತೆ. ಅಸಾಧಾರಣ ಸಾಮಾಜಿಕ ಕಾರ್ಯಕರ್ತರಾಗಿದ್ದ ಕುದ್ಮಲ್ ರಂಗರಾಯರ ಪ್ರಭಾವ ಪಂಜೆಯವರ ಮೇಲೆ ಬಿದ್ದಿರುವ ಸಾಧ್ಯತೆ ಇದೆ. ಪಂಜೆಯವರ ಸಾಮಾಜಿಕ ಪ್ರಜ್ಞೆಯು ಪ್ರಕ್ರಿಯೆ ಇಲ್ಲಿ ರೂಪುಗೊಂಡ ಸಾಜಾ ಬಗೆ ಉಲ್ಲೇಖನೀಯ.

'ತೂಕಡಿಕೆಯನು ಕಳೆ' ಎಂಬುದು ಪಂಜೆಯವರ ಇನ್ನೊಂದು ಶಕ್ತಿಪೂರ್ಣ ಕವನ ಕುಳಿಯಾಗಿದೆ. ಸ್ವಾತಂತ್ರ್ಯ ಆಂದೋಲನದ ಹಿನ್ನೆಲೆಯಲ್ಲಿ 'ವಂದೇ ಮಾತರಂ' ಎಂಬ ಮಾಂತ್ರಿಕ ಘೋಷಣೆಯ ಮಹಿಮಾವೇಶದಲ್ಲಿ ರೂಪುಗೊಂಡ ವೀರ ಕವಿತೆಯಿದು.

ಭಾರತದ ಕುವರರ ಕರ್ಮ ಕುಹರಗಳಲ್ಲಿ ರಣರಣಿಸಬೇಕಾದ ಈ ಕವಿತೆ ಭಾರತೀಯರ ದುಸ್ಥಿತಿಯನ್ನು ಬಣ್ಣಿಸುತ್ತದೆ.

'ಮತ ಜಾಲದಲಿ ಸಿಲುಕಿ ಅತಿ ಜಾತಿಯಲಿ ಕುಲುಕಿ
ಗತಿಗೆಟ್ಟು ಸರ್ವರಲಿ ನೀನಾದೆ ಹಿಂದು' (ಇದು ಇಂದಿನ ಚಿತ್ರವೂ ಅಹುದು) ಎನ್ನುತ್ತಾ,

ಕಿತ್ತು ಬಿಡು ಸಂದೇಹ, ಇತ್ತು ಬಿಡು ಧನ ದೇಹ
ಮಾತೃಭೂಮಿಯ ಪದಾರ್ಚನೆಗೆ ಬಲವಂದು
ಹೊತ್ತುಗಳೆಯಲು ಬೇಡ ! ಭ್ರಾಂತಿಗೊಳದಿರು ಮೂಢ
ಸತ್ತಿರುವೆ ಏತಕೀ ಜೀವನದೊಳಿಂದು ?

ಎಂದು ಜನತೆಯ ಜೀವನ್ಮೃತಾವಸ್ಥೆಯನ್ನೂ, ಅದು ಹಿಡಿಯ ಬೇಕಾದ ದಾರಿಯನ್ನೂ ಸೂಚಿಸುತ್ತದೆ. ಶುಷ್ಕವಾದ ಆಧ್ಯಾತ್ಮಿಕ ಜಡತೆ ವರ್ಜ್ಯವೆನ್ನುವ "ಕಳಚಿ ಬಿಡು ಅಧ್ಯಾತ್ಮ ವಿದ್ಯೆಯನು ಬಂಧು, ಹೊದ್ದಿರ್ದ ವೇದ ಕುಬಳಿ ಮೂಲೆಗೊಂದು"- ಮೊದಲಾದ ಎಚ್ಚರಿಕೆಯ ಸೊಲ್ಲುಗಳು ಅಚ್ಚರಿಯುಂಟು ಮಾಡುತ್ತವೆ; ಕರ್ಮಠರ ಕಣ್ಣಿಗೆ ಅಂಜನ ಹಾಕುತ್ತವೆ. ಒಟ್ಟಿನಲ್ಲಿ ಅತ್ಯಂತ ವೀರ್ಯವತ್ತಾದ ಸ್ಫೂರ್ತ ಶೈಲಿಯಲ್ಲಿ ರಚಿತವಾದ ರಣ ಕವಿತೆಯಿದು. ಈ ವೀರಗೀತವನ್ನು ಬಹುಕಾಲ ಕವಿ ತನ್ನಲ್ಲೆ ಮುಚ್ಚಿಟ್ಟಿದ್ದರೆಂಬುದು ಸ್ವಾರಸ್ಯ ವಿಚಾರವಾಗಿದೆ.

'ಹುತ್ತರಿ ಹಾಡ'ಂತೂ ಕೊಡಗಿನ ನಾಡ ಗೀತವೆಂದು ಪ್ರಸಿದ್ಧವಾಗಿದೆ. ಹುತ್ತರಿ ಹಬ್ಬಕ್ಕೆ ಸಂಬಂಧಪಟ್ಟ ಉತ್ಸವ ಗೀತದಂತೆ ಇದು ರಚಿತವಾಗಿದ್ದರೂ ಇಡೀ ಕೊಡಗು ನಾಡಿನ ಜೀವ ಜೀವಾಳವಾದ ಶಕ್ತಿಯುತ ಸಾಂಸ್ಕೃತಿಕ ಚಿತ್ರವನ್ನು ಇದು ಕಣ್ಣ ಮುಂದೆ ಬೀಸಿ ನಿಲ್ಲಿಸುತ್ತದೆ. ನಾಡಿನ ಚೆಲುವು, ಜನದ ಸಾಹಸ ಸಾಧನೆ, ಓಜಸ್ಸು ರೀತಿ ನೀತಿಗಳ ವರ್ಣನೆ ರೋಮಾಂಚಕವಾಗಿದೆ. ಸರಳವಾದರೂ ಬಿಗಿ ಬನಿಗಳುಳ್ಳ ಕಾವ್ಯಭಾಷೆ, ಆದಿ ಪ್ರಾಸ ಅಂತ್ಯ ಪ್ರಾಸಗಳ ಅನುರಣನ ನಾದ ಶಕ್ತಿ, ಮೈ ಮನಗಳನ್ನು ಕುಣಿಸುವ ನಾಟ್ಯಶೈಲಿಗಳಿಂದಾಗಿ ಈ ಕವಿತೆ ಅಪೂರ್ವ ಚೈತನ್ಯದ ಚಿಲುಮೆಯಾಗಿದೆ.

ಕೊಡಗಿನ ಹಿರಿಯರ ವೀರ ವೃತ್ತಿ ವರ್ಣಿತವಾಗಿರುವುದು ಹೀಗೆ :

ಸವಿದು ಮೆದ್ದರೂ ಯಾರು ಪೂರ್ವದಿ ಹುಲಿಯ ಹಾಲಿನ ಮೇವನು
ಕವಣೆ ತಿರಿ ಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು
ಸವರಿ ಆನೆಯ ಸೊಂಡಿಲಿನ ರಣ ಕೊಂಬನಾರ್ ಭೋರ್ಗರೆದರೊ
ಸವೆದು ಸ್ವವೆಯದ ಸಾಹಸತ್ವದ ಕ್ಷಾತ್ರ ಬೇಟೆಯ ಮೆರೆದರೊ

ಅವರು ಸೋಲ್ ಸಾವರಿಯರು
ಅವರು ಕಡಗಲಿಗರಿಯರು
ಅವರೆ ಕೊಡಗಿ ಹಿರಿಯರು

ಪಂಜೆಯವರ ಕವಿತೆಗಳಲ್ಲಿ 'ಅಣ್ಣನ ವಿಲಾಸ' ಎಂಬುದು ಬಹುಮಂದಿಯ ಹೃದಯವನ್ನು ಹಿಂಡಿ ಕಣ್ಣು ಹನಿಯುವಂತೆ ಮೂಡಿದುದಾಗಿದೆ. ಈ ಕವನಕ್ಕೆ ಪ್ರೇರಣೆ ಹೇಮನ್ಸ್ ಎಂಬಾಕೆಯ "O Call my brother back to me" ಎಂಬ ಇಂಗ್ಲಿಷ್ ಕವಿತೆಯೆನ್ನಲಾಗಿದ್ದರೂ ಪಂಜೆಯವರ ಅಗಲಿದ ತಮ್ಮನ ಸ್ಮರಣೆಯಿಂದ ಇದು ರೂಪುಗೊಂಡುದೆಂದು ತಿಳಿದು ಬರುತ್ತದೆ. ಹೊಸ ಗನ್ನಡದ ಪ್ರಥಮ ಶೋಕಗೀತವಿದು. ಈ ಕವಿತೆಯಲ್ಲಿ ಕಾಣುವ ವಾತ್ಸಲ್ಯ, ಅನುತಾಪಗಳು ಅವರ ಬಾಳಿನಲ್ಲಿ ತುಂಬಿದ್ದ ದುಃಖದ ಚಿಲುಮೆಯಿಂದಲೇ ಹರಿದುದೆಂಬುದರಲ್ಲಿ ಸಂದೇಹವಿಲ್ಲ. ತಾಯಿ-ಮಗುವಿನ ಸರಳ ಸಂವಾದದ ರೂಪದಲ್ಲಿರುವ ಈ ಕವಿತೆಯ ಕರುಳ ಮಿಡಿತ ಅವಿಸ್ಮರಣೀಯ. ಗೋವಿಂದ ಪೈಯವರೆಂದಂತೆ ಇದರಲ್ಲಿ ಅದೊಂದು ಬಗೆಯ ದ್ರವಣ (fluidity) ಇದೆ. ಮನೆವಳಿಕೆ ಇದೆ. ಮಕ್ಕಳ ಮುಗ್ಧ ಪ್ರಪಂಚ, ನಿಷ್ಕಲ್ಮಷ ಕನಸಿನ ಲೋಕ, ಮಾತೃಹೃದಯದ ವಾತ್ಸಲ್ಯ ಸಿಂಚನ ಓದುಗರ ಮನವನ್ನು ಶುಭ್ರಗೊಳಿಸಿ, ಅಲ್ಲಿ ಚಿರಂತನವಾದೊಂದು ಚಿತ್ರವನ್ನು ಬರೆಯುತ್ತದೆ.

ಬಳ್ಳಿಯುಯ್ಯಾಲೆಯಲಿ ಗಿಳಿಯ ಮರಿ ತೂಗಿ
ಉಳ್ಳಲರ ಜೇನ್‌ಗುಡಿದು ಮರಿ ತುಂಬಿ ಕೂಗಿ
ಬೆಳ್ಳಿ ನೀರ್ ಬಿಸಿಲಲ್ಲಿ ಮುಳುಗಿದಂತಾಗಿ
ಹಳ್ಳಿ ಹಗಲಿರೆ — ಪುಟ್ಟನಾಡುವನೆ ಹೋಗಿ

ಎನ್ನುವಲ್ಲಿ ತೆರೆದುಕೊಳ್ಳುವ ಬಾಲ ಚಿತ್ತದ ಕಲ್ಪನಾ ಲೋಕದ ನಿರ್ಮಲ ಮುಗ್ಧ ಲೋಕದ ಚಿತ್ರ ಅನುಪಮವಾದದ್ದು. ಇಲ್ಲಿನ ಸರಳವಾದ ಅಚ್ಚಗನ್ನಡ ಶಬ್ದಗಳ ಚೊಕ್ಕ ಚೆಲುವಿಗೆ ಎಣೆಯೇ ಇಲ್ಲ. ತಮ್ಮನನ್ನು ಅರಸಿಕೊಂಡು ಹೋಗುವೆನೆಂದು ಮಗುವಿಗೆ ತಾಯಿ ಹೇಳುವ ಸಾಂತ್ವನದ ಮಾತು ಭಾರತೀಯ ಸಾಧ್ವಿಯ ಮನಸ್ಸಿನ ಭಾವನೆಯ ಪ್ರತೀಕವಾಗಿದೆ.

ಚಂದು ಕೇಳ್ ದಾರಿಯಲಿ ನಾ ಪೋಪೆ ಮುಂದೆ
ಬಂದಪನು ಬಳಿಕ ನಿನ್ನೆಯ ಮುದ್ದು ತಂದೆ
ಮಂದಿ ಮಕ್ಕಳ ಪಡೆದು ಬಾ ನೀನು ಹಿಂದೆ
ಎಂದವನ ಬಾಯ ಬಿಗಿದಳು ಮುದ್ದಿನಿಂದೆ

ಇಲ್ಲಿಗೇ ಕವನ ಮುಗಿಯುತ್ತಿದ್ದರೆ ಇನ್ನಷ್ಟು ಪರಿಣಾಮಕಾರಿಯಾಗುತ್ತಿತ್ತು. ಮುಂದಿನ 'ಆರಲಿಲ್ಲವು

ತಾಯಮನದ ಪರಿತಾಪಂ' ಎಂಬಿತ್ಯಾದಿ ವಿವರಣೆ ಬೇಕಾಗಿರಲಿಲ್ಲ. ಅದೇನಿದ್ದರೂ ಇದೊಂದು ಅತ್ಯುತ್ಕೃಷ್ಟ ರಚನೆಯೆಂಬುದು ನಿಸ್ಸಂದೇಹ.

ಪಂಜೆಯವರ ಇನ್ನೊಂದು ಕಸುಬಿನ ಕವಿತೆ-'ತೆಂಕಣ ಗಾಳಿಯಾಟ'. ಇದು frolic in the wind ಎಂಬ ಆಂಗ್ಲ ಕವಿತೆಯ ರೂಪಾಂತರವೆಂದು ಎಸ್. ಅನಂತನಾರಾಯಣ ಅವರು ಅಭಿಪ್ರಾಯ ಪಡುತ್ತಾರೆ. (ಪು. ೭೩. ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ) ಅದೇನಿದ್ದರೂ ಕರೆ ನಾಡಿನ ಸ್ವಾಭಾವಿಕವಾದ ದುರ್ವಾರವಾದ ಬೀಸುಗಾಳಿಯ ಅಬ್ಬರ ಇಲ್ಲಿ ತನ್ನೆಲ್ಲ ಪ್ರತಾಪಾತಿಶಯದೊಂದಿಗೆ ಇಲ್ಲಿ ಮೈದೋರಿದೆ. ಸಾಮಾನ್ಯ ಜೀವನದ ಚಿತ್ರಗಳೂ ಆ ಗಾಳಿಯ ಆಟವಲ್ಲಿ ಹೇಗೆ ರೂಪಗೊಳ್ಳುತ್ತವೆ ; ಅಸ್ತವ್ಯಸ್ತಗೊಳ್ಳುತ್ತವೆ ಎಂಬುದು ಇದರ ಮುಖ್ಯ ಸತ್ವ.

ಬರಲಿದೆ ಆಹಹಾ ದೂರದಿ ಬರಲಿದೆ
ಬುಸುಗುಟ್ಟುವ ಪಾತಾಳದ ಹಾವೊ
ಹಸಿವಿನ ಭೂತವು ಕೂಯುವ ಕೂವೊ
ಹೊಸತಿದು ಕಾಲನ ಕೋಣನ ಓವೊ
ಉಸಿರಿನ ಸುಯ್ಯೋ - ಸೂಸೂಕರಿಸುತ
ಬರುವುದು ಬರ ಬರ ಭರದಲಿ ಬರುವುದು
ಬೊಬ್ಬೆಯ ಹಬ್ಬಿಸಿ ಒಂದೇ ಬಾರಿಗೆ
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ
ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ
ಅಬ್ಬರದಲಿ ಘೋರ್ ಘೋರನೆ ಗುಮ್ಮಿಸಿ....

ಹೀಗೆ ಸಾಗುವ ಪದ್ಯ ಗಾಳಿಯ ಆಟ ಆರ್ಭಟಗಳ ಜೊತೆಗೆ ಜನದ ಪೇಚಾಟವನ್ನು ಒಂದೇ ಉಸಿರಿಗೆ ಪಟಪಟನೆ ಬಣ್ಣಿಸುತ್ತಾ ಘೋರೆಂದು ವೇಗವಾಗಿ ಸಾಗುತ್ತದೆ.

'ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ' ಎಂಬಲ್ಲಿ 'ದಡಕ್ಕೆ' ಎಂಬಲ್ಲಿ ಜಗಣದ ಪ್ರಯೋಗದಿಂದ ತೆರೆ ಬಂದು ದಡಕ್ಕೆ ಧಡಕ್ಕನೆ ಅಪ್ಪಳಿಸುವ ಬಗೆಯನ್ನು ಸಹಜವಾಗಿ ಬಣ್ಣಿಸಲಾಗಿದೆ. ನಾಲ್ಕು ನಾಲ್ಕು ಮಾತ್ರೆಗಳ ಗಣಗಳಿಂದ ಕೂಡಿದ ಈ ರಗಳೆಯ ಪ್ರಭೇದ - ಭಾವ ಭಾಷೆ ಕ್ರಿಯೆಗಳ ಅವಿನಾಭಾವ ಸಂಬಂಧಕ್ಕೊಂದು ಅಪೂರ್ವ ಸಾಕ್ಷಿಯಾಗಿದೆ.

ಪಂಜೆಯವರು ಕೆಲವು ಸೊಗಸಾದ ಜೋಗುಳ ಹಾಡುಗಳನ್ನು ಕಟ್ಟಿದ್ದಾರೆ. ಬಹುಶಃ ಇವು ಅವರ ಮಕ್ಕಳ ಸಲುವಾಗ ರಚಿತವಾಗಿರಬಹುದು.

ಜೋಗುಳ ಹಾಡನ್ನು ಲಾಲಿಸು ಜೋ ಜೋ
ತೂಗುವೆ ತೊಟ್ಟಿಲ ಮಲಗಿರು ಜೋ ಜೋ
ಸುಮಲತೆಗಳ ಪರಿಮಳವ ಬಿತ್ತರಿಸಿ
ಕಮಲದ ಕೋಮಲ ಗಂಧವ ಬೆರಸಿ
ಮಂದ ಮಾರುತವು ಬೀಸುತ್ತಿರಲಿನಿಸು
ತಂದೆ ತಂದಿಹೆನೊಂದು ಮುದ್ದಿನ ಕನಸು

ಈ ಜೋಗುಳ ಹಾಡಿನ ಮಟ್ಟು, ಹಳೆಯ ಸಾಂಪ್ರದಾಯಿಕ ಜೋಗುಳದಂತಿದ್ದರೂ ಇದರಲ್ಲಿನ ಭಾವನೆ, ವರ್ಣನೆ, ಕನಸುಗಳು ವಿನೂತನವಾಗಿ ಹೃದ್ಯವಾಗಿವೆ.

ಪಂಜೆಯವರ ಇತರ ಮಕ್ಕಳ ಪದ್ಯಗಳಲ್ಲಿ 'ಜೇಡನೂ ನೊಳವೂ, ಮೂಡುವನು ರವಿ ಮೂಡುವನು, ನಾಗರಹಾವು, ತಾರಮ್ಮಯ್ಯ, ಮಿನುಗೆಲೆ ಮಿನುಗೆಲೆ ನಕ್ಷತ್ರ - ಇವು ಗೇಯ ಗುಣದಿಂದಲೂ, ಪ್ರಸಾದ ಗುಣದಿಂದಲೂ, ಭಾವ ಬಂಧುರತೆಯಿಂದಲೂ ಸೊಗಸಾಗಿವೆ. 'ಮಿನುಗೆಲೆ ನಕ್ಷತ್ರ' ಎಂಬುದು 'Twinkle Twinkle little star' ಎಂಬ ಆಂಗ್ಲ ಕವನದ ಅನುವಾದವೆಂಬುದು ಸರ್ವವಿಧಿತ. ಈ ಅನುವಾದದ ಲಯ ಮೂಲಕ್ಕೆ ಬಹುವಾಗಿ ಒಪ್ಪುತ್ತದೆ. 'ನಾಗರಹಾವು' ಅಂದು ಆಳುತ್ತಿದ್ದ ಆಂಗ್ಲರ ಕುರಿತಾದುದು ಎಂಬ ಅಭಿಪ್ರಾಯವೂ ಇದೆ.

ಪಂಜೆಯವರು ಹಳೆಯ ವೃತ್ತ ಬಂಧಗಳಲ್ಲಿ ರಚಿಸಿದ ಚಂದ್ರೋದಯ, ಲಕ್ಷ್ಮೀಶ ಕವಿ, ಕಮಲ, ಭೀಷ್ಮ ನಿರ್ಯಾಣಗಳಲ್ಲಿ ಹೇಳಿಕೊಳ್ಳುವ ರೋಚಕತೆಯೇನೂ ಇಲ್ಲವೆನ್ನಬಹುದು. 'ಪಾನಿಪತದ ಮೂರನೆಯ ಯುದ್ಧ' ಎಂಬ ಪುಟ್ಟ ಮೂರು ಪುಟಗಳ ಯಕ್ಷಗಾನ ಪ್ರಬಂಧವು ಶ್ಲಾಘ್ಯವಾದ ಹೊಸ ಪ್ರಯತ್ನವಾದರೂ, ಯಕ್ಷಗಾನೀಯವಾದ ಒಂದು ನೈಜ ಬಿಂಬವನ್ನು ಮೂಡಿಸುವುದಕ್ಕೆ ಪ್ರಸಂಗದ ಹ್ರಸ್ವತೆ ಅಡ್ಡಿಯಾಗಿರಬೇಕೆನಿಸುತ್ತದೆ.

'ಕಬ್ಬಿಣದ ಬುದ್ಧಿವಾದ' ಎಂಬ ಸಂವಾದ ಕವಿತೆ ಸುದೀರ್ಘವಾಗಿದ್ದರೂ ಪಂಜೆಯವರ ಸಹಜ ಸರಸತೆಯಾಗಲೀ ಸರಲತೆಯಾಗಲೀ ಅದರಲ್ಲಿ ಪಡಿಮೂಡಿಲ್ಲ. ಮಿಕ್ಕುಳಿದ ಕೆಲವು ರಚನೆಗಳಲ್ಲೂ ಸ್ವಾರಸ್ಯ ತುಂಬಿಕೊಂಡಿಲ್ಲ. ಬದಲಾಗಿ ಉಪದೇಶ ಮುಂದಾಗಿದೆ.

ಪಂಜೆಯವರ ಕಾಲದಲ್ಲೆ ಕನ್ನಡದಲ್ಲಿ ಪ್ರಾಸ ಭಂಜನೆ ನಡೆದರೂ ಇವರು ಪ್ರಾಸದ ವಿಷಯದಲ್ಲಿ ಸಂಪ್ರದಾಯಶೀಲರಾಗಿಯೆ ನಡೆದುಕೊಂಡರು. ಹಳೆಯ ಕೆಲವು ಮಟ್ಟಗಳನ್ನು ಉಳಿಸಿಕೊಂಡರು. ಬಿ.ಎಂ.ಶ್ರೀಯವರಂತೆ ನೂತನ ಲಯ ವೈವಿಧ್ಯವನ್ನು ವಿಶೇಷವಾಗಿ ಬಳಸಿಕೊಳ್ಳಲಿಲ್ಲ. ಆದರೆ ವಸ್ತು, ರೀತಿಗಳಲ್ಲಿ ಹೊಸ ಉಸಿರನ್ನು ಊದಿದರು. ಕನ್ನಡದ ದೇಸಿಗೆ ಕಾಯಕಲ್ಪ ಮಾಡಿದರು. ಭಾಷಾ ಶಯ್ಯೆಯನ್ನು ತಿಳಿಯಾಗಿಸಿದರು. ಹೊಸ ಕನ್ನಡದ ಹೊಂಗಸನು ಹೊತ್ತ ಹರಿಕಾರರಾಗಿ ಸಂಚರಿಸಿದರು. ಮುಖ್ಯವಾಗಿ ಮಕ್ಕಳಿಗೆ ಹೊಸ ಕನ್ನಡದ ರುಚಿಯನ್ನು ಹುಟ್ಟಿಸಿದರು. ತಾನೊಬ್ಬ ಹೊಸಗನ್ನಡದ ಚೇತನದ ನೇತಾರ ಎಂಬುದನ್ನು ಮರೆತು ಮಕ್ಕಳೊಂದಿಗೆ ಒಂದಾಗಿ ನಲಿದರು ; ಅವರನ್ನೂ ನಲಿಯಿಸಿದರು. ಆ ನಲಿವಿನಲ್ಲಿ ಸಾರ್ಥಕತೆ ಕಂಡರು.

□

---

ಪ್ರೊ. ಅಮೃತ ಸೋಮೇಶ್ವರ
'ಒಲುಮೆ' ಕೋಟೆಕಾರ್, ದಕ್ಷಿಣ ಕನ್ನಡ - ೫೭೫ ೦೨೨

# ಹೆಚ್. ಗೋವಿಂದಯ್ಯ ಅವರ ಕವಿತೆಗಳು

### ಅ ಆ ಮತ್ತು

ಕಣ್ಣು ಬಿಟ್ಟು ನಾನು ಕೈಕಾಲು ಆಡಿಸಿದಾಗ
ಕತ್ತಲೆ ಗೂಡಿನ ಅವ್ವನ ಕಣ್ಣೊಳಗೆ
ಒಲೆ ಉರಿಯುತ್ತಿತ್ತು
ಕಪ್ಪು ಕೈಕಾಲುಗಳ ಬೆಂಕಿಗೆ ಒಪ್ಪಿಸಿ
ಅಪ್ಪ ಮೋಟು ಬೀಡಿಯೊಂದಿಗೆ ಉಸಿರಾಡಿದ
ಕುದಿವ ಗಂಜಿಗೆ ಜೀವಗಳು ಕುದಿಯುತ್ತಿದ್ದವು.

ಅವ್ವನ ಎದೆಗೂಡೊಳಗೆ
ತೆವಳಿ ನಿಂತು ನಡೆದಾಡಿದ ಹೆಜ್ಜೆಗಳು
ಇಸ್ಕೂಲು ಗೋಡೆಗಳ ನಡುವೆ ನಿಂತೇಬಿಟ್ಟಾಗ
ಕರಿ ಕೆನ್ನೆಯ ಮೇಲೆ ಹುರಿಗೊಂಡಿದ್ದ ಅಪ್ಪನ ಮೀಸೆ
ನಾಮದ ಮೇಸ್ಟರ ಕಾಲಿಗೆ ಬಿದ್ದು ನೆಲ ನೋಡಿತು

ಕತ್ತಲೆ ಬೋರ್ಡಿನ ಮೇಲೆ ಕಲಿತ ಅ ಆ
ಅಕ್ಷರಗಳ ನಡುವೆ ಅವ್ವ ಅಪ್ಪನ ಆಸೆಗಳು ಸಿಕ್ಕಿದುವು
ನಮ್ಮೂರು ಕೇರಿ ಸಮಾದಿಗಳು ಸಿಕ್ಕಿದುವು

ಅಸ್ತಿ ಪಂಜರಗಳ ಪಾತಾಳದಲ್ಲಿ ಒಂದಿಷ್ಟು
ಮಾತುಗಳು ಸಿಕ್ಕಿದುವು.

ಹುಡುಕುತ್ತಾ ಹುಡುಕುತ್ತಾ
ಕೆಳಕ್ಕೆ ಇಳಿದಾಗ ಎದ್ದ ಪ್ರಶ್ನೆಗಳಿಗೆ
ಕಾಕಿ ಡ್ರೆಸ್ಸಿನ ಕೈಕಾಲುಗಳು ಮೂಡಿ
ಮೀಸೆಗಳು ಬೆಳೆದು ಅಡರಿಕೊಂಡು
ಕತ್ತಲಲ್ಲಿ ಕರಗಿಹೋದೆ.

ಆದರೆ
ಪಿತ್ರಾರ್ಜಿತ ಗುಡಿಸಲ ಹರಕು ಗೋಡೆಗಳ ಮೇಲೆ
ಅ ಆ ಮೂಡಿಸಿದಾಗ ಅಂದು
ಅವ್ವ ಕೊಟ್ಟ ಮುತ್ತುಗಳು ಕೆನ್ನೆ ಮೇಲೆ ಇನ್ನೂ ಇವೆ
ಅಪ್ಪ ಕೊಟ್ಟ ತೂತು ಕಾಸು ಉಡುದಾರದಲ್ಲಿ ಹಾಗೇ ಇದೆ.

## ಮಾರ

ಓ ಮರವೆ ಅರಳಿ ಮರ್ಮರವೆ ನೆರಳ ಜಳುಜಳುವೆ
ಎಲ್ಲಿ ಮಾರ ನನ್ನಯ್ಯ ಮಾರ ?

ಇದ್ದನಲ್ಲ ಇಲ್ಲೆ ನಿನ್ನ ತೊಡೆ ಮೇಲೆ ಕಲ್ಲ ಮುನಿಯಂತೆ
ಕುಟ್ಟುತ್ತ ಮೆಟ್ಟುಗಳ ಸುಮ್ಮನೆ
ಮುಟ್ಟಬಾರದ ಅಪ್ಪ ಮುಟ್ಟಹೋಗಿ ಸಿಕ್ಕು ಸೆರೆಗೆ
ಸೆರೆಯಾಗುವಾಗ ನಾ ಆಡುವಾಗ
ಇದ್ದನಲ್ಲ ಇಲ್ಲೆ ಬೆಳಕಂತೆ ರಾತ್ರಿಗೆ ನಾ ಓದುವಾಗ ?

ನನ್ನಯ್ಯ
ನನಗೆಂದೆ ಕಣ್ಣಕಪ್ಪಿನಲಿ ಕಡೆದು ಕಣ್ಣೆಗೊತ್ತಿ
ಕಾಲಿಗಿಟ್ಟವನೆ ಮೋಜು
ಕಡೆದೆ ಊರಿಂದ ಕೇರಿಯಿಂದ
ಮುಟ್ಟಬಾರದ ನಾನು ಮುಟ್ಟುತ್ತ ನಡೆದೆ ರಸ್ತೆಗಳ
ಮುತ್ತಿಟ್ಟೆ ಊರೂರ
ನಡೆದೆ ನೀರಿಂದಾಚೆ ತೇಲುತ್ತ ನೀಲಿಯಾಚೆ....

ಅಯ್ಯೊ ಮೈಮರೆತೆನೆ ಮರವೆ ?
ಎಲ್ಲ ಮುಟ್ಟಿದ ನಾನು ಮುಟ್ಟುವುದ ಮರೆತೆನೆ ನನ್ನಯ್ಯನ

ಯಾವ ಜನುಮದಲಿ ಮಾಡಿದ್ದನೋ ಏನೋ ಈ ಮೋಜ
ನನ್ನ ತಂದೆಯ ತಂದೆ ಮಾರಯ್ಯ ಹರಳಯ್ಯ
ಇಟ್ಟಿದ್ದನೊ ಏನೊ ಮರೆವ ನೋವ ಕುಟ್ಟಿ
ಮೋಜಲ್ಲಿ ಮಾಯದಲಿ ?

ಓ ಮರವೆ ನನ್ನಯ್ಯನಯ್ಯನ ಮನೆಯ ಎಲ್ಲಿ ಮಾರ ?

ಭಾರವಾಯಿತೆ ಬದುಕು ಅಯ್ಯಾನಿಗೆ ಇಲ್ಲಿ
ಮಲ ಹೊರವ ತಲೆಗಾವ ಬಾರ ಘಮಿಯಲ್ಲಿ
ಇಲ್ಲ....ಅಪ್ಪ ಏನಾರು
ಅಪ್ಪನ ಜತೆ ಬಂದು ತೂರಾಡಿದನೆ ಅಯ್ಯನ ಮೇಲೆ
ಎದ್ದು ಹೊರಟನೆ ರೋಸಿ ನನ್ನನ್ನೆ ಹುಡುಕುತ್ತಾ ?

ಕಾಲುಗಳ ಅರಸ ಕಾಲರಸ ಮಾರಯ್ಯ ಕಾಲೆತ್ತಿ ಕಡೆದದ್ದು ಕಾಣೆ
ಇಲ್ಲೇ ಇದೆಯಲ್ಲ ಹರಿದ ಎಕ್ಕಡಗಳ ರಾಶಿ
ಉಳಿ ರಂಪಿ ಮೇಣ ದಾರ ಜೊತೆಗೆ ಎಲೆಯಡಿಕೆ ಚೀಲ
ಇಲ್ಲೆ ಚೆಲ್ಲಿದೆಯಲ್ಲ ಮರವೆ ಇನ್ನೂ
ನನ್ನಯ್ಯನ ಕೆಂಪು ಹಲ್ಲಿನ ಹೂನಗೆ
ಅರಳಿ ನಿನ್ನ ಎಲೆ ಎಲೆಯಲ್ಲಿ ?
ಮೆಟ್ಟು ಕುಟ್ಟುವ ತಲೆತಲೆಯ ಏಕತಾನವು
ಕೂಡಿ ಹಿಡಿಯಾಗಿ ಸಿಡಿದನೆ
ನನ್ನಯ್ಯಾ ನೀನಾಗಿ ಮಾಗಿ ?

ಇಲ್ಲೆ ಇದ್ದವನು ಎಲ್ಲಿ ಏನಾದ ಮೂಳ....?
....ಇಲ್ಲವೆ ಏನಾರು ?
ಮುಟ್ಟಬಾರದ ಕಿಚ್ಚಲ್ಲಿ ಮೌನಮುನಿ ಮಾರ
ಮುಟ್ಟೇಬಿಟ್ಟನೆ ಶಿವ ಶಿವ ಉತ್ತಮರ !

ಓ ಮರವೆ ಅರಳಿ ಮರ್ಮರವೆ ಸರಳ ಜಳುಜಳುವೆ
ಎಲ್ಲಿ ಮಾರ ನನ್ನಯ್ಯ ಮಾರ ?



ಪ್ರೊ. ಹೆಚ್. ಗೋವಿಂದಯ್ಯ
೧೨೫೫, ೪ನೇ ಕ್ರಾಸ್, ಪಡುವಣ ರಸ್ತೆ, ಕುವೆಂಪುನಗರ, ಮೈಸೂರು - ೫೭೦ ೦೨೩

# ಅಂಬೇಡ್ಕರ್ ಮತ್ತು ಕುವೆಂಪು

ಡಾ. ಸಣ್ಣರಾಮ

ಸಾಮಾನ್ಯವಾಗಿ ಇಬ್ಬರು ಅಥವಾ ಮೂವರು ಚಿಂತಕರನ್ನು ಮುಖಾಮುಖಿಯಾಗಿಸಿ ಅವರ ವಿಚಾರಧಾರೆಯನ್ನು ತೌಲನಿಕವಾಗಿ ನೋಡುವ ಪರಿಪಾಠ ಕನ್ನಡ ಸಾಹಿತ್ಯಕ್ಷೇತ್ರ, ವಿಚಾರಪರ ಕ್ಷೇತ್ರಗಳಲ್ಲಿ ನಡೆದು ಬಂದಿದೆ. ಅಂಬೇಡ್ಕರ್ ಮತ್ತು ಮಾರ್ಕ್ಸ್ ಮುಂತಾಗಿ, ಸಮಾನ ಚಿಂತಕರ ತರ್ಕ, ವಿಚಾರಧಾರೆಯನ್ನು ಚಿಂತನೆಯ ನೆಲೆಯನ್ನು ಈ ಕ್ರಮದಿಂದ ಗ್ರಹಿಸುವುದು ಹೆಚ್ಚು ಉಪಯುಕ್ತವಾದುದು. ಒಬ್ಬ ಸಮಾಜ ಚಿಂತಕ ಮತ್ತು ಸಮಾಜ ಮುಖಿಯಾದ ಕವಿ ಇಬ್ಬರ ದೃಷ್ಟಿಕೋನಗಳಲ್ಲಿರುವ ಸಾಮ್ಯವನ್ನು ಗುರುತಿಸುವ ಪ್ರಯತ್ನಗಳು ವಿರಳವಾಗಿ ನಡೆದಿವೆ. ಏಕೆಂದರೆ ಕವಿ ಸಮಾಜದ ಶಿಶು, ಸಮಾಜದಲ್ಲಿ ತಾನು ಕಂಡುಂಡ ಅನುಭವಗಳಿಗೆ ಸಾಹಿತ್ಯಕ ರೂಪವನ್ನು ಕೊಟ್ಟಿರುತ್ತಾನೆ. ಕವಿಯ ಬರಹಗಳು ಕೇವಲ ಆಲಾಪಗಳಾಗುತ್ತವೆ. ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಮತ್ತು ರಾಷ್ಟ್ರಕವಿ ಕುವೆಂಪು ಇಬ್ಬರು ಏಕಕಾಲದಲ್ಲಿ ಮಹಾಚಿಂತಕರೂ, ಅಪೂರ್ವ ಲೇಖಕರೂ ಆಗಿದ್ದಾರೆ.

ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಮತ್ತು ಮಹಾಕವಿ ಕುವೆಂಪು ಇಬ್ಬರದು ಸಾಗರದಷ್ಟು ವಿಶಾಲ ಚೇತನ. ಒಬ್ಬ ರಾಷ್ಟ್ರನಾಯಕ ಭಾರತರತ್ನರಾದರೇ, ಮತ್ತೋರ್ವ ರಾಷ್ಟ್ರಕವಿ, ಜಗದಕವಿ, ಯುಗದಕವಿ. ಇಬ್ಬರೂ ಹಿಂದೂ ಸಮಾಜದ ತಳಭಾಗದಿಂದ ಬಂದವರು. ಕುವೆಂಪು ಶೂದ್ರವರ್ಗಕ್ಕೆ ಸೇರಿದರೆ, ಅಂಬೇಡ್ಕರ್ ವರ್ಗದಾಚೆಗಿನ ಅಸ್ಪೃಶ್ಯ ಸಮೂಹದಿಂದ ಬಂದವರು. ಇಬ್ಬರೂ ಪುರೋಹಿತಶಾಹಿ ಅಲಗಿನಿಂದ ಇರಿತಕ್ಕೊಳಗಾದವರು. ಆದ್ದರಿಂದ ಇಬ್ಬರ ಆಲೋಚನಾ ರೀತಿಯಲ್ಲಿ ಸಾಮ್ಯವಿದೆ. ಈ ಇಬ್ಬರು ಮಹಾಚೇತನಗಳು. ಹಿಂದು ಧರ್ಮ, ವರ್ಣ, ಜಾತಿ, ವೇದ, ಪುರಾಣಗಳನ್ನು ಕುರಿತು ಮಾತನಾಡಿದ ವಿಚಾರಗಳಲ್ಲಿ ಆಶ್ಚರ್ಯಕರವಾಗುವಂತೆ ಹೋಲಿಕೆಯಿದೆ.

ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಮತ್ತು ರಾಷ್ಟ್ರಕವಿ ಕುವೆಂಪು ಇಬ್ಬರೂ ಹಿಂದೂ ಸಮಾಜದ ಶೋಷಣೆಯ ಮೂಲವನ್ನು ಅತ್ಯಂತ ನಿಖರವಾಗಿ ಗುರುತಿಸಿದ್ದಾರೆ. ಹಿಂದೂ ಧರ್ಮದ ಜಾತಿ-ವರ್ಣವ್ಯವಸ್ಥೆ, ಪುರಾಣ-ಕಂದಾಚಾರಗಳು ಮತ್ತು ಅವುಗಳನ್ನು ಹುಟ್ಟುಹಾಕಿದ ಪುರೋಹಿತಶಾಹಿ ಇವೇ ಈ ಸಮಾಜದ ದುರ್ಗತಿಗೆ ಮೂಲಕಾರಣವೆಂದು ಖಚಿತವಾಗಿ ಅಭಿಪ್ರಾಯಪಡುತ್ತಾರೆ.

'ಧರ್ಮ' ಅತ್ಯಂತ ವ್ಯಾಪಕ ಅರ್ಥವುಳ್ಳದ್ದಾಗಿದೆ, ದೇವರ ಕಲ್ಪನೆ, ಆರಾಧನೆ, ಆಚರಣೆ, ಸಾಮಾಜಿಕ ಜೀವನ, ನ್ಯಾಯನಿಷ್ಠೆ, ನಂಬಿಕೆ, ಸಂಪ್ರದಾಯ ಅತ್ಯಂತ ಸಂಕುಚಿತ ದೃಷ್ಟಿಯನ್ನು ಹೊಂದಿರುವುದು ಗೋಚರಿಸುತ್ತದೆ. ಅಂಬೇಡ್ಕರ್ ಹಿಂದೂ ಧರ್ಮದ ಆಕರಗಳೆಲ್ಲವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದವರು. ಹಿಂದೂಧರ್ಮದ ಸಾರಗಳಾದ ವೇದ, ಉಪನಿಷತ್ತು, ಬ್ರಾಹ್ಮಣ, ಸ್ಮೃತಿ, ಶ್ರುತಿ, ಪುರಾಣ, ಭಗವದ್ಗೀತೆ, ರಾಮಾಯಣ, ಮಹಾಭಾರತ ಮೊದಲಾದವುಗಳನ್ನು ಓದಿ ಅವುಗಳಲ್ಲಿರುವ ಅವೈಜ್ಞಾನಿಕ, ಅವೈಚಾರಿಕ, ಸಮಾಜ ವಿರೋಧಿ ಧೋರಣೆಗಳನ್ನು ಬಯಲಿಗೆಳೆದಿದ್ದಾರೆ. ಧರ್ಮ ಮನುಷ್ಯನ ಬದುಕನ್ನು, ಸಾಮಾಜಿಕ ಸ್ವಾಸ್ಥ್ಯವನ್ನು ಉನ್ನತೀಕರಿಸುವ ವ್ಯವಸ್ಥೆಯಾಗಿರಬೇಕೆಂದು ಅಂಬೇಡ್ಕರ್ ಅಭಿಪ್ರಾಯಪಡುತ್ತಾರೆ. ಹಿಂದು ಧರ್ಮ ಕೆಲವು ವರ್ಗದ ಜನರು ಶ್ರೇಷ್ಠರೆಂದು ಉಳಿದವರು ಹೀನರೆಂದು ವಿಭಾಗಿಸುತ್ತದೆ. ಮಾನವ ಸಮಾಜವನ್ನು ತಾರತಮ್ಯ ಧೋರಣೆಯಿಂದ ವಿಭಾಗಿಸುವ ಧರ್ಮ ಅದೊಂದು ಧರ್ಮವಲ್ಲವೆಂದು ಖಡಾಖಂಡಿತವಾಗಿ ಹೇಳುತ್ತಾರೆ.

ಧರ್ಮ ಮತ್ತು ದೇವರ ಕಲ್ಪನೆಯ ನಡುವಿನ ಸಂಬಂಧ ಮೂಲವನ್ನು ಖಚಿತವಾಗಿ ಹೇಳಲು ಆಧಾರಗಳಿಲ್ಲ. ಪರೋಪಕಾರಿಯಾದ ವ್ಯಕ್ತಿಯು ಮರಣಿಸಿದ ನಂತರ ಅವನ ಸ್ಮರಣೆಯು ಆರಾಧನೆಗೆ ಅವಕಾಶವಾಗಿ ದೇವರ ಕಲ್ಪನೆಗೆ ಅವಕಾಶ ಮಾಡಿಕೊಟ್ಟಿರಬೇಕು. ಧರ್ಮವೆಂದರೆ ಕೇವಲ ದೇವರ ಕಲ್ಪನೆ ಆರಾಧನೆಯಿಲ್ಲ, ಅದು ಒಂದು ಸಮಾಜದ ನೀತಿರೂಪಕವೂ ಆಗಿರುತ್ತದೆಂದು ಅಂಬೇಡ್ಕರ್ ಅಭಿಪ್ರಾಯಪಡುತ್ತಾರೆ. ಅವರು ಈ ಕುರಿತು "ಧರ್ಮ ಮತ್ತು ನೀತಿಗಳೆರಡೂ ಮಾನವನ ಅಸ್ತಿತ್ವದ ಮೂಲಾಂಶಗಳಾದ - ಬದುಕು, ಸಾವು, ಹುಟ್ಟು ಮತ್ತು ಮದುವೆಯೊಂದಿಗೆ ಅವಿಭಾಜ್ಯ ಸಂಬಂಧವನ್ನು ಪಡೆದಿವೆ. ಧರ್ಮವು ಬದುಕಿನ ಪ್ರಕ್ರಿಯೆಗಳನ್ನು ಪರಿಶುದ್ಧಗೊಳಿಸಿದರೆ, ನೀತಿ ನಿಯಮಗಳು ಅದರ ರಕ್ಷಣೆಗೆ ಕಾನೂನನ್ನು ಒದಗಿಸುತ್ತವೆ"-ಎಂದಿದ್ದಾರೆ. ಅಂಬೇಡ್ಕರ್ ಅವರ ಈ ಮಾತು ಸಮಾಜದಲ್ಲಿ ಧರ್ಮದ ಪಾತ್ರವನ್ನು ತೆರೆದಿಡುತ್ತದೆ. ಒಂದು ಧರ್ಮದಡಿಯಲ್ಲಿ ಜೀವಿಸುವ ಜನರಿಗೆ ನ್ಯಾಯ ದೊರಕಿಸಿಕೊಡಬೇಕಾದರೆ ಮುಖ್ಯವಾಗಿ ಆ ಧರ್ಮ ಏನೆಂಬುವುದನ್ನು ಅರಿತಿರಬೇಕು.

ಶ್ರೇಣೀಕೃತ ಹಿಂದೂಧರ್ಮದ ಜಾತಿವ್ಯವಸ್ಥೆಯಲ್ಲಿ ಬ್ರಾಹ್ಮಣನು ಅತ್ಯಂತ ಮೇಲು ಸ್ಥರದಲ್ಲಿದ್ದರೆ ಅಸ್ಪೃಶ್ಯ ಕೆಳಸ್ಥರದಲ್ಲಿದ್ದಾನೆ. ಜಾತಿವ್ಯವಸ್ಥೆಯಲ್ಲಿ ವ್ಯಕ್ತಿಯು ತನ್ನೆಲ್ಲಾ ವ್ಯವಹಾರವನ್ನು ತನ್ನ ಜಾತಿಯ ಪರಿಧಿಯಲ್ಲಿಯೇ ಮುಗಿಸಿಕೊಳ್ಳಬೇಕು. ಯಾವ ಕಾರಣಕ್ಕೂ ವಿಜಾತಿಯ ಮದುವೆ ಸಂಬಂಧವನ್ನು ಬೆಳೆಸುವಂತಿಲ್ಲ. ತಾರತಮ್ಯ ಹಿಂದೂ ಧರ್ಮದ ತಿರುಳು, ಯಾವ ಧರ್ಮ ತನ್ನ ಸದಸ್ಯರನ್ನು ಏಕಭಾವದಿಂದ ನೋಡುವುದಿಲ್ಲವೋ ಅದು ಧರ್ಮವೇ ಅಲ್ಲವೆಂದು ಅಂಬೇಡ್ಕರ್ ಪ್ರತಿಪಾದಿಸುತ್ತಾರೆ.

ಹಿಂದೂ ಧರ್ಮದ ತಾರತಮ್ಯ ನೀತಿಯನ್ನು ಕುವೆಂಪು ಅವರು ಅಂಬೇಡ್ಕರ್ ಅವರಷ್ಟೇ ತೀವ್ರವಾಗಿ ವಿರೋಧಿಸಿದ್ದಾರೆ. ಹಿಂದೂ ಧರ್ಮದಲ್ಲಿ ತುಂಬಿರುವ ಕಂದಾಚಾರ - ಮೂಢನಂಬಿಕೆಗಳನ್ನು ಉಗ್ರವಾಗಿ ಖಂಡಿಸಿದ ಕವಿಗಳಲ್ಲಿ ಕುವೆಂಪು ಅಗ್ರಗಣ್ಯರು, "ಮತ ಮೌಢ್ಯವೆಂಬ ನಿತ್ಯರೋಗ ಈ ದೇಶದ ನರನಾಡಿಗಳಲ್ಲಿ ಮಾತ್ರವಲ್ಲದೆ ಎಲುಬಿನಲ್ಲಿಯೂ ಐದು ಸಾವಿರ ವರ್ಷಗಳಿಂದ ಸರ್ವವ್ಯಾಪಿಯಾಗಿದ್ದು ವರ್ಗ, ವರ್ಣ, ಮತ, ಜಾತಿ, ಪಂಥ-ಪಂಗಡ ಎಂಬ ನೂರಾರು ಭೇದಗಳಿಂದ ನರಳುತ್ತಿರುವ ದೇಶ"-ಎಂದಿದ್ದಾರೆ. ಜಾತಿ ಮತಗಳು ಮಾಡಿರುವ ಹಾನಿಯ ಪರಿಣಾಮವನ್ನು ಬಲ್ಲ ಕುವೆಂಪು ಮತಭ್ರಾಂತಿಯನ್ನು ತೊಲಗಿಸದಿದ್ದರೆ ಇಲ್ಲ ನಿಜವಾದ ಪ್ರಜಾಸತ್ತೆಯನ್ನು ಸ್ಥಾಪಿಸುವುದು ಸಾಧ್ಯವಿಲ್ಲವೆಂದು ಸಾರಿದ್ದಾರೆ. ಮತವೆಂಬುದು ಅಫೀಮು ಇದ್ದಂತೆ, ಜನರನ್ನು ಮತಿಭ್ರಾಂತರನ್ನಾಗಿ ಮಾಡುವ ಸಾಧನ. ದೇವರು, ಮತ, ವರ್ಣ, ಜಾತಿಯನ್ನು ಕುವೆಂಪು ಅವರು ತಮ್ಮ ಜಲಗಾರ ನಾಟಕದಲ್ಲಿ ಕಟುವಾಗಿ ಖಂಡಿಸಿದ್ದಾರೆ.

ಮೊದಲ ಠಕ್ಕನು ಮೊದಲ ಬೆಪ್ಪನಂ ಸಂಧಿಸಲು
ಸಂಭವಿಸಿತೆಂಬರೀ ಮತ ಎಂಬ ಮತಿವಿಕಾರಂ
ದೊರೆ ಪುರೋಹಿತರ್ ಅವಳಿ ಮೊಲೆಯೂಡಿಸಲಹಿದರದಂ
ಮತದ ಮದಿರೆಯನೀಂಟಿ ಮಂಕು ಬಡಿದಿದೆ ಜನಕೆ
ಕೊನೆಯ ದೊರೆಯ ಕೊರಳಿಗಾ ಕೊನೆ ಪುರೋಹಿತನ ಕರುಳ್
ಉರುಳಾಗುವಾವರೆಗೆ ಸುಖವಿಲ್ಲ ಈ ಧರೆಗೆ !

ಧರ್ಮ ಉಗಮದ ರಹಸ್ಯವನ್ನೂ ಮುಂದೊಂದು ದಿನ ಪುರೋಹಿತರ ಕೊರಳಿಗೆ ಅದು ಉರುಳಾಗುವುದೆಂಬುದನ್ನೂ ಮಾರ್ಮಿಕವಾಗಿ ನುಡಿದಿದ್ದಾರೆ. ಹಿಂದೂ ಧರ್ಮದ ತಾರತಮ್ಯ ನೀತಿಯಿಂದ ಸಮಾಜಕ್ಕೆ ಆಗಿರುವ ಹಾನಿ ಅಪಾರವೆಂಬುದು ಕುವೆಂಪು ಅವರ ಸ್ಪಷ್ಟ ನಿಲುವಾಗಿತ್ತು.

**ವರ್ಣ ಮತ್ತು ಜಾತಿ** : ಆರ್ಯರ ಆಗಮನದೊಂದಿಗೆ ಭಾರತದಲ್ಲಿ ವರ್ಣಗಳು ಜನ್ಮ ತಳೆದವು. ಶ್ವೇತ-ದಸ್ಯುಗಳೆಂದು ಪ್ರಾರಂಭವಾಗಿ ಚತುರ್ವರ್ಣಗಳಾಗಿ ಮಾರ್ಪಾಡಾದವು. ವೃತ್ತಿಗಾಗಿ ಹುಟ್ಟಿದ ವರ್ಣಗಳು ಪ್ರಾರಂಭದಲ್ಲಿ ಆಂತರಿಕ ಚಲನೆಯನ್ನು ಹೊಂದಿದ್ದವು. ಕಾಲಕ್ರಮೇಣ ಹುಟ್ಟು ವರ್ಣವನ್ನು ನಿರ್ಧರಿಸಲ್ಪಡುವಂತಾದಾಗ, ಚಲನೆಯನ್ನು ಕಳೆದುಕೊಂಡು ಸ್ಥಿರವಾದವು. ಸಾವಿರಾರು ಜಾತಿಗಳ ಹುಟ್ಟಿಗೆ ಕಾರಣವಾದವು. ಶ್ರೇಣೀಕೃತ ಜಾತಿವ್ಯವಸ್ಥೆಯಲ್ಲಿ ಮೇಲು ಕೀಳೆಂಬ ತಾರತಮ್ಯ ಬೆಳೆಯಿತು. ವರ್ಗಗಳ ನಿರ್ಮಾತೃಗಳು ಪುರಾಣ, ಕಂದಾಚಾರಗಳನ್ನು ಸೃಷ್ಟಿಸಿ ಕೆಳವರ್ಗಗಳು ಗುಲಾಮಗಿರಿಯನ್ನು ಒಪ್ಪುವಂತೆ ಮಾಡಿದರು. ಶಿಕ್ಷಣದಿಂದ ಶೂದ್ರ ಮತ್ತು ಅಸ್ಪೃಶ್ಯರನ್ನು ದೂರವಿಟ್ಟಿದ್ದರ ಪರಿಣಾಮವಾಗಿ ವಿಚಾರಶಕ್ತಿಯನ್ನು ಕಳೆದುಕೊಂಡು ಅವರು ತಮ್ಮ ಗುಲಾಮಿ ಸ್ಥಿತಿಗೆ ಪೂರ್ವಜನ್ಮದ ಕರ್ಮವೇ ಕಾರಣವೆಂದು ನಂಬಿದರು. ಬಹುದೊಡ್ಡ ಸಮುದಾಯ ವಿಚಾರಹೀನವಾಗಿ ಅಜ್ಞಾನದ ಕತ್ತಲೆಗೆ ತಳ್ಳಲ್ಪಟ್ಟಿತು. ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಅವರು ವರ್ಣ-ಜಾತಯಿಂದಾದ ದುರವಸ್ಥೆಯನ್ನು ಕುರಿತು "ಜನರನ್ನು ನಿಸ್ಸತ್ವಗೊಳಿಸಿ ಅಸಹಾಯ ಸ್ಥಿತಿಗೆ ಇಳಿಸುವ ಪದ್ಧತಿಗಿಂತ ಹೀನವಾದುದು ಇನ್ನೊಂದು ಇರಲಾರದು" ಎಂದಿದ್ದಾರೆ. ವರ್ಣವ್ಯವಸ್ಥೆ ಜಾತಿಯ ಉಗಮಕ್ಕೆ ಕಾರಣ. ಜಾತಿಯ ಶಕ್ತಿಗಳು ಅವನ ಸಮಸ್ತವನ್ನೂ ನಿರ್ಧರಿಸುವ - ನಿಯಂತ್ರಿಸುವ

ಶಕ್ತಿಗಳು. ಮದುವೆ, ಊಟೋಪಚಾರ, ಒಡನಾಟ, ಆಚಾರ-ವಿಚಾರಗಳೆಲ್ಲವೂ ಜಾತಿಯಲ್ಲೇ ನಡೆಯುತ್ತವೆ. ಹಿಂದೂ ಓರ್ವ ತನ್ನ ಜಾತಿಯ ಹೊರಗೆ ನಿಂತು ಆಲೋಚಿಸಿದು ಇಲ್ಲವೇ ಇಲ್ಲವೆನ್ನುವಷ್ಟು ವಿರಳ. ಜಾತಿ ಹಿಂದೂ ಸಮಾಜಕ್ಕಂಟಿರುವ ಬಹು ದೊಡ್ಡ ಕಳಂಕವೆಂದು ಅಂಬೇಡ್ಕರ್ ಛಾಪಿಸಿದ್ದರು. ಇಂತಹ ಅವೈಜ್ಞಾನಿಕ ಸೃಷ್ಟಿಯಾದ ಜಾತಿಯನ್ನು ಪುರೋಹಿತ ಶಾಹಿಯು ಪೋಷಣೆ ಮಾಡುತ್ತಿದೆ. ಪುರೋಹಿತಶಾಹಿಯನ್ನು ನಾಶ ಮಾಡದ ಹೊರತು ಜಾತಿಯ ವಿನಾಶ ಸಾಧ್ಯವಿಲ್ಲ ಎಂದು ಡಾ. ಬಾಬಾಸಾಹೇಬ್ ಅಂಬೇಡ್ಕರ್ ಅಭಿಪ್ರಾಯಪಡುತ್ತಾರೆ. ಅವರು ಒಂದು ಕಡೆ "ಜಾತಿ ಎಂಬುದು ಬ್ರಾಹ್ಮಣ್ಯದ ಒಂದು ಅವತಾರವಾಗಿದೆ. ಬ್ರಾಹ್ಮಣತ್ವ ಒಂದು ವಿಷವಾಗಿ ಹಿಂದೂತ್ವವನ್ನು ಆವರಿಸಿದೆ. ಬ್ರಾಹ್ಮಣತ್ವವನ್ನು ನಾಶ ಮಾಡಿದರೆ ಹಿಂದೂತ್ವ ಬದುಕಿ ಉಳಿದೀತು"- ಎಂದು ಹೇಳಿದ್ದಾರೆ. ಅವರ ಈ ಮಾತಿನಲ್ಲಿ ಸಮಾಜದ ವಿನಾಶಕಾರಿಯಾದ ಬ್ರಾಹ್ಮಣತ್ವದ ಕ್ರೂರ ಮುಖಗಳು ಅನಾವರಣಗೊಂಡಿವೆ. ಅದೇ ಸಂದರ್ಭದಲ್ಲಿ ವರ್ಣ-ಜತಿಯ ತಾರತಮ್ಯವಿಲ್ಲದ ಹಿಂದುತ್ವದ ಬಗ್ಗೆ ಸಹಾನುಭೂತಿ ಹೊಂದಿರುವುದನ್ನು ಕಾಣಬಹುದು.

ಡಾ. ಬಾಬಾಸಾಹೇಬ್ ಅಂಬೇಡ್ಕರ್ ಅವರು ಮತಾಂತರ ಹೊಂದುವಾಗ ಜಗತ್ತಿನ ಅನೇಕ ಧರ್ಮಗುರುಗಳು ತಮ್ಮ ತಮ್ಮ ಮತಕ್ಕೆ ಬರುವಂತೆ ಆಹ್ವಾನವಿತ್ತರೂ ಅವನ್ನೆಲ್ಲಾ ಕಡೆಗಣಿಸಿ ಬೌದ್ಧಧರ್ಮ ಸ್ವೀಕರಿಸಲು ಬಹುಶಃ ಇದೇ ಕಾರಣ ಇರಬೇಕೆಂದು ಅನಿಸುತ್ತದೆ. ಬೌದ್ಧಧರ್ಮದ ಸಮಾನತೆ ಅಂಬೇಡ್ಕರ್ ಅವರಿಗೆ ಪ್ರಿಯವಾಗಿತ್ತು.

ಮಹಾಕವಿ ಕುವೆಂಪು ಹಿಂದೂಧರ್ಮದಲ್ಲಿ ಬೇರುಬಿಟ್ಟಿರುವ ಮತಕಂದಾಚಾರವನ್ನು ಅತ್ಯಂತ ಕಟುವಾಗಿ ಟೀಕಿಸಿದ್ದಾರೆ. 'ಮತ' ! ಈ ಭ್ರಾಂತಿಯಿಂದ ಲೋಕಕ್ಕೆ ಆಗಿರುವಷ್ಟು ಹಾನಿ ಮತ್ತಾವುದರಿಂದಲೂ ಆಗಿಲ್ಲ ಎಂದು ತೋರುತ್ತದೆ. ಇನ್ನು ಮುಂದೆಯಾದರೂ ನೀವೂ ಅಧ್ಯಾತ್ಮವನ್ನು ಉಳಿಸಿಕೊಂಡು ಮತ ಮತ್ತು ಅದರಿಂದ ಜನ್ಯವಾದ ಮತಭ್ರಾಂತಿ ಮತ್ತು ಮತ ಮೌಢ್ಯಗಳನ್ನು ನಿರಾಕರಿಸಿದಿದ್ದರೆ ನಿಜವಾದ ಪ್ರಜಾಸತ್ತೆಯಾಗಲಿ ಸಮಾಜವಾಗಲಿ ಸಮತಾಭಾವ ಸ್ಥಾಪನೆಯಾಗಲಿ ಎಂದೆಂದಿಗೂ ಸಾಧ್ಯವಾಗುವುದಿಲ್ಲ". ಕುವೆಂಪು ಅವರ ಈ ಮಾತಿನಲ್ಲಿ ಮತವ್ಯವಸ್ಥೆ ಮಾಡಿರುವ ಅನಾಹುತದ ಚಿತ್ರಣವಿದೆ. ಇನ್ನು ಮುಂದಾದರೂ ಬದಲಾವಣೆ ಆಗಬೇಕೆಂಬ ಕಳಕಳಿ ಇದೆ. ಮೇಲು ಕೀಳೆಂಬ ಭೇದಭಾವವನ್ನು ಹುಟ್ಟುಹಾಕಿ ಭಾರತೀಯ ಸಮಾಜವನ್ನು ಛಿದ್ರ ಮಾಡಿರುವ ಮತವೆಂಬ ಭ್ರಾಂತಿಯಿಂದ ಬಿಡುಗಡೆಯಾಗದ ಹೊರತು ಪ್ರಗತಿ ಸಾಧ್ಯವಿಲ್ಲ. ಅಂಬೇಡ್ಕರ್ ಹೇಳಿದಂತೆಯೇ ಕುವೆಂಪು ಅವರು ಮತ ಮತ್ತು ಜಾತೀಯತೆಯನ್ನು ಗಟ್ಟಿ ಮಾಡುತ್ತಿರುವುದು ಪರೋಹಿತಶಾಹಿಯೇ ಎಂದು ದೃಢವಾಗಿ ಹೇಳಿದ್ದಾರೆ. ಪುರೋಹಿತಶಾಹಿಯನ್ನು ನಾಶ ಮಾಡದ ಹೊರತು ಜಾತಿಮತಗಳನ್ನು ತೊಡೆದು ಹಾಕಲು ಸಾಧ್ಯವಿಲ್ಲವೆಂದು ಹೇಳುತ್ತಾರೆ. ಪುರೋಹಿತಶಾಹಿ ಮತ್ತು ಅದರ ನಿವಾರಣೆಯನ್ನು ಅವರು ರೂಪಕವಲ್ಲಿ ಹೀಗೆ ಹೇಳಿದ್ದಾರೆ. "ಈ ಪುರೋಹಿತಶಾಹಿ ಹುಲಿಯಂತೆ ಇದಕ್ಕೆ ಸಣ್ಣ ಪುಟ್ಟ ಕಲ್ಲನ್ನು ಜೇಬಿನಲ್ಲಿಟ್ಟುಕೊಂಡು ಹೋಗಿ ಹೊಡೆಯುತ್ತೇನೆಂದರೆ ಹುಡುಗಾಟಿಕೆಯ ಕೆಲಸವಲ್ಲ. ಅದನ್ನು ಹೊಡೆಯಬೇಕಾದರೆ ನಾವು ಮದ್ದುಗುಂಡುಗಳನ್ನೇ ತಯಾರು ಮಾಡಬೇಕು. ನಾವು ಹೇಳುವಂತಹ ಮದ್ದುಗುಂಡು ರೂಪಕವಾದದ್ದು ಅಂತ ಇಟ್ಟುಕೊಳ್ಳೋಣ. ಬಾಹ್ಯವಾಗಿಯೇ ಗುಂಡಿನಲ್ಲಿ ಹೊಡೆಯಬೇಕು ಅಂತ ಅಲ್ಲ. ಆದರೆ ವಿಚಿತ್ರ ಬೇಟೆಯಲ್ಲಿ (ಈ ಸಂದರ್ಭದಲ್ಲಿ) ಮೊದಲು ಗುಂಡು ತಗುಲಬೇಕಾದದ್ದು ಹುಲಿಯ ತಲೆಗಲ್ಲ, ನಿಮ್ಮ ತಲೆಗೇ!

ತಲೆ....ತಲೆ....ತಲೆ, ಮೊದಲು ತಲೆಯಲ್ಲಿರುವ ಮೆದುಳನ್ನು ಕ್ಲೀನ್ ಮಾಡಬೇಕು. ಅವರಿಗಲ್ಲ. ಆ ಪುರೋಹಿತ ವರ್ಗದವರಿಗಲ್ಲ. ನಿಮಗೆ ! 'ನೀವು' ಅಂತ ಹೇಳಿದೆ". ಅವರ ಈ ಮಾತು ಪುರೋಹಿತಶಾಹಿಯು ಸರ್ವವ್ಯಾಪಿಯಾಗಿರುವುದನ್ನು ಸೂಚಿಸುತ್ತದೆ. ಅದು ನಮ್ಮ ಹೊರಗೆ ಮಾತ್ರವಲ್ಲ, ನಮ್ಮೊಳಗೂ ಇದೆ. ದೃಗ್ಗೋಚರ ಪುರೋಹಿತಶಾಹಿಯನ್ನು ಗುರುತಿಸುವುದು ಸುಲಭ. ಆದರೆ ನಮ್ಮೊಳಗಿನ ಪುರೋಹಿತಶಾಹಿಯನ್ನು ಗುರುತಿಸುವುದು ಕಷ್ಟ. ಅದರ ನಿವಾರಣೆ ಇನ್ನೂ ಕಷ್ಟ. ಕುವೆಂಪು ಅವರು ಬಳಸಿರುವ ಹುಲಿ ಮತ್ತು ಕೋವಿಯ ರೂಪಕ ಅತ್ಯಂತ ಅರ್ಥಪೂರ್ಣವಾಗಿದೆ. ಉಗ್ರಪ್ರಾಣಿ ಹುಲಿ ಪುರೋಹಿತಶಾಹಿಯಾದರೆ, ಆಧುನಿಕತೆಯಿಂದ ಬಂದ ವೈಚಾರಿಕತೆಯು ಕೋವಿಯಾಗಿದೆ. ಅಂತಸ್ಥ ಮತ್ತು ಬಾಹ್ಯ ಪುರೋಹಿತಶಾಹಿಯನ್ನು ನಾಶ ಮಾಡಲು ವೈಚಾರಿಕತೆಯನ್ನು ಜಾಗೃತಗೊಳಿಸಿಕೊಳ್ಳುವುದೇ ಸೂಕ್ತ ಮಾರ್ಗವೆಂದು ಕುವೆಂಪು ಅವರು ಭಾವಿಸಿದಂತಿದೆ.

ಕುವೆಂಪು ಮತ್ತ ಅಂಬೇಡ್ಕರ್ ಹಿಂದ ಧರ್ಮದ ಲೋಪದೋಷಗಳನ್ನು, ಅದರ ಪರಿವರ್ತನೆಯ ಸಾಧ್ಯತೆಗಳನ್ನು ತೆರೆದು ತೋರಿದ್ದಾರೆ. ಹಿಂದೂ ಧರ್ಮದಲ್ಲಿರುವ ಕೆಟ್ಟ ಶಾಸ್ತ್ರಗಳ ಬಗ್ಗೆ ಇಬ್ಬರು ಕಿಡಿ ಕಾರಿದ್ದಾರೆ. ಮಹಾನ್ ಚಿಂತಕರು ಕೇವಲ ಲೋಪದೋಷಗಳನ್ನು ಎತ್ತಾಡದೆ ಅದರ ಪರವರ್ತನೆಗೆ ದಾರಿಯನ್ನು ತೋರುತ್ತಾರೆ. ಅಂಬೇಡ್ಕರ್ ಮತ್ತು ಕುವೆಂಪು ಮಹಾನ್ ಚಿಂತಕರು, ಹಿಂದೂ ಧರ್ಮವನ್ನು ಟೀಕಿಸುತ್ತಲೇ ಅದರ ಪರಿವರ್ತನೆಯನ್ನೂ ಸೂಚಿಸಿದ್ದಾರೆ. ಆದ್ದರಿಂದ ಇವರು ಧರ್ಮಸುಧಾರಕರೂ ಸಮಾಜ ಪರಿವರ್ತಕರೂ ಆಗಿದ್ದಾರೆ. ಅಂಬೇಡ್ಕರ್ "ಧರ್ಮ ಅಗತ್ಯವೆಂದು ನನಗೆ ಮನವರಿಕೆಯಾಗಿದೆ. ಈ ಧರ್ಮದಲ್ಲಿ ಸುಧಾರಣೆಗಳಾಗಬೇಕು....ಸುಧಾರಿತ ಧರ್ಮದಲ್ಲಿ ಈ ಮುಂದೆ ಹೇಳುವ ಅಂಶಗಳು ಪ್ರಧಾನವಾಗಿರಬೇಕು. (೧) ಸಮಸ್ತ ಹಿಂದೂಗಳಿಗೆ ಅನ್ವಯಿಸುವ ಹಾಗೂ ಸಮಸ್ತ ಹಿಂದೂಗಳಿಗೆ ಸಮ್ಮತವಾದ ಒಂದೇ ಒಂದು ಪ್ರಮಾಣೀಭೂತವಾದ ಧರ್ಮಗ್ರಂಥವಿರಬೇಕು. (೨) ಹಿಂದೂಗಳಲ್ಲಿರುವ ಪೌರೋಹಿತ್ಯ ಅಥವಾ ಧರ್ಮಾಧಿಪತ್ಯವನ್ನು ರದ್ದುಪಡಿಸುವುದು ಲೇಸು. ಆದರೆ ಇದು ಅಸಾಧ್ಯವೆಂದು ತೋರುವುದರಿಂದ, ಕನಿಷ್ಠ ಪಕ್ಷಕ್ಕೆ ಅದು ಅನುವಂಶೀಯವಾಗಿರುವುದನ್ನಾದರೂ ನಿಷೇಧಿಸಬೇಕು. ಪುರೋಹಿತ ಅಥವಾ ಧರ್ಮಾಧಿಪತಿ ಯಾಗಲು ಪ್ರತಿಯೊಬ್ಬ ಹಿಂದುವಿಗೂ ಸಮಾನವಾದ ಹಕ್ಕು ಇರತಕ್ಕದ್ದು. (೩) ಸರಕಾರೀ ಸನ್ನದನ್ನು ಪಡೆಯದೆ ಇದ್ದವರು ನಡೆಸುವ ಧಾರ್ಮಿಕ ಕಾರ್ಯ ಶಾಸನಬದ್ಧವಲ್ಲವೆಂದು ಸಾರಿ, ಸರಕಾರವು ಅಂಥ ಜನರನ್ನು ದಂಡಿಸತಕ್ಕದ್ದು. (೪) ಧರ್ಮಾಧಿಪತಿಯು ಸರಕಾರಿ ಸೇವಕನಾಗಬೇಕು. ಮತ್ತು ಇತರ ಪ್ರಜೆಗಳಂತೆ ದೇಶದ ಕಾನೂನುಗಳಿಗೆ ಬದ್ಧನಾಗಿರಬೇಕು. ನೀತಿ, ನಂಬಿಕೆಗಳು, ಪೂಜೆ ಮೊದಲಾದ ವಿಷಯಗಳಲ್ಲಿ ಸರಕಾರ ಅವನನ್ನು ವಿಚಾರಿಸಿ ಶಿಸ್ತಿನ ಕ್ರಮ ಕೈಗೊಳ್ಳಲು ಸಂಪೂರ್ಣ ಅವಕಾಶವಿರತಕ್ಕದ್ದು. (೫) ಐ.ಸಿ.ಎಸ್. ಅಧಿಕಾರಿಗಳ ಸಂಖ್ಯೆಯನ್ನು ಸರಕಾರದ ಅವಶ್ಯಕತೆಗೆ ಅನುಸಾರವಾಗಿ ಮಿತಗೊಳಿಸುವಂತೆ ಧರ್ಮಾಧಿಪತಿಗಳ ಸಂಖ್ಯೆಯನ್ನು ಅದೇ ಮೇರೆಗೆ ಮಿತಗೊಳಿಸಬೇಕು. ಇದು ತುಂಬ ತೀವ್ರ ಬದಲಾವಣೆಯೆನಿಸಬಹುದು. ಆದರೆ ನನ್ನ ದೃಷ್ಟಿಯಿಂದ ಇದರಲ್ಲಿ ಕ್ರಾಂತಿಕಾರಕವಾದುದೇನೂ ಇಲ್ಲ." ಹಿಂದೂ ಧರ್ಮ ಬದಲಾವಣೆ ಹೊಂದಲು ಅದನ್ನು ಭಾರತೀಯರೆಲ್ಲರೂ ಮೆಚ್ಚಿಕೊಳ್ಳುವಂತಾಗಲು ಅಂಬೇಡ್ಕರ್ ಅತ್ಯಂತ ಸರಳವಾದ ಸೂಚನೆಯನ್ನು ನೀಡಿದ್ದಾರೆ. ಇದು ತುಂಬ ಮಹತ್ವದ್ದೆನಿಸುತ್ತದೆ.

ಜಾತಿ ಎಂಬುದು ಹಿಂದೂ ಸಮಾಜಕ್ಕೆ ಅಂಟಿದ ಬಹು ದೊಡ್ಡ ಪಿಡುಗು. ಈ ಜಾತಿ

ಬ್ರಾಹ್ಮಣತ್ವದ ಅವಿಭಾಜ್ಯ ಅಂಗ. ಬ್ರಾಹ್ಮಣತ್ವವೇ ಜಾತೀಯತೆಯನ್ನು ಪೋಷಿಸಿಕೊಂಡು ಬಂದಿದೆ. ನೇರವಾದ ಅರ್ಥದಲ್ಲಿ ಹಿಂದೂ ಸಮಾಜದ ಮೇಲುಕೀಳು ಭಾವನೆಗೆ ಬ್ರಾಹ್ಮಣ್ಯವೇ ಮೂಲ ಕಾರಣ. ಅಂಬೇಡ್ಕರ್ ಅತ್ಯಂತ ಕಠೋರವಾಗಿ ಬ್ರಾಹ್ಮಣ್ಯವನ್ನು ನಾಶ ಮಾಡಲು ಹೇಳುತ್ತಾರೆ. 'ಜಾತಿಯೆಂಬುದು ಬ್ರಾಹ್ಮಣತ್ವದ ಒಂದು ಅವತಾರವೆ ಆಗಿದೆ. ಬ್ರಾಹ್ಮಣತ್ವ ಒಂದು ವಿಷವಾಗಿ ಹಿಂದೂತ್ವವನ್ನು ಆವರಿಸಿದೆ. ಅಂಬೇಡ್ಕರ್ ಅವರ ವಿಚಾರಧಾರೆಯನ್ನು ಅರ್ಥೈಸಿದರೆ ಅವರು ಹಿಂದೂಧರ್ಮದ ವಿರೋಧಿಗಳಲ್ಲ, ಹಿಂದೂಧರ್ಮದಲ್ಲಿರುವ ಕೆಟ್ಟ ಆಚರಣೆಗಳು ಮತ್ತು ಪ್ರಗತಿಗೆ ಮಾರಕವಾಗುವ ವಿಚಾರಗಳನ್ನು ವಿರೋಧಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಅದಕ್ಕೆ ಇರಬೇಕು ಜಗತ್ತಿನ ಬೇರೆ ಬೇರೆ ಧರ್ಮೀಯರು ಅಂಬೇಡ್ಕರ್ ಅವರನ್ನು ತಮ್ಮ ತಮ್ಮ ಧರ್ಮಕ್ಕೆ ಮತಾಂತರ ಹೊಂದಲು ಕರೆದಾಗಲೂ ಯಾವ ಧರ್ಮವನ್ನೂ ಒಪ್ಪದೆ ಬೌದ್ಧಧರ್ಮ ಸ್ವೀಕರಿಸಿದ್ದು ಅನಿಸುತ್ತದೆ.

ಕುವೆಂಪು ಭಾರತೀಯ ಪುರಾಣ ಮತ್ತು ಇತಿಹಾಸಗಳನ್ನು ಮುರಿದು ಕಟ್ಟಿದ ಕವಿ. ಧರ್ಮದ ಹಳೆಯ ತತ್ವಗಳನ್ನು ಸಾರಾಸಗಟಾಗಿ ತಿರಸ್ಕರಿಸಿದರೆ ಸಮಾಜ ಮತ್ತು ಸಂಸ್ಕೃತಿಗೆ ತುಂಬಲಾರದ ನಷ್ಟವೆಂದು ಭಾವಿಸಿದ್ದರು. ಹಳೆಯ ತತ್ವಗಳನ್ನೆಲ್ಲಾ ತಿರಸ್ಕರಿಸಿದರೆ ಪರ್ಯಾಯವನ್ನು ಕೊಡುವುದು ಅತ್ಯಂತ ಕಷ್ಟ. ಆದರೆ ಹಳೆಯದನ್ನು ಅಗತ್ಯಗಳಿಗನುಗುಣವಾಗಿ ಪರಿಷ್ಕರಿಸುವುದು ಸುಲಭ. ಇದರಿಂದ ಪರಿಷ್ಕೃತ ತತ್ವಗಳು ಜನತೆಗೆ ಬೇಗ ತಲುಪುತ್ತವೆ ಅಲ್ಲದೆ ಪರಂಪರೆಯ ಉಳಿಯುತ್ತದೆ. ಕಾಲಕ್ಕನುಗುಣವಾದ ತತ್ವವು ದೊರತಂತಾಗುತ್ತದೆ. "ರಾಮಾಯಣ ಮಹಾಭಾರತ ಇತರ ಯಾವುದೇ ಕತೆಗಳಾಗಿರಲಿ ಅವನ್ನು ಬಿಸಾಡುವುದಿಲ್ಲ, ಅದನ್ನು ಕರಗಿಸಿ ನಮ್ಮ ಹೊಸ ಧ್ಯೇಯ ಹೊಸ ಇಷ್ಟಗಳಿಗನುಸಾರವಾಗಿ ಅವುಗಳನ್ನು ನೀವು ನಿಮ್ಮ ಸಾಹಿತ್ಯದಲ್ಲಿ ಎರಕ ಹೊಯ್ಯಬೇಕು. ಏಕೆಂದರೆ ಆ ಎರಕಗಳ ಮೂಲಕ ಆ ಕಥಾವ್ಯಕ್ತಿಗಳ ಮೂಲಕ ನವು ನಿಮ್ಮ ಧ್ಯೇಯಗಳನ್ನು ಪ್ರಸಾರ ಮಾಡಲು ತುಂಬಾ ಸುಲಭವಾಗುತ್ತದೆ." ಎಂದಿದ್ದಾರೆ. ಶ್ರೀ ರಾಮಾಯಣ ದರ್ಶನಂ ಮತ್ತು ಶೂದ್ರ ತಪಸ್ವಿಯಲ್ಲಿ ತಾವು ಹೇಳಿದ್ದನ್ನು ಸಾಧಿಸಿ ತೋರಿದ್ದಾರೆ. ವಾಲ್ಮೀಕಿ ರಾಮಾಯಣ 'ಶಂಭೂಕವಧಾ' ಪ್ರಸಂಗವು ವರ್ಣವ್ಯವಸ್ಥೆಯನ್ನು, ಉಚ್ಚನೀಚ ಭಾವವನ್ನು ಗಟ್ಟಿಗೊಳಿಸಲು ಸೃಷ್ಟಿಯಾದುದಾಗಿದೆ. ಇದನ್ನು ಜ್ಞಾನದ ಮಹತ್ವವನ್ನು ಸಾರುವ ಪ್ರಸಂಗವಾಗಿ ಕುವೆಂಪು ಅವರು ಪರಿಷ್ಕರಿಸಿದ್ದಾರೆ. ಶೂದ್ರನೋರ್ವ ತಪಸ್ಸು ಮಾಡುವುದು ಧರ್ಮದ್ರೋಹವೆಂದು ಭಾವಿಸುವ ಬ್ರಾಹ್ಮಣನಿಗೆ ಶ್ರೀರಾಮಚಂದ್ರ ಧರ್ಮದ್ರೋಹದ ಅರ್ಥವನ್ನು ಮನವರಿಕೆ ಮಾಡಿಕೊಡುತ್ತಾನೆ. "ಯಾರಾದರೇನಂತೆ, ತಪಸ್ಸು ಮಾಡುವವರೆಲ್ಲರೂ ಪೂಜ್ಯರ" ಎಂದು ಹೇಳುವುದರ ಮೂಲಕ 'ತಪಸ್ಸು' ಎಂಬುದು ಜ್ಞಾನ, ಇಲ್ಲಿ ಅವರು ಯಾವ ವರ್ಣದಲ್ಲಿದ್ದರೂ ಜ್ಞಾನಿ ಗೌರವಕ್ಕೆ ಅರ್ಹನು ಎಂದು ಇತಿಹಾಸ ಕಾಲದ ತತ್ವವನ್ನು ಪರಿಷ್ಕರಿಸಿದ್ದಾರೆ. ನಾಟಕದ ಕಡೆಯಲ್ಲಿ ಬ್ರಾಹ್ಮಣ-ಬ್ರಾಹ್ಮಣ ಕುಮಾರರಿಬ್ಬರೂ ಶಂಭೂಕ ಮಹರ್ಷಿಗೆ ನಮಸ್ಕರಿಸುತ್ತಾರೆ. ಹುಟ್ಟಿನ ಆಧಾರದ ಮೇಲೆ ಪರಿಗಣಿಸಲಾಗುತ್ತಿದ್ದ ಶ್ರೇಷ್ಠತೆಯನ್ನು ತಪ್ಪಿಸಿ ಜ್ಞಾನದ ಆಧಾರದ ಮೇಲೆ ಪರಿಗಣಿಸಬೇಕೆಂದು ತಿದ್ದಿರುವುದು ಯುವ ಸಮುದಾಯಕ್ಕೆ ತೋರಿದ ದಾರಿದೀವಿಗೆಯಾಗಿದೆ.

ಶ್ರೀ ರಾಮಾಯಣ ದರ್ಶನಂ ಒಂದು ಮೇರುಕೃತಿ. ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ ತತ್ವಗಳ ಸಾಕಾರರೂಪ. ವಾಲ್ಮೀಕಿ ರಾಮಾಯಣದಲ್ಲಿ ನಿರ್ಲಕ್ಷ್ಯಕ್ಕೊಳಗಾಗಿದ್ದ ಮಂಥರೆ, ಊರ್ಮಿಳೆ ಮೊದಲಾದ ಚಿಕ್ಕ ಪುಟ್ಟ ಪಾತ್ರಗಳು ಕುವೆಂಪು ಅವರ ಶ್ರೀ ರಾಮಾಯಣ ದರ್ಶನಂನಲ್ಲಿ ಜೀವ

ತಳೆದು ನಿಲ್ಲುತ್ತವೆ. ಶೋಷಿತರ ಅಪಮಾನಿತರ ಮೇಲೆ ಕುವೆಂಪು ಅವರಿಗೆ ಅಪಾರ ಕರುಣೆ. ಅವರ ಈ ಕರುಣಾದೃಷ್ಟಿ ವೈಚಾರಿಕ ಪ್ರಜ್ಞೆ ಮಹಾಕೃತಿಯಲ್ಲಿ ಅತ್ಯಂತ ಎಚ್ಚರಿಕೆಯಿಂದ ಕ್ರಿಯಾಶೀಲವಾಗಿದೆ. ಆಧುನಿಕ ಯುಗಕ್ಕೆ ಅಗತ್ಯವಾಗಿ ಬೇಕಾಗಿರುವ ಅಹಿಂಸೆ, ಸರ್ವಸಮಾನತೆಯ ತತ್ವಗಳು ಈ ಕೃತಿಯ ಪ್ರಾರಂಭದಿಂದಲೇ ಮೂಡಿಬಂದಿವೆ. ದಶರಥನ ಯಾಗ ಅಂಹಿಸೆಯ ನೆಲೆಯಿಂದ ಪ್ರಾರಂಭವಾಗುತ್ತದೆ. ಈ ಯಾಗಕ್ಕೆ ಪ್ರಜೆಗಳ ಬಡವರ ಆಶೀರ್ವಾದವೇ ದೇವರ ಆಶೀರ್ವಾದ. ಜಾತಿಭೇದವಿಲ್ಲದೆ ದೇಶದ ಸಮಸ್ತ ಜನರು ಬಂದು ನೆರೆಯುತ್ತಾರೆ. ಕಾವ್ಯ ಈ ವಿಶಾಲದೃಷ್ಟಿಕೋನದಿಂದ ಬೆಳೆದು ಪೂರ್ಣದೃಷ್ಟಿಯಲ್ಲಿ ಪರ್ಯಂತಗೊಳ್ಳುತ್ತದೆ. ಮನುಷ್ಯ ಅಲ್ಪವಾದುದನ್ನು ಕ್ಷಯಿಸಿಕೊಂಡರೆ ಪೂರ್ಣತ್ವ ಪ್ರಾಪ್ತವಾಗುತ್ತದೆ. ಅಲ್ಪದಿಂದ ಮಹತ್ತಿನ ಕಡೆಗೆ, ಪೂರ್ಣತ್ವದ ಕಡೆಗಿನ ಚಲನೆಯೇ ಶ್ರೀ ರಾಮಾಯಣ ದರ್ಶನಂ. ಕಡೆಯಲ್ಲಿ ರಾಮನಾಡುವ ಮಾತಿನಲ್ಲಿ ಇದು ಅಭಿವ್ಯಕ್ತಗೊಂಡಿದೆ.

‘ವೈರಿಯಾದೊಡೆ ಮನಗೆ ಸಮಂ
ಆ ದಿವಂಗತ ದೈತ್ಯನತುಳ ವೀರ್ಯದೋಳಾತ್ಮ
ಸತ್ವದೊಳ್ ನಿರ್ಭೀತಿಯೊಳ್ ತೇಜದೊಳ್, ಮತ್ತೆ
ಚಿತ್ತಶುದ್ಧಿಯೊಳಂತೆ ಚಿತ್‌ತಪಸ್ ಶಕ್ತಿಯಲಿ।
ಯುದ್ಧದೊಳ್ ಗೆಲ್‌ಸೊಲ್ಲಳೇನ್? ಪರಾಕ್ರಮಮಲ್ತೆ
ಪುರುಷಾರ್ಥಮಾದೃಷ್ಟಿಯಿಂದಸುರರಾಜನಂ
ಮೀರ್ದಕಲಿಗಳ ನಿನ್ನೆಗರಿಯದೀ ಸೃಷ್ಟಿಮೇಣ್
ವಿಧಿ ಕಲ್ಪನಾದೃಷ್ಟಿ’-

ಕಾವ್ಯದುದ್ದಕ್ಕೂ ಎಲ್ಲಿಯೂ ವರ್ಣಧರ್ಮಪಾಲನೆಯಾಗಲೀ ಸಂಕುಚಿತ ಭಾವಗಳಾಗಲಿ ಸುಳಿಯುವುದಿಲ್ಲ. ಅಹಿಂಸೆ-ಸಮಾನತೆಯಿಂದ ಪ್ರಾರಂಭವಾಗಿ ಪೂರ್ಣದೃಷ್ಟಿಯಲ್ಲಿ ಪರ್ಯಾವಸಾನವಾಗುತ್ತದೆ.

ಡಾ. ಬಾಬಾಸಾಹೇಬ ಅಂಬೇಡ್ಕರ್, ಅವರ ಕಿರಿಯ ಸಮಕಾಲೀನ ಶ್ರೇಷ್ಠ ಲೇಖಕ ಕುವೆಂಪು ಅವರ ವಿಚಾರಧಾರೆಯನ್ನು ತೌಲನಿಕವಾಗಿ ನೋಡಿದಾಗ ಇಬ್ಬರಲ್ಲಿಯೂ ಇರುವ ಸೌಮ್ಯ ವಿಸ್ಮಯಕಾರಿಯಾಗಿದೆ. ಧರ್ಮ, ಮತ, ವರ್ಣ, ಜಾತಿ, ಇವುಗಳನ್ನು ಕುರಿತು ಹರಿಸಿದ ಚಿಂತನೆಗಳು ಒಂದೇ ಬಗೆಯದ್ದಾಗಿದೆ. ಜಾಗತೀಕರಣದ ಇಂದಿನ ಕಾಲದಲ್ಲಿ ಇವರಿಬ್ಬರ ವಿಚಾರಧಾರೆ ಇಂದಿನ ಯುವಜನರಿಗೆ ದಾರಿದೀಪವಾಗಬಲ್ಲವಾಗಿವೆ.

□

ಡಾ. ಸಣ್ಣರಾಮ
ಪ್ರವಾಚಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ

# ಜೀಶಂಪ ಕತೆಗಳು

ಡಾ. ಎಂ. ಶಂಕರ್

ಡಾ. ಜೀರಹಳ್ಳಿ ಶಂಕರೇಗೌಡ ಪರಮಶಿವಯ್ಯ (೧೯೩೩-೧೯೯೫) ಅವರು ಕರ್ನಾಟಕ ಜಾನಪದ ವಿಜ್ಞಾನ ಕ್ಷೇತ್ರದಲ್ಲಿ 'ಜಾನಪದ ಜಂಗಮ' ಎಂದೇ ಪ್ರಸಿದ್ಧರಾದವರು. ಆ ಕ್ಷೇತ್ರದಲ್ಲಿ ಅವರು ಮಾಡಿರುವ ಸಾಧನೆಯ ಹಿರಿತನದಲ್ಲಿ ಅವರ ಇತರೆ ಕೆಲಸಗಳು ಮುಚ್ಚಿಹೋಗಿವೆ. ಪರಮಶಿವಯ್ಯನವರು ಆರಂಭದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಕಾವ್ಯ, ಕತೆ, ನಾಟಕ, ಪ್ರಬಂಧ, ಜೀವನ ಚರಿತ್ರೆ ಇತ್ಯಾದಿ ಸಾಹಿತ್ಯ ಪ್ರಕಾರಗಳಲ್ಲಿ ಹಲವು ಕೃತಿಗಳನ್ನು ಪ್ರಕಟಿಸಿದ್ದಾರೆ. ಕತೆಗಾರರಾಗಿ ಒಂದೆರಡು ಕಥಾಸಂಕಲನವನ್ನೂ ಪ್ರಕಟಿಸಿದ್ದಾರೆ. ತಾವು ಬರೆದ ಏಳು ಕತೆಗಳನ್ನು ವಿದ್ಯಾರ್ಥಿಯಾಗಿದ್ದಾಗಲೇ 'ಕಾವಲುಗಾರ ಮತ್ತು ಇತರ ಕತೆಗಳು' (೧೯೫೬) ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದ್ದಾರೆ. ಎರಡನೆಯದಾದ 'ಮಬ್ಬು ಜಾರಿದ ಕಣಿವೆಯಲ್ಲಿ' (೧೯೬೦) ಬಹಳ ಮಂದಿಯ ಕೈ ಸೇರಲಿಲ್ಲವೆಂದು ಮರುಪ್ರಕಟಣೆ (೧೯೭೪) ಯಲ್ಲಿ ಅವರ ಜೊತೆಯಲ್ಲಿ ಮೊದಲ ಕಥಾಸಂಕಲನ ಮತ್ತು 'ಕಾಡು ಗಿಡಗಳು' ಎಂಬ ಒಂದು ಬಿಡಿಗತೆಯನ್ನೂ ಸೇರಿಸಿಕೊಂಡಿದ್ದಾರೆ. ಮೊದಲನೆಯ ಸಂಕಲನದ ಕೊನೆಯ ಕತೆ 'ಮಾದನ ಮನೆ'ಯನ್ನು 'ಮೇದರಕಲ್ಲು' ಪ್ರಬಂಧ ಸಂಕಲನಕ್ಕೆ ಸೇರಿಸಿದ್ದಾರೆ. ಜೀಶಂಪ ಅವರ ಕತೆಗಳು ಎಂದರೆ ಈಗಿನ ಸ್ವರೂಪದಲ್ಲಿರುವ 'ಮಬ್ಬು ಜಾರಿದ ಕಣಿವೆ'ಯಲ್ಲಿ ಕೃತಿ ಮಾತ್ರ.

ಜೀಶಂಪ ಅವರ ಹದಿನೈದೂ ಕತೆಗಳ ಸಮಾನ ಅಂಶವೆಂದರೆ ಅವುಗಳೆಲ್ಲವೂ ಗ್ರಾಮೀಣ ಜನರ ಬದುಕಿಗೆ ಸಂಬಂಧಿಸಿದವುಗಳಾಗಿರುವುದು. ಈ ಮೂಲಕ ಅವರು ಗ್ರಾಮೀಣ ಜನರ ಬದುಕಿನ ಬಗೆಗೆ ತಮ್ಮ ಕಳಕಳಿಯನ್ನು ವ್ಯಕ್ತಪಡಿಸಿದಂತೆ ಆಗಿದೆ. ಇದು ಆಕಸ್ಮಿಕವೋ ಅಥವಾ ಕೇವಲ ಸೃಜನಾತ್ಮಕವೋ ಆಗಿಲ್ಲ. ಮುಂದೆ ತಮ್ಮ ಇಡೀ ಬದುಕನ್ನು ಗ್ರಾಮೀಣ ಜನತೆಗೆ ಸೇರಿದುದಾದ

ಜಾನಪದ ಅಧ್ಯಯನಕ್ಕೆ ತೊಡಗಿಸಿಕೊಂಡುದರಲ್ಲಿ ಈ ಕಳಕಳಿಯ ಇನ್ನೊಂದು ಮುಖ ಕರ್ನಾಟಕದ ಜಾನಪದ ವಿದ್ವಾಂಸರು, ವಿದ್ಯಾರ್ಥಿಗಳು, ಆಸಕ್ತರಿಗೆಲ್ಲಾ ತಿಳಿಯುವಂತಾಗಿದೆ. ಅವರ 'ಬುಡ ಕಡಿದ ಮೇಲೆ' ಕತೆಯ ನಿರೂಪಕ ಪಾತ್ರ ಹೇಳುವ 'ಹಳ್ಳಿಗರ ಕಥೆಗಳನ್ನು ಕೇಳುವುದೆಂದರೆ ನನಗೆ ಬಾಹ್ಯ ಪ್ರಪಂಚವೇ ಮರೆತುಹೋಗುತ್ತದೆ' ('ಮಬ್ಬು ಜಾರಿದ ಕಣಿವೆಯಲ್ಲಿ' ಪು. ೧೭೯) ಎಂಬ ಮಾತು ಈ ದೃಷ್ಟಿಯಿಂದ ಗಮನಾರ್ಹವೆನಿಸುತ್ತದೆ.

ಈ ಕತೆಗಳಲ್ಲಿನ ಗ್ರಾಮೀಣ ಪರಿಸರ ನಿರ್ದಿಷ್ಟವಾಗಿ ಕತೆಗಾರರ ಹುಟ್ಟೂರಾದ ಮಂಡ್ಯದ ಜೀರಹಳ್ಳಿಯ ಸುತ್ತಮುತ್ತಲಿನ ಪ್ರದೇಶವಾಗಿದೆ. ಅದು ಈ ಕತೆಗಳಿಗೆ ಸಾಂಸ್ಕೃತಿಕ ಮಹತ್ವವನ್ನು ತಂದುಕೊಟ್ಟಿದೆ. ಮಾಯಸಂದ್ರ ಇತ್ಯಾದಿ ಊರುಗಳ ವಿವರಗಳು ಕತೆಗಳಲ್ಲಿ ಬರುತ್ತವೆ. ಆದಿಚುಂಚನಗಿರಿ, ಬೆಟ್ಟದ ಪುರದಂಥ ಸಾಂಸ್ಕೃತಿಕ ಕೇಂದ್ರಗಳು ಎರಡು-ಮೂರು ಕತೆಗಳಿಗೆ ಹಿನ್ನೆಲೆಯಾಗಿವೆ. ದಳವಾಯಿಕೆರೆ, ಕರಿಕಲ್ಲುಗುಡ್ಡ (ಪು.ತಿ.ನ. ಅವರ 'ಯದುಗಿರಿಯ ಮೌನ ವಿಕಾಸ'ದಲ್ಲಿ ಶಮ-ದಮಗಳಿಂದ ಕೂಡಿದುದಾಗಿ ಚಿತ್ರಣಗೊಂಡುದು) ಅರ್ಕಾವತಿ ನದಿ ಇತ್ಯಾದಿ ಪ್ರಾಕೃತಿಕ ವಿವರಗಳೆಲ್ಲ ಜೀವಂತವಾಗಿ ಕತೆಗಳಲ್ಲಿ ಪ್ರವೇಶಿಸಿವೆ.

ಗ್ರಾಮಜೀವನದಲ್ಲಿಯೂ ದುಡಿವ ಮತ್ತು ಬಡತನದಲ್ಲಿ ಬೇಯುವ ಜನರ ಜೀವನ ಜೀಶಂಪ ಅವರ ಹೆಚ್ಚಿನ ಕತೆಗಳಲ್ಲಿ ರೂಪು ತಳೆದಿವೆ. ತುತ್ತು ಅನ್ನಕ್ಕಾಗಿ ಜೀತವನ್ನೇ ಅಪ್ಪುವ ರಾಮಜ್ಜ, ಎರಡು ಗುಂಪುಗಳ ಇಕ್ಕುಳದಲ್ಲಿ ಸಿಕ್ಕಿರುವ ತುಂಡುಗಡ್ಡೆಯ ಸಣ್ಣ ರೈತ ಗಾಮ, ಮುಪ್ಪಿನಲ್ಲಿಯೂ ದುಡಿದು ಬದುಕುವ ಗೌರಿಗ ಸಿಳ್ಳ, ಕೊರೆವ ಚಳಿಯಲ್ಲಿಯೂ ಹೊಲ ಕಾಯುವ ಮುದುಕ ರಂಗ, ರಸ್ತೆಯ ಕೂಲಿ ಕೆಲಸ ಮಾಡುವ ರಂಗಣ್ಣ-ಕೆಂಚಿ ದಂಪತಿಗಳು, ಹೊಲಗದ್ದೆಗಳಲ್ಲಿ ಅವರಿವರ ಮನೆಯಲ್ಲಿ ದುಡಿಯುವವನಾಗಿ-ಇವರೇ ಹೆಚ್ಚಿನ ಕತೆಗಳ ನಾಯಕ, ನಾಯಿಕೆಯರು. ಅಂದರೆ ಗ್ರಾಮೀಣರಲ್ಲಿಯೂ ದುಡಿಯುವವರ ಬಗೆಗೆ, ಅವರ ಕಷ್ಟಗಳ ಬಗೆಗೆ ಕತೆಗಾರರ ಮನಸ್ಸು ತುಡಿದಿದೆ.

'ಮಬ್ಬು ಜಾರಿದ ಕಣಿವೆ'ಯಲ್ಲಿ ಕತೆ ಜೀಶಂಪ ಅವರ ಸಮಗ್ರ ಕಥಾಸಂಕಲನಕ್ಕೆ ಶೀರ್ಷಿಕೆಯಾಗಿ ನಾಯಕ ಸ್ಥಾನದಲ್ಲಿರುವುದರಿಂದ ಸಹಜವಾಗಿಯೇ ವಿಮರ್ಶಕರ ಲಕ್ಷ್ಯ ಸೆಳೆದಿದೆ. ಜೀಶಂಪ ಕತೆಗಳನ್ನು ವಿಮರ್ಶಿಸಿರುವ ಎಲ್ಲರೂ ಅದರ ಕುರಿತು ಚರ್ಚಿಸಿದ್ದಾರೆ. ದುಡಿವ ಜನರಿಗೆ ಸಂಬಂಧಿಸಿದಂತೆ ಭಾರತ ದೇಶದಲ್ಲಿ ಬಹುಕಾಲದಿಂದಲೂ ರೂಢಿಯಲ್ಲಿದ್ದು ಈಗಲೂ ಪಳೆಯುಳಿಕೆಯಾಗಿ ಇರುವ ಜೀತವೆಂಬ ಅನಿಷ್ಟ ಪದ್ಧತಿ ಈ ಕತೆಯ ಕೇಂದ್ರದಲ್ಲಿದೆ. ತನ್ನ ಬದುಕಿನ ಬಹುಭಾಗವನ್ನು ಜೀತದಲ್ಲಿಯೇ ಕಳೆದು, ತನ್ನ ಮಕ್ಕಳಿಗೂ ಅದರ ಉರುಳು ಹಾಕಿದುದಲ್ಲದೆ ಮೊಮ್ಮಗನನ್ನೂ ಆ ಕೂಪಕ್ಕೆ ತಳ್ಳುವ ಹವಣಿಕೆಯಲ್ಲಿದ್ದ ಮನುಷ್ಯನ ಅವಿವೇಕದ ಮಬ್ಬು ಜಾರಿ ಆತ ಜೀತವಿಮುಕ್ತಿಯ ಬೆಳಕಿನೆಡೆಗೆ ಮೊಮ್ಮಗನನ್ನು ಕೈ ಹಿಡಿದು ನಡೆಸುವುದು ಅದರ ವಸ್ತು. ಜೀತಪದ್ಧತಿಯನ್ನು ಕುರಿತು ವಿವೇಚಿಸುವವರು ಸಾಮಾನ್ಯವಾಗಿ ಕಾಣುವ ಒಂದು ಮುಖ ಧಣಿಗಳ ಶೋಷಣೆ, ಕ್ರೌರ್ಯ. ಹೆತ್ತು ಮಕ್ಕಳನ್ನು ತಾವೇ ಜೀತಕ್ಕೆ ನೂಕುವ ಅಜ್ಞಾನದ ಇನ್ನೊಂದು ಮುಖವನ್ನು ಈ ಕತೆ ಪರಚಯಿಸುತ್ತದೆ. ತಂದೆ-ತಾಯಿ ಇಲ್ಲದ ತಬ್ಬಲಿಯಾದ ರಾಮಜ್ಜ ಚಿಕ್ಕ ವಯಸ್ಸಿನಲ್ಲಿ ಯಾರೋ ತಂದು ಸೇರಿಸಿದ ಜೀತದಲ್ಲಿ ಇಪ್ಪತ್ತು-ಮೂವತ್ತು ವರ್ಷ ಕಳೆದವನು. ಆತನಿಗೆ ಅದು ಬದುಕುವ ಸರಿದಾರಿ. ಜೀತ ಅವನಲ್ಲಿ

ಸವಿನೆನಪಾಗಿ, ಜೀತದ ಮನೆಯ ಬಗೆಗೆ ಕೃತಜ್ಞತೆಯನ್ನು ತುಂಬಿದೆ. ಆದ್ದರಿಂದ ಅವನು ತನ್ನ ಇಬ್ಬರೂ ಮಕ್ಕಳನ್ನು ಜೀತಕ್ಕೆ ಸೇರಿಸಿದ್ದಾನೆ. ಈಗ ತನ್ನ ಮೊಮ್ಮಗನನ್ನೂ ಜೀತಕ್ಕೆ ಸೇರಿಸಲು, ಮೊದಲು ತಾನು ಜೀತವಿದ್ದ ಮನೆಗೆ ಕರೆತಂದಿದ್ದಾನೆ. ಅವನ ನಿಲುವನ್ನು ಬದಲಾಯಿಸಲು ಯಾರಿಗೂ ಸಾಧ್ಯವಿಲ್ಲ. ಆ ಬಾಲಕನ ತಾಯಿಯ ಮಾತು ಮತ್ತು ಅಳು ಆತನ ಅಂತಃಕರಣವನ್ನು ತಟ್ಟುವುದಿಲ್ಲ. ಆತ ಮೊಮ್ಮಗನಿಗೆ ಸುಳ್ಳಿನ ಮೂಲಕ ಜೀತಗಾರಿಕೆಯ ಬಗೆಗೆ ಸುಂದರ ಕಲ್ಪನೆಯನ್ನು ಕಟ್ಟಿಕೊಡಲು ಪ್ರಯತ್ನಿಸುತ್ತಾನೆ. ಆದರೆ ಆ ಕಲ್ಪನೆ ಬಾಲಕನನ್ನು ಆಕರ್ಷಿಸುವುದಿಲ್ಲ. ಬಾಲಕನ ಮನಸ್ಸನ್ನು ಊರು, ತಾಯಿ ಆಕ್ರಮಿಸಿಕೊಂಡಿದ್ದಾರೆ. ರಾಮಜ್ಜನನ್ನು-ಅವನಂಥ ಜೀತಗಾರರನ್ನು ಪ್ರತಿಮಿಸುವ ನಾಯಿ ರಾಮಜ್ಜನ ಪರಿವರ್ತನೆಗೆ ಚಾಲನೆ ನೀಡುತ್ತದೆ. ಅದು, ತಾನು ಜೀತವಿದ್ದಾಗ ತನ್ನೊಡನಾಡಿಯಾಗಿದ್ದ ನಾಯಿ 'ಕೆಂದ'ನನ್ನು ಒಂದು ರಾತ್ರಿ ಕಿರುಬ ಎಳೆದುಕೊಂಡು ಹೋದುದನ್ನು ನೆನಪಿಸುತ್ತದೆ. ಗೂಗೆಯ ಕೂಗು ಆತನನ್ನು ವಿಕ್ಷಿಪ್ತನನ್ನಾಗಿಸುತ್ತದೆ. 'ಕೆಂದ'ನಂತೆ ತನ್ನ ಮೊಮ್ಮಗನ ಮೇಲೆ ಕಿರುಬ ಎರಗಿದಂತೆ ಕನಸು ಕಂಡು ತನ್ನ ನಿಲುವನ್ನು ಬದಲಿಸುತ್ತಾನೆ.

ಕತೆಯ ನಿರೂಪಣೆ ಸರಳವಾಗಿದೆ ಎನಿಸಿದರೂ ಅಲ್ಲಲ್ಲಿ ಸಾಂಕೇತಿಕ ಅರ್ಥಗಳು ಕ್ರಿಯಾಶೀಲವಾಗಿರುವುದು ಗಮನಕ್ಕೆ ಬರುತ್ತದೆ. ಶೀರ್ಷಿಕೆಯೇ ಕತೆಯ ಆಶಯವನ್ನು ಸಮರ್ಥವಾಗಿ ಧ್ವನಿಸುತ್ತದೆ. ಕತೆ ನಡೆಯುವ ಅವಧಿ ಒಂದು ರಾತ್ರಿ. ರಾತ್ರಿಯ ನೈಸರ್ಗಿಕ ವ್ಯಾಪಾರಗಳು ರಾಮಜ್ಜನ ಮನಸ್ಸಿನ ಮೇಲೆ ತೀವ್ರ ಪರಿಣಾಮ ಬೀರುವುದರಲ್ಲಿ ಸಮಯದ ಸಾರ್ಥಕತೆಯಿದೆ. 'ಸಂಜೆ ಅಲ್ಲಿಯೇ ತಂಗಿದರು' ಎಂದು ಕತೆ ಆರಂಭವಾಗುತ್ತದೆ. ಇದು ರಾಮಜ್ಜ ಜೀತಪದ್ಧತಿಯಲ್ಲಿಯೇ ಉಳಿಯಲು ನಿರ್ಧರಿಸಿದುದನ್ನು ಧ್ವನಿಸುತ್ತದೆ. ಇಲ್ಲಿನ ನಾಯಿ ಮತ್ತು ಕಿರುಬಗಳು ಸಮರ್ಥ ಪ್ರತಿಮೆಗಳಾಗಿವೆ. ಕತೆಯಲ್ಲಿ ನಾಯಿಯ ಬಗೆಗೆ ಬರುವ ಎಲ್ಲ ವಿವರಗಳು ರಾಮಜ್ಜನಿಗೂ ಅವನಂಥ ಎಲ್ಲ ಜೀತಗಾರರಿಗೂ ಅನ್ವಯವಾಗುತ್ತವೆ. 'ಕೆಂದ'ನನ್ನು ಹೊತ್ತೊಯ್ಯುವಾಗ ಹುಡುಗನಾಗಿದ್ದ ರಾಮಜ್ಜ ಪ್ರಾಣಭೀತಿಯಿಂದ ತತ್ತರಿಸುವಂತೆ ಮಾಡಿದ ಕಿರುಬ ಆತನನ್ನು ಹೊತ್ತೊಯ್ಯಬಹುದಾದುದಾಗಿ ನೇರವಾಗಿಯೇ ಪ್ರಾಣಘಾತುಕತನದ್ದು ಎನಿಸಿದೆ. ಅದರ ಜೊತೆಗೆ ಅದು ಜೀತಪದ್ಧತಿಯ ಅಂತರ್ಯದಲ್ಲಿಯೇ ಇದ್ದು ಜೀತಗಾರನನ್ನು ಯಾವಾಗಲಾದರೂ ಬಲಿ ತೆಗೆದುಕೊಳ್ಳಬಹುದಾದ ಕ್ರೌರ್ಯಕ್ಕೆ ಪ್ರತಿಮೆಯೂ ಆಗುತ್ತದೆ. ಸ್ವತಃ ರಾಮಜ್ಜನೇ ಕೊನೆಯವರೆಗೆ ಜಗಲಿಯಲ್ಲಿ ಮಲಗಿ ಚಳಿ- ಮಳೆಯಲ್ಲಿ ಸೊರಗಿ ಗೂರಲು ಬಂದು ಒದ್ದಾಡುವಂತಾಗಿರುವುದರಲ್ಲಿಯೇ ಅಂತಹ ಕ್ರೌರ್ಯವಡಗಿದೆ. ಇರುಳಿನಲ್ಲಿ ಅರಳಿಮರದ ಮೇಲೆ ಗೂಗೆ ಕೂಗುವುದು ಜೀತಪದ್ಧತಿಯ ಭಯಾನಕತೆಗೆ, ಅನಿಷ್ಟಕ್ಕೆ ಸೂಚಕವಾಗುತ್ತದೆ. ಕತೆ ರಾತ್ರಿಯಲ್ಲಿ ನಡೆದರೂ ಅದು ಎಚ್ಚರದ ರಾತ್ರಿಯೂ ಆಗಿದೆ. ಈ ಎಚ್ಚರ ಸಾಂಕೇತಿಕವೂ ಹೌದು. ರಾಮಜ್ಜನಿಗೆ ಯಾವಾಗಲೋ ಬಂದ ನಿದ್ದೆ ಕೂಡ ಎಚ್ಚರದ ನಿದ್ದೆಯೇ. ಆ ನಿದ್ದೆಯಲ್ಲಿ ಕಾಣುವ ಕನಸೇ ಕತೆಗೆ ತಿರುವು ನೀಡುವುದು. ಮಬ್ಬು ಕಳೆಯುವಾಗ ಅವರಿಬ್ಬರೂ ಎದ್ದು ಹೊರಡುವುದೂ ಸಾಂಕೇತಿಕವೇ.

ರಾಮಜ್ಜನ ಮನಃಪರಿವರ್ತನೆಗೆ 'ಪ್ರಬಲ ಕಾರಣ' ಕತೆಯಲ್ಲಿ ತೋರುವುದಿಲ್ಲ ಎನ್ನುವ ಶ್ರೀಕಂಠ ಕೂಡಿಗೆಯವರು, ವಾತಾವರಣದ ಪ್ರಭಾವವನ್ನೇ ಮುಖ್ಯವೆಂದು ಭಾವಿಸಿದ್ದಾರೆ. ('ಜೀಶಂಪ ಸಂಸ್ಮರಣೆ' ೭೨). ಈ ಕತೆ 'ವಾತಾವರಣ ಪ್ರಧಾನವಾದುದು' ಎಂದು ಸುಧಾಕರ ಅವರು ಹೇಳಿರುವುದು ('ಮಬ್ಬು ಜಾರಿದ ಕಣಿವೆ'ಯಲ್ಲಿ ೧೯೯೯), ಕೂಡಿಗೆಯವರು ಅದನ್ನು

ಅನುಮೋದಿಸಿರುವುದು ಈ ದೃಷ್ಟಿಯಿಂದಲೂ ಇರಬಹುದು. ರಾತ್ರಿಯ ವಾತಾವರಣದಲ್ಲಿ ರಾಮಜ್ಜನ ಮನಸ್ಸಿನ ಒಳತಳದಲ್ಲಿದ್ದ ನೆನಪುಗಳು ಜಾಗ್ರತಗೊಳ್ಳುತ್ತವೆ. ರಾಮಜ್ಜ ಜೀತ ಬಿಟ್ಟು ತುಂಬಾ ವರ್ಷಗಳಾಗಿವೆ. ಅವನು ಜೀತವಿದ್ದ ಊರು, ಮನೆಗಳಿಂದ ದೂರವಿದ್ದಾನೆ. ಹಾಗಾಗಿ ಆತ ಜೀತದಿಂದ ಅನುಭವಿಸಿದ ಕಷ್ಟಗಳು ಮಾಸಿವೆ. ಆ ವಾತಾವರಣಕ್ಕೆ ಮರಳಿ ಬಂದ ಮೇಲೆ ಅದು ಅವನಿಗೆ ಹತ್ತಿರದಿಂದ ಕಂಡಂತೆ ಅನಿಸಿದೆ. ಇಲ್ಲಿ ವಾತಾವರಣ ಪೂರಕವಾದರೂ ಅವನಲ್ಲಿ ಸುಪ್ತವಾಗಿರುವ ಜೀತದ ಅನುಭವಗಳೇ ಮುಖ್ಯವಾಗುತ್ತವೆ. ಆ ಕಷ್ಟಗಳು ಮರೆಯುವಂಥ ಪ್ರೀತಿ ತೋರಿಸಿದ್ದ ದೊಡ್ಡಗೌಡರು ಈಗ ಇಲ್ಲ. ಆಗ ಸೊಂಪಾಗಿ ಬೆಳೆದಿದ್ದ ಅರಳೀಮರ ಈಗ ಮೋಟು ಪೊರಕೆಯಂತೆ ಆಗಿರುವುದು ಅದನ್ನು ಪ್ರತಿಮಿಸುವಂತಿದೆ. ರಾಮಜ್ಜ ತನ್ನ ಬಾಳ ಮುಸ್ಸಂಜೆಯಲ್ಲಿರುವವನು. ಅವನಲ್ಲಿ ಆ ಮಬ್ಬೂ ಇದೆ. ಮಬ್ಬುಗಣ್ಣಿನಲ್ಲಿಯೇ ಹೊಸ ತಲೆಮಾರಿನ ಭವಿಷ್ಯವನ್ನು ಕಾಣಲು ಬಂದಿದ್ದಾನೆ. ಮೊಮ್ಮಗನ ಜೊತೆಗಿನ ಸಂಭಾಷಣೆ ಆ ಮಬ್ಬನ್ನು ಸರಿಸುತ್ತದೆ. ರಾಮಜ್ಜ ಎಷ್ಟೇ ವ್ಯಾವಹಾರಿಕನಾದರೂ ಅವನಲ್ಲಿಯೂ ಕರುಳ ತುಡಿತವಿದೆ. ಪಕ್ಕದಲ್ಲಿ ಮಲಗಿರುವ 'ಮೊಮ್ಮಗನ ಮೇಲೆ ಬಲಗೈಯನ್ನು ಚಾಚಿ ಎದೆಗೆ ಅವುಚಿಕೊಳ್ಳುವುದು (ಪು. ೪) ಅದನ್ನು ಅಭಿನಯಿಸಿದಂತಿದೆ. ಆ ತುಡಿತ ಕನಸಿನಲ್ಲಿ ಸ್ಫೋಟಗೊಳ್ಳುತ್ತದೆ. ಕೆ.ಎಸ್. ಭಗವಾನ್ ಹೇಳುವಂತೆ 'ಅದು ಮುದುಕನ ಬೆಳವಣಿಗೆ' (ಜೀಶಂಪ ಸಂಸ್ಮರಣೆ' ೮೮).

ಸುಧಾಕರ ಅವರು 'ಆರ್ಥಿಕ ಮುಗ್ಗಟ್ಟಿನಲ್ಲಿ ನರಳುತ್ತಿರುವ ಮುದುಕ'ನಲ್ಲಿ ಪರಿವರ್ತನೆ ಸಾಧ್ಯವೇ? ಎಂಬ (ಯಾರದೆಂಬ ಉಲ್ಲೇಖವಿಲ್ಲದ) ಪ್ರಶ್ನೆಗೆ ಉತ್ತರಿಸಿದ್ದಾರೆ ('ಮಬ್ಬು ಜಾರಿದ ಕಣಿವೆ'ಯಲ್ಲಿ ಪು. ೨೦೧). ರಾಮಜ್ಜ ಮೊಮ್ಮಗನನ್ನು ಜೀತಕ್ಕಿರಿಸಲು ನಿರ್ಧರಿಸುವುದು ಆರ್ಥಿಕ ಮುಗ್ಗಟ್ಟಿನಿಂದಲ್ಲ. ಅವನ ಕುಟುಂಬದ ಆರ್ಥಿಕ ಸಮಸ್ಯೆ ಒಂದು ಹೊತ್ತಿನ ಊಟಕ್ಕೆ ಸಂಬಂಧಿಸಿದ್ದು. ಕೂಲಿ ಮಾಡಿಯೂ ಅದನ್ನು ಪೂರೈಸಬಹುದು. 'ನನ್ನ ಮಗ ನನಗೆ ಹೊರೆಯಾಗಿಲ್ಲ' (ಪು. ೫) ಎಂದು ಆ ಹುಡುಗನ ತಾಯಿ ಹೇಳುತ್ತಾಳೆ. ಆದರೆ ಜೀತದಿಂದ 'ಇನ್ನೂ ಒಳ್ಳೆ ಊಟ, ಒಳ್ಳೆ ಬಟ್ಟೆ' (ಪು. ೬) ಸಿಗುತ್ತದೆ. ಅದರಿಂದ ಮೊಮ್ಮಗನ ಬದುಕು ಉತ್ತಮಗೊಳ್ಳುತ್ತದೆ ಎಂಬುದು ರಾಮಜ್ಜನ ತಿಳಿವಳಿಕೆ. ತನ್ನ ಆ ತಿಳಿವಳಿಕೆ ತಪ್ಪು ಎನಿಸಿದೊಡನೆ ಆತನ ಮನಸ್ಸು ಪರಿವರ್ತನೆಗೊಳ್ಳಲು ಅಡ್ಡಿಯಾಗಿ ಇರುವ ಯಾವ ಆರ್ಥಿಕ ಮುಗ್ಗಟ್ಟೂ ಆತನಿಗೆ ಇಲ್ಲ.

ತಮ್ಮಿಂದಾಗಿಯೂ ಸಾಮಾಜಿಕ ಮತ್ತು ಆರ್ಥಿಕ ಪಿಡುಗಿನಿಂದ ನರಳುತ್ತಿದ್ದ ಜನತೆ ತಾವಾಗಿಯೇ ಎಚ್ಚರಗೊಳ್ಳುವ ಪ್ರಗತಿಪರ ದೃಷ್ಟಿಯಿಂದ ಮತ್ತು ಕಥನ ಕಲೆಯ ದೃಷ್ಟಿಯಿಂದ ಕತೆ ಮೆಚ್ಚುಗೆಗೆ ಯೋಗ್ಯವಾಗಿದೆ. ರಾಮಜ್ಜನಂತೆ ದುಡಿಯುವವರೂ ಬಡವರೂ ಮತ್ತು ಮುಪ್ಪಿನವರೂ ಆದವರ ಮತ್ತೆರಡು ಕತೆಗಳು 'ಕಾವಲುಗಾರ' ಮತ್ತು 'ಮಮತೆಯ ಜೀವ'.

'ಕಾವಲುಗಾರ' ಜೀಶಂಪ ಅವರ ಮೊದಲ ಸಂಕಲನದ ಶೀರ್ಷಿಕೆಯ ಕತೆ. ದಾರಿ ತಪ್ಪಿದ ಬೆಳೆಯುತ್ತಿರುವ ಮಗನ ಉದ್ಧಾರಕ್ಕಾಗಿ ಹಂಬಲಿಸುವ, ಆ ಮೂಲಕ ತನ್ನ ಮುಪ್ಪಿನ ಬದುಕು ಹಿತಕಾರಿಯಾಗುವ ಕನಸು ಕಾಣುವ ಹೊಲ ಕಾಯುವ ಮುದುಕ ತನ್ನ ಕಾಯಕ ನಿಷ್ಠೆಯಿಂದ ಅದೇ ಮಗನನ್ನು ತಿಳಿಯದೆ ಕೊಲ್ಲುವ ದುರಂತ ಅದರ ವಸ್ತು. ರಂಗ ಮುಪ್ಪಿನ ಅಸಹಾಯಕತೆಯಲ್ಲಿ ಕಾಯಕ ನಿರತನಾದವನು. ಇತರೆ ವೃದ್ಧರಂತೆ ಕುಳಿತು ಉಣ್ಣುವ, ತನ್ನ ಮನೆಯಲ್ಲಿ ಬೆಚ್ಚಗೆ ಮಲಗುವ

ಆಸೆ ಇರುವವನು. ಆತನ ಮಗ ಕಳ್ಳನಾಗಿ ತನ್ನ ಹೊಟ್ಟೆಗೆ ಆಧಾರವಾಗಿದ್ದ ಕುರಿ ಕಾಯುವ ಕೆಲಸ ಕಳೆದುಕೊಂಡು ಅಪ್ಪನ ಅನ್ನದ ಪಾಲುದಾರನಾದ ಪರಾವಲಂಬಿಯಾಗಿದ್ದಾನೆ. ಮಗನ ಮೇಲಿನ ವಾತ್ಸಲ್ಯದಿಂದ ರಂಗ ತಾನೇ ಕಾವಲು ಕಾಯುವ ಹೊಲದಲ್ಲಿ ಕಡಲೆಕಾಯಿ ಕದಿಯುತ್ತಾನೆ. ಮರುಕ್ಷಣದಲ್ಲಿಯೇ, ಅದೇ ಹೊಲಕ್ಕೆ ಕಡಲೆಕಾಯಿ ಕದಿಯಲು ಬಂದಿದ್ದ ಮಗನನ್ನು ಕತ್ತಲೆಯಲ್ಲಿ ಹಂದಿ ಎಂದು ಭಾವಿಸಿ ಕೊಂದು ದುರಂತವನ್ನನುಭವಿಸುತ್ತಾನೆ.

'ಮಬ್ಬು ಜಾರಿದ ಕಣಿವೆಯಲ್ಲಿ' ಯಂತೆ ಈ ಕತೆಯೂ ಇರುಳಿನಲ್ಲಿ ನಡೆಯುತ್ತದೆ. ಇದರಲ್ಲಿಯೂ ಜೀತದ ಅಸ್ತಿತ್ವವಿದೆ. ಕತೆ ಪ್ರಾರಂಭವಾಗುವುದೇ ಹೊಲದೊಳಕ್ಕೆ ಪ್ರಾಣಿಗಳು, ಕಳ್ಳರು ಬರದಂತೆ ತಡೆಯುವುದಕ್ಕಾಗಿ ಕಾವಲುಗಾರ(ರು) ಮಾಡುವ 'ಅಡಡಾ....ಡಾ....ಹೊ' ಎಂಬ ಸದ್ದಿನಿಂದ ರಂಗ ಆಗಾಗ್ಗೆ ಹಾಗೆ ಕೂಗುವುದನ್ನು ಅಭಿನಯಿಸುವ ರೀತಿಯಲ್ಲಿ ಆ ಕೂಗು ಕತೆಯ ಉದ್ದಕ್ಕೂ ನಡುನಡುವೆ ಬರುತ್ತಲೇ ಇರುತ್ತದೆ. ಅದು ರಂಗನ ಕಾಯಕನಿಷ್ಠೆಯನ್ನು ಸಾರುವ ಕಹಳೆಯೂ ಹೌದು. ಕತೆಯಲ್ಲಿ ಅಂಥ ಯಾವ ಪ್ರಾಣಿಯ ಸುಳಿವೂ ಇಲ್ಲ. ಕೊರೆವ ಚಳಿ ಪ್ರಾಣಿಯಂತೆ ನುಗ್ಗಿ ಬರುತ್ತದೆ. ಅದನ್ನು ಎದುರಿಸಲು ಬೀಡಿ ಹಚ್ಚುವ ಅವನ ಪ್ರಯತ್ನ ವಿಫಲವಾಗುತ್ತದೆ. ಅಂತೆಯೇ ತಿಗಣೆಯೊಂದು ಅವನ ತೊಡೆಯನ್ನು ಕುಟುಕಿ ಅವನ ಹೊಡೆತಕ್ಕೆ ಸಿಗದೆ ತಪ್ಪಿಸಿಕೊಳ್ಳುತ್ತದೆ. ತಲೆಯ ಹೇನಿನ ಕಡಿತಕ್ಕೆ ಕೆರೆದು ಅವನ ಕೈ ಸೋಲುತ್ತದೆ. ಇವೆಲ್ಲ ರಂಗನ ಕಾಯುವ ಕೆಲಸದ ವಿಸ್ತರಣೆಯೇ. ರಂಗ ತನ್ನ ಮತ್ತು ತನ್ನ ಮಗನ ಚಾರಿತ್ರ್ಯ ಕಾಯುವವರೆಗೂ, ಹಸಿವಿನಿಂದ ಮಗನ ಜೀವ ಕಾಯುವವರೆಗೂ ಕಾಯುವ ಕೆಲಸ ವಿಸ್ತರಿಸುತ್ತದೆ. ಈ ಎಲ್ಲದರಲ್ಲಿಯೂ ರಂಗ ಸೋಲುತ್ತಾನೆ. ನಡುವಿನಲ್ಲಿ ಮುಲುಗುಡುತ್ತಿದ್ದು ಸಿಕ್ಕಿ ಹಾಕಿಕೊಂಡ ಕೂರೆಯನ್ನು ಕುಕ್ಕುವುದಕ್ಕೂ ಮಗನನ್ನು ಕೊಲ್ಲುವುದಕ್ಕೂ ಹೋಲಿಕೆ ಇದೆ.

ಈ ಕತೆಯಲ್ಲಿ ದುಡಿವ ಜನರ ಬಡತನಕ್ಕೆ ಕಾರಣವಾಗಿರುವ ಜೀತ ಮತ್ತು ಭೂ ಒಡೆತನದ ವಿರುದ್ಧದ ದನಿ ಸ್ವಲ್ಪ ಮಟ್ಟಿಗೆ ಸುಳುಹುಗಂಡಿದೆ. ಧರಣಿಯು ದುಡಿಯಲು ಇರಿಸಿಕೊಳ್ಳುವುದು ಕರುಣೆ, ಅಂತೆಯೇ ಆತ ಹೊರಗೆ ಹಾಕಲು ಅಧಿಕಾರವುಳ್ಳವನು, ಪ್ರಾಮಾಣಿಕತೆಯಿಂದ ಕಷ್ಟಪಟ್ಟು ದುಡಿದರೂ ನೀಡುವುದು ಮಾತ್ರ ಒಬ್ಬನಿಗೇ ಸಾಲದ (ಊಟದ ರೂಪದ) ಕೂಲಿ ಎಂಬ ವಿವರಗಳು ಆ ವ್ಯವಸ್ಥೆಯ ಕರಾಳತೆಯನ್ನು ಎತ್ತಿ ತೋರುತ್ತವೆ. ತನಗಿಂತ ಚಿಕ್ಕವನನ್ನು ಧಣಿ ಎನ್ನಬೇಕಿರುವುದರ ಬಗೆಗೆ ರಂಗನಲ್ಲಿ ಅಸಹನೆಯಿದೆ. ಇದು ರಾಮಜ್ಜನಲ್ಲಿ ಕಾಣದುದು. ಅಂತೆಯೇ ತಾನು ರಾತ್ರಿಯೆಲ್ಲಾ ಎಚ್ಚರ ಇದ್ದು ಕಾಯುವ ಹೊಲದಲ್ಲಿ ರಂಗ ಕಡಲೆಕಾಯಿಯನ್ನು ಹಕ್ಕಿನಿಂದ ತೆಗೆದುಕೊಳ್ಳದೆ ಕಳ್ಳತನದಿಂದ ಕಿತ್ತುಕೊಳ್ಳಬೇಕಾಗಿದೆ. 'ಅದು ಪರರ ಹೊಲ ! ಪರರ ವಸ್ತು ! ತಾನು ಕಾವಲುಗಾರ ! ರಂಗ ಕಾವಲುಗಾರ' (ಪು. ೧೩೧) ಎನ್ನುವ ರಂಗನ ಮಾತಿನಲ್ಲಿ ಅದನ್ನು ಪ್ರತಿಭಟಿಸುವ ದನಿ ಇದೆ. ಎನಿಸುವಂತಿದೆ. ಆದರೆ ಅದು ರಂಗನಲ್ಲಿ ತಾನು (ಕಾಯುವ) ಪರರ ಹೊಲದಲ್ಲಿ ಕಳಬಾರದೆನ್ನುವ ಭಾವವನ್ನು ಗಟ್ಟಿಗೊಳಿಸುವ ಮಾತಾಗಿಯೇ ಕಾರ್ಯವೆಸಗುತ್ತದೆ. ಅದರ ಮುಂದೆಯೇ ಬರುವ 'ಆದರೂ...ರಂಗನ ಮನಸ್ಸು ಸಡಿಲಿತು' ಎಂಬ ಮಾತನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಅಲ್ಲದೆ ರಂಗನನ್ನು 'ಹೊಲಗಳ ಇರುಳ ಧಣಿ' ಎಂದು ಕರೆದು ಆತ ರಾಜ ಮಹಾರಾಜ ಪ್ರವೇಶಿಸುವಂತೆ ಗಂಭೀರವಾಗಿ ದೊಣ್ಣೆಯನ್ನು ಊರಿ ಬದುವಿನ ಮೇಲೆ ಮುಂದೆ ನಡೆವಾಗ ಹೊಲದ ಗಿಡಗಿಡವೂ ಅವನಿಗೆ ಬಾಗಿ ನಮಸ್ಕರಿಸಿತು ಎಂದು ವರ್ಣಿಸುವಾಗ ಒಡೆತನವೇ ಪ್ರತಿಷ್ಠಾಪಿತಗೊಂಡಿದೆ.

ರಂಗನ ದುರಂತಕ್ಕೆ ಧಣಿ ಹೊಣೆಗಾರನಾಗುವುದಿಲ್ಲ. ಈ ಎಲ್ಲ ಕಾರಣಗಳಿಂದ ಪ್ರಸ್ತುತ ಕತೆಯಲ್ಲಿ ಸಾಂಕೇತಿಕ ಅರ್ಥಗಳು ಕ್ರಿಯಾಶೀಲವಾಗಿ ಕತೆಗೆ ಬೇರೆಯದೇ ಆಯಾಮ ನೀಡುತ್ತದೆಂಬ ಭರವಸೆ ಮೂಡಿಸಿ ದಿಕ್ಕು ತಪ್ಪಿ ಹರಿದಂತಾಗಿದೆ. ರಂಗನಂಥವನ ದುರಂತಕ್ಕೆ ಓದುಗರು ಮರುಕ ವ್ಯಕ್ತಪಡಿಸುವುದಷ್ಟನ್ನೇ ಈ ಕತೆ ನಿರೀಕ್ಷಿಸುವಂತಿದೆ. ಆ ದೃಷ್ಟಿಯಿಂದ 'ಮಬ್ಬು ಜಾರಿದ ಕಣಿವೆಯಲ್ಲಿ' ಯಂತೆ ಈ ಕತೆ ಯಶಸ್ವಿ ಎನಿಸುವುದಿಲ್ಲ. ಸುಧಾಕರ ಅವರು ರಂಗನ ಮಗ 'ಅನಿವಾರ್ಯವಾಗಿ' ಕಳ್ಳತನಕ್ಕಿಳಿದ ಎನ್ನುತ್ತಾರೆ. (ಪು. ೧೯೭). ಕತೆಯಲ್ಲಿ ಅಂಥ ಅನಿವಾರ್ಯ ಕಾರಣಗಳೇನೂ ಇರದೆ ಕಳ್ಳತನ ಅವನ ದುರ್ಗುಣವಾಗಿ ಚಿತ್ರಣಗೊಂಡಿದೆ. ಅಲ್ಲದೆ ಸ್ವತಃ ರಂಗ ಕಳ್ಳತನಕ್ಕಿಳಿಯುವುದು ಪರಿಸ್ಥಿತಿಯ ಕ್ರೌರ್ಯವನ್ನು ತಿಳಿಸುವ ಆಶಯದ್ದಾದರೂ ಮಗನ ಕೆಟ್ಟತನದ ಮೂಲವಾಗಿಯೂ ಕಾಣಿಸುವ ಅಪಾಯವಿದೆ. ಶ್ರೀಕಂಠ ಕೂಡಿಗೆಯವರು 'ತಂದೆ ಮಗನ ಚಾರಿತ್ರ್ಯದ ಕಾವಲುಗಾರನಾಗಿ ಯಶಸ್ವಿಯಾ'ದ (ಪು. ೭೫, ಜೀಶಂಪ. ಸಂಸ್ಮರಣೆ) ಎನ್ನುತ್ತಾರೆ. ವಾಸ್ತವವಾಗಿ ರಂಗ ತನ್ನ ಚಾರಿತ್ರ್ಯವನ್ನೇ ಕಾಯ್ದುಕೊಳ್ಳಲಾಗದ ಅಸಹಾಯಕನಾಗಿದ್ದಾನೆ.

ರಾಮಜ್ಜ, ರಂಗ, 'ಮಮತೆಯ ಜೀವ'ದ ಸಿಳ್ಳ ಈ ಮೂವರೂ ಭಾರತದ 'ವೃದ್ಧಾಪ್ಯದ ದೀನಸ್ಥಿತಿಗೆ ಕನ್ನಡಿ ಹಿಡಿದಂತಿದ್ದಾರೆ. ಅಂಥವರ ಬಗೆಗೆ ಕತೆಗಾರರ ಕಳಕಳಿಯಿದೆ.

ಗ್ರಾಮೀಣ ಬಡತನವನ್ನು ಚಿತ್ರಿಸುವ ಜೀಶಂಪ ಅವರ ಕತೆಗಳು ನಮ್ಮ ದೇಶದ ಗ್ರಾಮಜೀವನದ ಹೀನದೆಶೆಯನ್ನು ಎತ್ತಿ ತೋರುತ್ತವೆ. ಆದರೆ ಅದಕ್ಕೆ ಕಾರಣಗಳನ್ನು ಹುಡುಕುವ ಚಿಂತನೆಗಳು ಕಡಿಮೆ. ಈ ಪಾತ್ರಗಳು ತಾವು ಪಡೆದುಕೊಂಡು ಬಂದಿಲ್ಲವೆಂದು ಸಮಾಧಾನಗೊಳ್ಳುತ್ತವೆ. ಹಾಗಿದ್ದೂ ಈ ಕತೆಗಳು ಭಾರತದ ಆರ್ಥಿಕ ಪರಿಸ್ಥಿತಿಯು ಪರಿವರ್ತನೆಗೊಳ್ಳಬೇಕಿರುವ ಅಗತ್ಯವನ್ನು ತಿಳಿಸುತ್ತವೆ. ಜೊತೆಗೆ ದುಡಿವ ಜನರ ಪ್ರಾಮಾಣಿಕತೆಯನ್ನು ಎತ್ತಿತೋರಿಸುತ್ತವೆ.

ಹೀಗೆ ಪ್ರಾಮಾಣಿಕರಾಗಿರುವವರೂ ತಪ್ಪು ಮಾಡುವ ದುರ್ಭರ ಸಂಗತಿಗಳು ಎದುರಾಗುತ್ತವೆ. ಅಂಥವರೇ ಶಿಕ್ಷೆ ಅನುಭವಿಸುವಂತೆ ಪರಿಸ್ಥಿತಿ ಮಾಡುತ್ತದೆ. ವಿಶೇಷವೆಂದರೆ ಇಂಥ ನಾಯಕರು ದುರಂತ ನಾಟಕದ ನಾಯಕರಂತೆ ಉತ್ತಮ ಗುಣ ಸ್ವಭಾವದವರಾಗಿದ್ದು (ಉತ್ತಮ ಕುಲದವರಲ್ಲ), ತಾವು ಮಾಡಿದ ಒಂದೇ ಒಂದು ತಪ್ಪಿಗೆ ಶಿಕ್ಷೆಯನ್ನನುಭವಿಸುತ್ತಾರೆ. ಆ ತಪ್ಪೂ ಕೂಡ ತೀರ ಸಣ್ಣದು (ರುದ್ರನಾಯಕರದು ಮಹದ್ದೋಷ ಹಮರ್ಷಿಯಾ). 'ಗೌಡರ ಹೊಲ್ದಾವು ಯಾರೋ ಕೆಮ್ಮಿಂದಂಗಾಯ್ತು. ನಂಗೆ ಅಲ್ಲೆ ಜೀವಾನೆ ಆರಿ ಓಯ್ತೇನೋ ಅನ್ನಾಂಗಾಗಿ ಬುಡ್ತು....ಯಪ್ಪ ನನ್ನ ಜನುಮದಾಗೆ ಕಳ್ತನ ಮಾಡಿರ್‍ನಿಲ್ಲ. ಈಗ ಮಾಡಬೇಕಾಯ್ತು ಅಬ್ಬಬ್ಬ. ಎದೆ ನಡ್ಕ ಇನ್ನೂ ಹೋಗಿಲ್ಲ.... ಥೇ....ಥೇ....ನಮ್ಮಂತೋರ್‍ಗಲ್ಲ ಈ ಕೆಲ್ಸ....' ('ಮಬ್ಬು ಜಾರಿದ ಕಣಿವೆಯಲ್ಲಿ', ಪು. ೧೪೧) ಎಂದು ರಂಗಣ್ಣ ಹೇಳುವ ಮಾತು ಅವರ ಪ್ರಾಮಾಣಿಕತೆಗೆ, ಮಾನಸಿಕ ಸ್ವಚ್ಛತೆಗೆ ಹಿಡಿದ ಕನ್ನಡಿಯಂತಿದೆ. ಈ ಕತೆಗಳಂತೆ ದುರಂತವೆನಿಸುವ ಮತ್ತೊಂದು ಕತೆ 'ಗಾಜು ಒಡೆಯಿತು'. ಆದರೆ ಅದು ಬೇರೆಯದೇ ಸಮಸ್ಯೆಗೆ ಸಂಬಂಧಿಸಿದುದಾಗಿದೆ.

ಗ್ರಾಮೀಣ ಜನರ ಸಂಬಂಧವೈಚಿತ್ರ್ಯ ಜೀಶಂಪ ಅವರ ಕತೆಗಳ ಮತ್ತೊಂದು ಮುಖ. 'ಮಮತೆಯ ಜೀವ', 'ಕಾವಲುಗಾರ' ಮತ್ತು 'ನಾಗಿಯ ಕರಿಯ' ಕತೆಗಳಲ್ಲಿನ ಮನುಷ್ಯ ಸಂಬಂಧದ ಸ್ವರೂಪ ವಿಚಿತ್ರವಾದುದು. ಅತಿರೇಕದ್ದೆನಿಸುವಂತಿದ್ದರೂ ವಾಸ್ತವದಲ್ಲಿ ಅಂತಹ ಸಂಬಂಧಗಳು

ಇರುತ್ತವೆ. ಈ ಸಂಬಂಧಗಳ ಒಂದು ತುದಿಯಲ್ಲಿ ಅದಕ್ಕಾಗಿ ಜೀವತೇಯುವ ವ್ಯಕ್ತಿಗಳಿದ್ದರೆ ಇನ್ನೊಂದು ತುದಿಯಲ್ಲಿ ಸಂಪೂರ್ಣ ವಿರುದ್ಧ ಸ್ವಭಾವದ ಅಪಾತ್ರರೂ, ತಮಗಾಗಿ ಜೀವ ತೆರುವವರ ಜೀವ ತಿನ್ನುವವರೂ ಇದ್ದಾರೆ.

'ಮಮತೆಯ ಜೀವ' ಮತ್ತು 'ನಾಗಿಯ ಕರಿಯ' ಎರಡರಲ್ಲಿಯೂ ಸಂಬಂಧ ಸೆಳೆತದ ಪರಾಕಾಷ್ಠೆಯಿದ್ದರೂ ಆ ಸೆಳೆತ ಕ್ರೌರ್ಯವನ್ನು, ಕೆಡುಕನ್ನು ಗೆಲ್ಲಬಲ್ಲುದೆಂಬ ಸಾಂಪ್ರದಾಯಿಕ ನಿಲುವಿಲ್ಲ. ಅಷ್ಟರಮಟ್ಟಿಗೆ ಅವು ವಾಸ್ತವಕ್ಕೆ ಅಂಟಿಕೊಂಡಿವೆ. ಸಿಳ್ಳ ಮತ್ತು ನಾಗಿಯರ ವಿಚಾರವಾಗಿ ನಮ್ಮಲ್ಲಿ ಸೋಜಿಗವೂ ಗೌರವವೂ ಮೂಡಬಹುದು. ಅದರಾಚೆಗೆ ಹೊಸ ಅರಿವೇನನ್ನೂ ಈ ಕತೆಗಳು ಹಾಯಿಸಲಾರವು.

ಈ ಕತೆಗಳ ಸಾಮಾಜಿಕತೆ ಕೂಡ ಲಕ್ಷ್ಯಯೋಗ್ಯ. ಇವುಗಳಲ್ಲಿ ದುಃಸ್ಥಿತಿಯಲ್ಲಿ, ಇಕ್ಕಟ್ಟಿನಲ್ಲಿ ಸಿಲುಕಿ ನರಳುವವರು ತಳವರ್ಗದವರು. ಅವರ ದುಃಸ್ಥಿತಿಗೆ, ಇಕ್ಕಟ್ಟಿಗೆ ಕಾರಣರಾದವರಲ್ಲದೆ ಅವರಿಗೆ ಪ್ರೀತಿ, ವಿಶ್ವಾಸ, ಸಹಾನುಭೂತಿ ತೋರಿಸುವವರು ಮೇಲುವರ್ಗದವರು.

ಎರಡು ಕತೆಗಳನ್ನು ಬಿಟ್ಟು ಉಳಿದ ಎಲ್ಲಾ ಕತೆಗಳನ್ನೂ ಕತೆಗಾರ ಕತೆಯ ಹೊರಗೆ ನಿಂತು ನಿರೂಪಿಸುತ್ತಾನೆ. ನಾಗಿಯ ಕರಿಯದಲ್ಲಿ ಮಾತ್ರ ನಿರೂಪಕನೂ ಒಂದು ಪಾತ್ರವಾಗಿ ಕಾಣಿಸಿಕೊಳ್ಳುತ್ತಾನೆ. ಅಲ್ಲಿಯೂ ಅದು ಅವನಿಗೆ ಸಂಬಂಧಿಸಿದ ಕತೆಯಾಗಿಲ್ಲ. ಅಂದರೆ ಇದು ವ್ಯಕ್ತಿಯೊಬ್ಬ ತನ್ನ ಬದುಕಿನ ಅನುಭವವನ್ನು ಹಂಚಿಕೊಳ್ಳುವಂತಿದೆ ತಾನು ಕಂಡದ್ದನ್ನು ತಿಳಿಸಿ ಹೇಳುವ ರೀತಿಯಲ್ಲಿದೆ. 'ಬುಡ ಕಡಿದ ಮೇಲೆ' ಕತೆಯಲ್ಲಿ ಒಂದು ಪಾತ್ರ ತನ್ನದೇ ಕತೆಯನ್ನು ಹೇಳುವಂತಿದೆ. ಇದು ತಪ್ಪನ್ನು ಒಪ್ಪಿಕೊಳ್ಳುವ ಧಾಟಿಯಲ್ಲಿದೆ. ಆತ, 'ಹೇಳಿ ಬುದ್ದೀ....ಅಮ್ಯಾಕೆ ನನ್ನ ನೀವು ಏನಂತನಾರೂ ಕರೀರಿ....ಕಟುಕ ಪಾಪಿ....ಚಂಡಾಲ ದ್ರೋಹಿ ಏನಾದರೂ ಅನ್ನಿ....' (ಪು. ೧೮೦) ಎಂದು ಹೇಳುವುದನ್ನು ಗಮನಿಸಬೇಕು.

ಮೊದಲೇ ಓದುಗನಲ್ಲಿ ಕುತೂಹಲ ಮೂಡಿಸಿ, ಅದನ್ನು ಉಳಿಸಿಕೊಳ್ಳುತ್ತಾ ಕುತೂಹಲದ ಕಾರಣವನ್ನು ನಿಧಾನವಾಗಿ ಪ್ರಕಟಪಡಿಸುವ ತಂತ್ರ ಕೆಲಸ ಕತೆಗಳಲ್ಲಿದೆ. ಬೆಟ್ಟದಪುರದ ಗಿರಿಯ ರಂಗನ ಉತ್ಸವ ನಿಂತದ್ದು ಯಾಕೆ? ಸಾವಿತ್ರಿಯ ಮದುವೆ ಅವರ ಅಪ್ಪನಿಗೆ ಯಾಕೆ ಬೇಸರ ಮೂಡಿಸಿದೆ? ಕಾಟಯ್ಯ ಆ ಒಂದು ತೋಟಕ್ಕೆ ತಾನೇ ಏಕೆ ನೀರೆರೆಯುತ್ತಾನೆ? ಈ ಪ್ರಶ್ನೆಗಳಿಗೆ ಉತ್ತರ ಸಿಗುವುದು ಕತೆಯ ಕೊನೆಗೆ. ಸಿಂಹಾವಲೋಕನ ಕ್ರಮವೂ ಕೆಲವು ಕತೆಗಳಲ್ಲಿದೆ. ಕತೆ ಸಾಗುವಾಗ ಪಾತ್ರಗಳ ಹಳೆಯ ನೆನಪುಗಳು ಪದೇ ಪದೇ ತೊಡರಿಕೊಳ್ಳುವುದಿದೆ.'ಏಕನಾದ' ಮತ್ತು 'ಹಕ್ಕಿಯ ಕರೆ' ಕತೆಗಳು ನಿರೂಪಣೆಯ ದೃಷ್ಟಿಯಿಂದ ಸಂಕೀರ್ಣವಾಗಿವೆ.

ಕತೆಗಳಲ್ಲಿನ ವರ್ಣನೆಗಳು ಹೆಚ್ಚು ಜೀವಂತವಾಗಿ ಮೂಡಿ ಬಂದಿವೆ. ಸಿಳ್ಳನ ಗುಡಿಸಲಿನ ವರ್ಣನೆಯಂಥವನ್ನು ನಿದರ್ಶನಕ್ಕೆ ನೋಡಬಹುದು. ಇದರಿಂದ ಕತೆಗಾರರು ಗ್ರಾಮ ಜೀವನದ ವಿವರಗಳನ್ನು ಎಷ್ಟು ತೀಕ್ಷ್ಣವಾಗಿ ಪರಿಭಾವಿಸಿದ್ದಾರೆಂಬುದು ತಿಳಿಯುತ್ತದೆ. ಅತ್ಯಂತ ಆಸಕ್ತಿಯಿಂದ ಗ್ರಾಮಜೀವನದ ಸಣ್ಣ ಪುಟ್ಟ ವಿವರಗಳನ್ನೂ ನೀಡುತ್ತಾ ಹೋಗುತ್ತಾರೆ. ಇವುಗಳು ವರ್ಣನೆಗಳಾಗಿ ಸಮರ್ಥವಾಗಿದ್ದರೂ ಅನುಭವದ ನೆಲೆಯನ್ನು ಧ್ವನಿಸುವುದು ಕಡಿಮೆ.

ವರ್ಣನೆಗಳಂತೆ ಈ ಕತೆಗಳಿಗೆ ಹೆಚ್ಚಿನ ಶಕ್ತಿಯನ್ನು ತಂದುಕೊಟ್ಟಿರುವುದು ಭಾಷೆ. ಮಂಡ್ಯದ ಗ್ರಾಮೀಣ ಪರಿಸರದ ಭಾವನೆಯನ್ನು ಕತೆಗಾರರು ಸಮರ್ಥವಾಗಿ ಹಿಡಿದುಕೊಟ್ಟಿದ್ದಾರೆ. ತಮ್ಮ ಕತೆಗಳಿಗೆ ಆ ಭಾಷೆಯ ಕಸುವನ್ನು ತುಂಬಿಕೊಳ್ಳುವುದಕ್ಕಾಗಿಯೇ ಯಥೇಚ್ಛವಾಗಿ ಸಂಭಾಷಣೆಗಳನ್ನು ಹೆಣೆಯುತ್ತಾರೆ. 'ಇಪ್ಪತ್ತು ಮೂವತ್ತೊರ್ಸ ಆ ಮಾರಾಯ್ನ ಮನೇಲಿ ಕುಡ್ದ್ನೀರು ಅಳ್ಳಾಡ್ದಂಗಿದ್ನಪ್ಪಾ' (ಪು. ೨) 'ಮುನುಸ್ಕ್ಯಂಡು ಮುಸ್ರೆ ಮಡ್ಕೆ ತಕ್ಕಂಡವಳಲ್ಲಪ್ಪ' (ಪು. ೪೭). 'ಅಯ್ಯೊ ಆ ಕಾಲ ಒಂದಿತ್ತು ಕಣಪ್ಪ ನೆಲಗುದ್ದಿ ನೀರು ತೆಗೆಯೋರು ಅರವತ್ತೊರ್ಸ್ದ ಮುದುಕ್ರೂವೆ' (ಪು. ೬೯) ಇಂಥ ಮಾತುಗಳನ್ನು ಗಮನಿಸಬಹುದು. ರಾಮಜ್ಜ-ಪುಟ್ಟರಂಗ, ನಿರೂಪಕ-ಕರಿಯ, ಕಾಟಯ್ಯ-ಮರಿಯಯ್ಯ ಇವರ ಸಂಭಾಷಣೆಗಳು ಉತ್ತಮವಾಗಿವೆ. 'ಗಾಜು ಒಡೆಯಿತು' ಕತೆಯ ಉದ್ದಕ್ಕೂ ನಾರಾಯಣಯ್ಯ ಮತ್ತು ವೃದ್ಧರ ಜೊತೆ ವಾಗ್ವಾದ ನಡೆಯುತ್ತಲೇ ಇರುತ್ತದೆ. ಅತ್ಯಂತ ಕಡಿಮೆ ಸಂಭಾಷಣೆಯ ಕತೆ 'ಕಾವಲುಗಾರ'. ರಾತ್ರಿಯ ಹೊತ್ತು ಒಂಟಿಯಾಗಿ ಕಾವಲು ಕಾಯುವ ಕ್ರಿಯೆಯ ಕತೆಯಾದ್ದರಿಂದ ಸಹಜವಾಗಿಯೇ ಸಂಭಾಷಣೆ ಕಡಿಮೆಯಾಗಿದೆ. ಈ ಸಂಭಾಷಣೆಗಳಲ್ಲಿ ಕತೆಗಾರರು ಉಪಭಾಷೆಗಳನ್ನೂ ಜಾಗ್ರತೆಯಿಂದ ಬಳಸಿದ್ದಾರೆ.

ಈ ಕತೆಗಳಲ್ಲಿ ನಿರೂಪಣೆ, ವರ್ಣನೆ, ಸಂಭಾಷಣೆ, ಮನೋವಿಶ್ಲೇಷಣೆ ಹೆಗಲಿಗೆ ಹೆಗಲು ಕೊಟ್ಟು ಮುನ್ನಡೆದಿವೆ. ಉತ್ತಮ ಕತೆಗಾರನ ಬಂಡವಾಳವೇ ಇವುಗಳ ಯುಕ್ತ ಸಂಯೋಜನೆ.

ಜೀಶಂಪ ಅಂದ ಮೇಲೆ ಅವರಿಗೆ ಅತ್ಯಂತ ಪ್ರಿಯವಾದ ಜಾನಪದದ ಸಂಬಂಧವನ್ನು ಗಮನಿಸಲೇಬೇಕಾಗುತ್ತದೆ. ಈ ಎಲ್ಲ ಕತೆಗಳೂ ಗ್ರಾಮೀಣ ಪರಿಸರಕ್ಕೆ ಸೇರಿದುವೆಂಬುದೇ ಈ ಸಂಬಂಧಕ್ಕೆ ಹೆಗ್ಗುರುತೆಂಬ ಸೂಚನೆಯನ್ನು ಹಿಂದೆಯೇ ನೀಡಿದ್ದೇನೆ. ಅವರ ಕತೆಗಳ ಎಲ್ಲ ಅಂಶಗಳಲ್ಲಿಯೂ ಈ ಹಿನ್ನೆಲೆ ಕೆಲಸ ಮಾಡಿದೆ ಎಂಬುದನ್ನು ಪ್ರತ್ಯೇಕವಾಗಿ ವಿಶ್ಲೇಷಿಸಿ ತೋರಿಸಬೇಕಿಲ್ಲ. ಕೆಲವು ಕತೆಗಳಲ್ಲಿ ಅವು ಎದ್ದು ಕಾಣುವಂತೆಯೂ ಇವೆ. 'ಮಬ್ಬು ಜಾರಿದ ಕಣಿವೆಯಲ್ಲಿ' ಕತೆಯ ರಾಮಜ್ಜನ ಮನಃಪರಿವರ್ತನೆಯಲ್ಲಿ ಮುಂಜಾನೆದ್ದು ಹಾಡುವವರಾಗಿ ಬೀಸುವ ಪದದ ಪ್ರಭಾವವೂ ಇದೆ. 'ಕಲ್ಲು ತಾಗಿದ ಗಾಯ'ದಲ್ಲಿ ಹುಟ್ಟುವ ಮಗುವಿನ ಹೆಸರಿನ ಬಗೆಗೆ ದಂಪತಿಗಳು ಚರ್ಚಿಸುವುದು ಉತ್ತರ ಕರ್ನಾಟಕದ ಜಾನಪದದಲ್ಲಿ ಅತ್ಯಂತ ಪ್ರಸಿದ್ಧವಾಗಿರುವ 'ಬಸುರಿದ್ದೀನಿ ಹೆಸರೇನಿಡ್ಲೂ' ಎಂಬ ಸಂಭಾಷಣೆಯನ್ನು ನೆನಪಿಸುತ್ತದೆ. 'ಬಿಸಿಲು ನೆಕ್ಕಿದ ಕುಡಿ'ಯಲ್ಲಿ ಸೋಮನ ಕುಣಿತದ ಹೆಗ್ಗಳಿಕೆಯಿದೆ. 'ಶನಿಯ ಕೋಪ'ದ ಕಾರ್ಯಕ್ಷೇತ್ರವೇ ಜಾನಪದ ರಂಗಭೂಮಿ. 'ಏಕನಾದ'ದಲ್ಲಿ ಭೈರಾಗಿಯ ಮಾಟ-ಮಂತ್ರದ ಮಾತಿನ ಗತ್ತುಗಳಿವೆ. 'ಕೋಲ ಹಿಡಿಯಿತು ಕರುಣೆಯ ಕೈ' ಎಂಬುದರ ವಿದ್ಯಾರ್ಥಿ ನಾಗರಾಜ ಹಾಡುವುದು ಬಯಲಾಟದ ಪದವನ್ನು.

ಜೀಶಂಪ ಅವರ ಕತೆಗಳು ಗ್ರಾಮಜೀವನದ ಚಿತ್ರಗಳನ್ನು ಯಶಸ್ವಿಯಾಗಿ ಸೆರೆ ಹಿಡಿದಿವೆ. ಅವುಗಳಿಗಾಗಿ ಅವರು ಓದುಗನಿಗೆ ವಿಶೇಷವಾದುದು ಎನಿಸಬಹುದಾದ ವ್ಯಕ್ತಿತ್ವಗಳು, ಘಟನೆಗಳು, ನಡವಳಿಕೆಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಈ ಕತೆಗಳು ಸೀಮಿತ ಉದ್ದೇಶದವು ಎಂಬುದನ್ನು ಒಪ್ಪಲೇಬೇಕಾಗುತ್ತದೆ. ವಸ್ತು ಮತ್ತು ಅಭಿವ್ಯಕ್ತಿಗೆ ಸಂಕೀರ್ಣತೆಯನ್ನು ತಂದುಕೊಡುವ ಸಮಗ್ರದೃಷ್ಟಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕ್ರಿಯಾಶೀಲವಾಗಬೇಕಿತ್ತೆನಿಸುತ್ತದೆ. ಉತ್ತಮ ಕತೆಗೆ ಸಮರ್ಥ ಒಳನೋಟಗಳು ಬೇಕಾಗುತ್ತವೆ. ಗ್ರಾಮಜೀವಕ್ಕೊಲಿದ ಅವರಿಗೆ ಅದನ್ನು ನಿಕಷಕ್ಕೊಡ್ಡಬೇಕು ಎನಿಸಿಲ್ಲ.

ವಿದ್ಯಾರ್ಥಿ ಜೀವನ ಕಳೆದ ಮೇಲೆ ಈ ಕ್ಷೇತ್ರವನ್ನೇ ಬಿಟ್ಟ ಅವರಿಂದ ಮಾಗಿದ ಫಸಲು ಬರಲಿಲ್ಲ. ಅವರ ಸುಮಾರು ಐವತ್ತು ವರ್ಷಗಳ ಬಳಿಕ ಅವರ ಕತೆಗಳನ್ನು ಗಮನಿಸಿದಾಗ ಅವು ನಮ್ಮ ಸಂಸ್ಕೃತಿಯ ಚಲನೆಯ ಗತಿಯನ್ನು ಅರ್ಥ ಮಾಡಿಕೊಳ್ಳಲು ಬೇಕಾದ ಮಹತ್ವದ ದಾಖಲೆಗಳಾಗಿ ಕಾಣಿಸುತ್ತವೆ. ಈ ದೃಷ್ಟಿಯಿಂದ ಅವರ ಕತೆಗಳಿಗೆ ಕನ್ನಡ ಸಣ್ಣ ಕಥಾಕ್ಷೇತ್ರದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವಿದೆ.

### ಆಕರಗಳು

೧) ಪರಮಶಿವಯ್ಯ ಜಿ.ಶಂ. ೧೯೭೪ 'ಮಬ್ಬು ಜಾರಿದ ಕಣಿವೆಯಲ್ಲಿ', ಮೈಸೂರು, ನೆಲಮನೆ ಪ್ರಕಾಶನ.

೨) ಲಕ್ಕಪ್ಪಗೌಡ ಎಚ್.ಜೆ. (ಸಂ) ೧೯೯೫ 'ಜೀಶಂಪ ಸಂಸ್ಮರಣೆ', ಬೆಂಗಳೂರು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.

□

ಡಾ. ಎಂ. ಶಂಕರ್
ಕನ್ನಡ ಅಧ್ಯಾಪಕ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

# ಮಂದಿರ ಮಸೀದಿಗಳೆಂಬ ದೇವಸ್ಥಾನ

ಮಾಲತಿ ಪಟ್ಟಣಶೆಟ್ಟಿ

ಓ ಸರ್ವಾಂತರ್ಯಾಮಿ ದೇವರೆ,
ಏಕಾಗಿ ಬಂತು ನಿನಗೀ ಅನಿವಾರ್ಯ?
ಈ ರೀತಿ ನಿನ್ನಲ್ಲೇ ನಿನಗೇ ಅಧೈರ್ಯ,
ಅವಿಶ್ವಾಸ, ಅಸ್ಥಿರ ಭಾವ-ಭಂಗುರ?

ಏಕಿಷ್ಟು ಸಂಖ್ಯೆಯಲ್ಲೀಗ ಗುಡಿಗುಂಡಾರ?
ಇಷ್ಟೊಂದು ಅವಸರದಲ್ಲಿ ಮಸೀದಿ?
ಸಿಕ್ಕ ಸಿಕ್ಕಲ್ಲಿ ಕಲ್ಲಿಗೊಂದೊಂದು ಗುಡಿ
ದಿಕ್ಕು ದಿಕ್ಕೆಟ್ಟಲ್ಲಿ ಅಜಾದ ನುಡಿ?

ದಯೆವೇ ಧರ್ಮವೆಂದ ನಿನಗಾಗಿ
ಏಕೆ ಇಷ್ಟೊಂದು ಹಿಂಸೆ? ರಕ್ತಪಾತ?
ನಿನ್ನ ಹೆಸರಲ್ಲೇಕಿಷ್ಟು ಕ್ರೌರ್ಯ, ಶತೃತ್ವ?
ಯುದ್ಧಕ್ಕೆ ಕಾರಣ? ಓ ಜಗತ್ಕಾರಣನೆ?
ಏಕೆ ಪ್ಯಾಲೆಸ್ಟೈನ್ ಬಾಮಿಯಾನ ಅಯೋಧ್ಯಾ ಕಾಂಡಗಳು?

ನಿನಗಾಗಿ ಕಟ್ಟುವ ಒಂದೊಂದು ಗುಡಿ
ಛೇದಿಸುತ್ತ ಸಹಬಾಳ್ವೆಯ ಕುಡಿ

ಧ್ವಂಸಗೊಳಿಸುತ್ತದೆ ಅನಾದಿ ಸಂಸ್ಕೃತಿಯ ವನ!
ನಿನಗಾಗಿ ತಲೆಯೆತ್ತುವ ಒಂದೊಂದು ಮಸೀದಿ
ಭೇದಿಸುತ್ತ ಅರ್ದ್ರ ಅವಿಚ್ಛಿನ್ನ ಆತ್ಮಗಳ ಸಿದ್ಧಿ!
ಭಗ್ನಗೊಳಿಸುತ್ತದೆ ಸಂತರ ತಪೋಸಿದ್ಧಿ!!

ಓ ದೀನ ಬಂಧುವೇ ಕೃಪಾ ಸಿಂಧುವೆ,
ಎಷ್ಟೆಷ್ಟು ನಿನ್ನ ಗುಡಿ ಆಕ್ರಮಿಸುತ್ತದೊ
ನಮ್ಮ ಮಕ್ಕಳ ಆಟದ ಬಯಲು,
ಎಷ್ಟೆಷ್ಟು ಸಲ ನಿನ್ನ ಮಸೀದಿ ಅತಿಕ್ರಮಿಸುತ್ತದೊ
ಬಡವರ ಸೂರಿನ ಮುಗಿಲು,
ಅಷ್ಟಷ್ಟು ಸಲ ಸಾಯುತ್ತದೆ
ನಿನ್ನಲ್ಲಿಟ್ಟ ನಮ್ಮ ಭಕ್ತಿ, ನಮ್ಮ ನಿಷ್ಠೆ !

ಓ ಜಗದೊಡೆಯನೆ
ಕೂಗಾಡಿ ಸೋತ ಶಬ್ದಗಳ ಕೊನೆಗೆ
ತೋರಿಸಲೇನು ಎದೆ ಬಗೆದು,
ಅಗ್ನಿ ಕುಂಡವಾದ ನನ್ನ ಜನಗಳ ಆತ್ಮ ?
ಪ್ರಾರ್ಥಿಸುವೆ ಓ ಜಗದೋದ್ಧಾರಕ
ಹೇಳು ನಿನಗೆಷ್ಟು ಸ್ಥಳ ಬೇಕು
ನಿನಗಾವ ನೆಲೆ ಬೇಕು ?
ಮಣ್ಣೊಳಗೆ ಮಣ್ಣಾಗಿ ಕುಸಿವ
ಗೋಡೆಗಳ ಹಂದರವೊ?
ಅಲ್ಲಮ ಅಜಗಣ್ಣರು ಕಂಡ
ಬಯಲು ಆಲಯದ ಮುಕ್ತಮಂದಿರವೊ?

□

---

ಮಾಲತಿ ಪಟ್ಟಣಶೆಟ್ಟಿ
ಶ್ರೀ ಗಣೇಶ ಅಪಾರ್ಟ್‌ಮೆಂಟ್
ರಜತಗಿರಿ, ಧಾರವಾಡ - ೪

# ಗೀತಾನಾಗಭೂಷಣ ಅವರ ಬದುಕು ಕಾದಂಬರಿ : ಒಂದು ವಿವೇಚನೆ

ಮಲ್ಲಿಗಹಳ್ಳಿ ನರೇಂದ್ರಕುಮಾರ್

ಇಪ್ಪತ್ತನೇ ಶತಮಾನದ ಎಪ್ಪತ್ತರ ದಶಕದಿಂದ ಈಚೆಗೆ ಕನ್ನಡದ ಕಾದಂಬರಿ ಸಾಹಿತ್ಯದಲ್ಲಿ ಭಿನ್ನ ಭಿನ್ನ ಪ್ರದೇಶಗಳ ಗ್ರಾಮೀಣ ಬದುಕಿನ ತಳಸಮುದಾಯಗಳ ವಾಸ್ತವ ಚಿತ್ರಣಗಳು ಹೆಚ್ಚು ಹೆಚ್ಚು ದಾಖಲಾಗತೊಡಗಿದವು. ಈ ಮುಖೇನ ಗ್ರಾಮಭಾರತದ ಸಮಗ್ರ ಸಾಮಾಜಿಕ ಸ್ಥಿತಿಯ ಆಳ ಅಗಲಗಳು ಸಾಹಿತ್ಯ ಲೋಕಕ್ಕೆ ನಿಧಾನವಾಗಿ ದಾಖಲಾಗತೊಡಗಿತು. ಇದರಿಂದ ಸಾಹಿತ್ಯ ಜನಮುಖಿಯಾಗಲು ಸಾಧ್ಯವಾಯಿತು.

ಗ್ರಾಮ ಜಗತ್ತು ಎಂದಿಗೂ ತನ್ನ ಅಂತರ್ಯದಲ್ಲಿ ಭಾವನಾತ್ಮಕ ಗಾಢ ಸಂಬಂಧ, ಸಾಂಸ್ಕೃತಿಕ ಅನನ್ಯತೆಗಳನ್ನು ಒಳಗೊಂಡಿರುತ್ತದೆ. ಆದರೆ ಜಾತಿಪದ್ಧತಿ, ಸಾಂಪ್ರದಾಯಿಕ ಜೀವನ ಕ್ರಮ ಹಾಗೂ ಜಮೀನ್ದಾರಿಕೆಯ ಗತ್ತಿನ ಪರಿಸರದಲ್ಲಿ ಮನುಷ್ಯರ ನಡುವೆ ಅನಂತ ಬಿರುಕು, ಕ್ರೌರ್ಯ, ದೌರ್ಜನ್ಯಗಳೇ ಮುಖ್ಯವಾಗಿ ಬಿಡುತ್ತವೆ. ಮನುಷ್ಯ ತಾನೇ ರೂಢಿಸಿಕೊಂಡಿರುವ ಸಾಂಪ್ರದಾಯಿಕ ಸಂಕೋಲೆಗಳು ಮಾನವೀಯತೆಗೆ ಬಹುದೊಡ್ಡ ತೊಡಕಾಗಿವೆ. ಈ ಹಿನ್ನೆಲೆಯಲ್ಲಿ ಗೀತಾನಾಗಭೂಷಣ ಅವರ 'ಬದುಕು' ಕಾದಂಬರಿಯು ಒಂದು ಕುಟುಂಬದ ಏರುಪೇರಿನ ಜೀವನದ ಸ್ಥಿತಿಗತಿಗಳನ್ನು ಮುಖ್ಯವಾಗಿಸಿಕೊಂಡಿದ್ದರೂ ಅದರಾಚೆಗಿನ ಗ್ರಾಮ ಬದುಕಿನ ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆಯ ಸ್ಥಿತಿಗತಿಗಳನ್ನು ಸಮರ್ಥವಾಗಿ ಕಟ್ಟಿಕೊಡುತ್ತದೆ.

ಮಧ್ಯಮ ಜಾತಿಯವನಾದ ಕಾಟಗರ ಜಮಾದಾರಿ ಮಲ್ಲಪ್ಪ ಆರ್ಥಿಕವಾಗಿ ಸದೃಢವಾಗಿದ್ದರೂ ಗ್ರಾಮವ್ಯವಸ್ಥೆಯ ಜಾತಿವಾಸ್ತವದ ಮುಂದೆ ಕಂಗಾಲಾಗುತ್ತಾನೆ. ಶ್ರಮಸಂಸ್ಕೃತಿಯ ಹಿನ್ನೆಲೆಯ ಮಲ್ಲಪ್ಪನಿಗೆ ತಾನು ಹಾಗೂ ತನ್ನ ಕುಟುಂಬ ಸ್ವಾಭಿಮಾನ-ಗೌರವದಿಂದ ಬಾಳಬೇಕೆಂಬ ಹಂಬಲವಿದೆ.

ಆದರೆ ನಿಜಸ್ಥಿತಿ ವಿಭಿನ್ನವಾಗಿದೆ. "ಈ ಸೂಳ್ಯಾಮಕ್ಕಳಿಗಿ ಕೆಳಜಾತಿ ಮಂದಿ ತಮ್ಮ ಸರಿ ಜೋಡಿ ಬೆಳ್ಯಾದು ಬೇಕಾಗಿರಲಿಲ್ಲ. ಅವರಂಗ ನಾವು ಮಸಿ ಕಟ್ಟಬಾರ್ದು, ಅವರಂಗ ನಾವು ಬೆಳ್ಳಗಿನ ಬಟ್ಟಿ ಉಟ್ಕೋಬಾರ್ದು, ಅವರ ಹೆಂಗಸರಂಗ ನಮ್ಮೆಂಗಸರು ಜರತಾರಿ ಸೀರಿ ಉಟ್ಕೊಂಡು ಒಡವಿ ವಸ್ತ್ರಾ ಇಟ್ಕೋಬಾರ್ದು ಅಂತ ಮ್ಯಾಗೇರಿದ ವುಳ್ಳವರೆಲ್ಲಾ ಒಳಗೊಳಗೇ ಮಸಲತ್ತು ಮಾಡ್ತಾರ ಮಕ್ಕಳು "(ಪು. ೧೯೦) ಎಂದು ಮಲ್ಲಪ್ಪನು ಹೇಳುವ ಮಾತಿನ ಹಿಂದೆ ಆತನ ನೈತಿಕ ಸಿಟ್ಟಿದೆ. ಈ ವಾಸ್ತವ ಭೀಕರತೆಯು ಜಾತಿ ಕಾರಣಕ್ಕೆ ಉಂಟಾದ ಈರ್ಷೆಯ ನೆಲೆಯದು. ಅಲ್ಲದೆ ಪರಂಪರಾಗತವಾಗಿ ಉಳಿದುಬಂದ ಮನುಪ್ರಣೀತ ಸಾಮಾಜಿಕ ಸ್ಥಿತಿಯಾಗಿದೆ. ಆದರೆ ಇಂತಹ ಸಂಘರ್ಷದ ನಡುವೆಯೇ ಅನಿವಾರ್ಯವಾಗಿ ಜೀವಿಸಬೇಕಾದ ಸಂಕೀರ್ಣತೆ ಮಲ್ಲಪ್ಪನ ಜಾತಿ ಸಮುದಾಯದ್ದಾಗಿದೆ. ಕಾದಂಬರಿಯಲ್ಲಿ ಇದು ಮುಂದುವರೆದು ಯಾವುದೇ ಜಾತಿಬದ್ಧ ಮನಸ್ಸಿನ ಮೇಲ್ಜಾತಿಯ ವ್ಯಕ್ತಿತ್ವ ತನ್ನ ಕೆಳಜಾತಿಗಳನ್ನು ಕಾಣುವ ಬಗೆಯನ್ನು ಸಂಕೇತಿಸುತ್ತದೆ.

ಪ್ರಖರ ಜಾತಿಪದ್ಧತಿಯ ಆಚರಣೆಯುಳ್ಳ ಶಿವಳ್ಳಿಯಂತಹ ಗ್ರಾಮಸಮಾಜದಲ್ಲಿ ಮಲ್ಲಪ್ಪನ ಕಿರಿಯ ಮಗಳು ಕಾಶಮ್ಮ ಹಾಗೂ ಊರಿನ ಗೌಡನಾದ ಗುರ್ಲಿಂಗಪ್ಪನ ಮಗ ಲಿಂಗರಾಜನ ನಡುವೆ ಆಕಸ್ಮಿಕವಾಗಿ ಅಂಕುರಿಸುವ ಪ್ರೇಮ ಸಹಜವಾದುದು. ಆದರೆ ಮೇಲ್ಜಾತಿಯ ಪಟ್ಟಭದ್ರ ಹಿತಾಸಕ್ತಿಗೆ ತನ್ನ ಜಾತಿ ಪ್ರಾಬಲ್ಯ ಹಾಗೂ ಪ್ರತಿಷ್ಠೆಯೇ ಮುಖ್ಯವಾಗಿ ಪ್ರೀತಿಗೆ ಉಗ್ರವಿರೋಧ ವ್ಯಕ್ತವಾಗುತ್ತದೆ. ಮಲ್ಲಪ್ಪನ ಕುಟುಂಬ ಕಾಶಮ್ಮಳನ್ನು ತನ್ನ ಪರಿಸರದ ಆಚೆಗೆ; ದೂರದ ಸೊಲ್ಲಾಪುರದ ಮಾರ್ತಾಂಡನಿಗೆ ಕೊಟ್ಟು ಮದುವೆ ಮಾಡುತ್ತದೆ. ಆದರೆ ಅನೇಕ ವರ್ಷಗಳ ನಂತರವೂ ಈಗಾಗಲೇ ಮದುವೆಯಾಗಿರುವ ಲಿಂಗರಾಜನು ಕಾಶಮ್ಮಳನ್ನು ಆಕೆಯ ಒಪ್ಪಿಗೆ ಪಡೆದು ತನ್ನ ತೋಟದ ಮನೆಯಲ್ಲಿ ಉಳಿಸಿಕೊಂಡು ಸಂಸಾರ ಮಾಡುತ್ತಾನೆ. ಆದರೆ ಇವರಿಬ್ಬರು ಒಂದಾಗುವ ಮೂಲಕ ಮಲ್ಲಪ್ಪನ ಕುಟುಂಬ ಅಧಃಪತನದತ್ತ ಸಾಗುತ್ತದೆ. ತನ್ನ ಸುತ್ತಲಿನ ಜನರ ಅಪವಾದದ ಮಾತುಗಳಿಂದ ಮಲ್ಲಪ್ಪ ಆತ್ಮಹತ್ಯೆ ಮಾಡಿಕೊಂಡರೆ, ಮಲ್ಲಪ್ಪನ ಹೆಂಡತಿ ಮಲ್ಲವ್ವ ಇದೇ ನೋವಿನಲ್ಲಿ ಅರೆಹುಚ್ಚಿಯಾಗುತ್ತಾಳೆ. ತಮ್ಮ ಕುಟುಂಬದ ಬಗೆಗೆ ವ್ಯಂಗ್ಯವಾಡಿದ ಮುಕುಡಪ್ಪನನ್ನು ಕೊಂದು ಮಲ್ಲಪ್ಪನ ಮಗ ಕಲ್ಯಾಣಿ ಜೈಲು ಸೇರುತ್ತಾನೆ. ಕಲ್ಯಾಣಿಯ ಹೆಂಡತಿ ಬೆಳ್ಳಿ ಈ ಎಲ್ಲ ನೋವು ಹಾಗೂ ಅಭದ್ರತೆಯ ನಡುವೆಯೇ ಕೊರವರ ಈರವ್ವನೊಟ್ಟಿಗೆ ಸೇರಿ ತನ್ನ ವೃತ್ತಿಯಲ್ಲದ ಈಚಲು ಚಾಪೆ, ಬುಟ್ಟಿ ಹೆಣಿಗೆ ಮಾಡುವುದನ್ನು ಕಲಿತು, ಊರವರು ಹಂಗಿಸಿದರೂ ಸ್ವಾಭಿಮಾನದಿಂದ ಬದುಕುತ್ತಾಳೆ. ಜಾತಿಬದ್ಧ ಸಮಾಜದಲ್ಲಿ ಆಯಾ ಜಾತಿಯನ್ನು ಮೀರುವ ಪ್ರಕ್ರಿಯೆಯ ಬದಲಾವಣೆಯು ಹೇಗೆ ಇಡೀ ಕುಟುಂಬವನ್ನು ತಲ್ಲಣಕ್ಕೆ ದೂಡುತ್ತದೆ ಎಂಬುದು ವ್ಯಕ್ತವಾಗುತ್ತದೆ. ಬದುಕಿನ ತಿರುವನ್ನು ಕಾದಂಬರಿಕಾರರು ಕಟ್ಟಿಕೊಡುತ್ತಲೇ ಅತ್ಯಂತ ಸೂಕ್ಷ್ಮವಾಗಿ ವೈಚಾರಿಕತೆಯನ್ನು ಕಾದಂಬರಿಯೊಳಗೆ ಧ್ವನಿಸುತ್ತಾರೆ. ಕಾಶಮ್ಮ ಹುಟ್ಟಿದಾಗ ದೋಸಗ್ಯಾ ಜ್ಯೋತಿರಾಮನು "ಮಲ್ಲಪ್ಪಂದೇ ಪಡಿಯಚ್ಚದಾ ಕೂಸು. ಹೆಣ್ಣು ಮಕ್ಕಳು ತಂದಿ ಹಂಗಿದ್ದರ ಮನೀಗಿ....ಸುಭ ಆಗತೈತಿ....ನಿನ್ ಹುಂದರೇರತೈತೀ...." (ಪುಟ ೧೩) ಎಂದು ಹೇಳುತ್ತಾನೆ. ಸ್ವತಃ ಮಲ್ಲಪ್ಪನ ಕುಟುಂಬದವರೇ ಮೊದಲಿಗೆ 'ಅಂವನ ಮಾತು ಖರೇ....' ಎಂದು ನಂಬುತ್ತಾರೆ. ಆದರೆ ವಿಡಂಬನೆಯೆಂದರೆ ಕಾಶಮ್ಮಳ ಕಾರಣಕ್ಕೆ ಮಲ್ಲಪ್ಪನ ಇಡೀ ಕುಟುಂಬ ತನ್ನೆಲ್ಲಾ ಆಸ್ತಿ, ಒಡವೆ, ವ್ಯಕ್ತಿಗೌರವ, ಜೀವಗಳನ್ನು ಕಳೆದುಕೊಳ್ಳುತ್ತದೆ

ಎನ್ನುವುದಿಲ್ಲಿ ಗಮನಾರ್ಹ. ಜ್ಯೋತಿಷ್ಯದ ಹುಸಿತನವನ್ನೂ ಲೇಖಕಿ ಸಮರ್ಥವಾಗಿ ಬಹಿರಂಗ ಪಡಿಸುತ್ತಾರೆ.

ಕಾಟಗರ ಮಲ್ಲಪ್ಪನ ಕುಟುಂಬದ ದುರಂತದ ಜೊತೆಗೇ ಉತ್ತರ ಕರ್ನಾಟಕದ ದಲಿತರಲ್ಲಿ ಆಚರಣೆಯಲ್ಲಿರುವ ಜೋಗಿಣಿ ಬಿಡುವ ಪದ್ಧತಿಯ ಅಮಾನವೀಯ ಚಿತ್ರಣವನ್ನು ಕಾದಂಬರಿಯು ವಿವರವಾಗಿ ತಿಳಿಸುತ್ತದೆ. ಇಲ್ಲಿ ದೈವ ನಂಬಿಕೆಯು ದಲಿತರಿಗೆ ಮೌಢ್ಯವಾಗಿ, ಭಯವಾಗಿ ಹಾಗೂ ಶೋಷಣೆಗೆ ತಮ್ಮನ್ನು ಮುಗ್ಧವಾಗಿ ತೆತ್ತುಕೊಳ್ಳುತ್ತಿರುವ ದುರಂತವಾಗಿದೆ.

ಹೊಲಯರ ಭರಮ್ಯಾ ಹಾಗೂ ಆತನ ಹೆಂಡತಿ ಮರಗಿ ತಮ್ಮ ಮಗಳು ನೀಲವ್ವಳನ್ನು ತಮಗೇ ವೈಯಕ್ತಿಕವಾಗಿ ಇಷ್ಟವಿಲ್ಲದಿದ್ದರೂ ಮಾಪುರದೇವಿಗೆ ಜೋಗಿಣಿ ಬಿಡುತ್ತಾರೆ. ಮರಗಿಯು "....ಮಗಳಿಗಿ ದೇವಿ ಸೇವಾಕ್ಕ 'ಜೋಗಿಣಿ' ಬಿಡಾದು ಅಂದ್ರ ಈ ನನ್ ಹೊಟ್ಯಾಗಿನ ಕಳ್ಳನಾಗ ಮುಳ್ಳಾಡ್ತಾವೇ ತಾಯಿ' (ಪುಟ ೨೨) ಎಂದು ಕಣ್ಣೀರಿಡುತ್ತಾಳೆ. ಆದರೆ ದೇವಿ ಮೈಮೇಲೆ ಬಂದಾಗ ಪೂಜಾರಿ ಆಡಿರುವ : "....ನಿನ್ ಮಗಳಿಗೆ ನನ್ ಸೇವಾಕ್ಕ ಬಿಡು. ಆಕಿಗಿ ಜೋಗಿಣಿ ಮಾಡು. ನಿನ್ ಗಂಡಗ ನಾ ಉಗಳಿ ಬಿಟಾಕ್ತೀನಿ. ಇಲ್ಲಂದ್ರ ಬಾಳಿಹಣ್ಣ ನುಂಗಂಗ ಭರಮ್ಯಾಗ ನುಂಗಿ ಬಿಡ್ತೀನಿ....ನಿನ್ನ ಮನ್ಯಾಗ ರಗತದ ಹಳ್ಳ ಹರಸ್ತೀನಿ....ಹೆಣಗಳ ರಾಶಿ ಒಟ್ಟತೀವಿ....ಹುಷಾರ್" (ಪುಟ ೩೪) ಈದು ಮಾತುಗಳು ಆಕೆಯನ್ನು ಹಾಗೂ ಭರಮ್ಯಾನನ್ನು ಮಾನಸಿಕ ಜರ್ಜರತೆಗೆ ಒಳಗು ಮಾಡುತ್ತವೆ. ಈ ನಂಬಿಕೆಯನ್ನು ಬಿತ್ತರಿಸುವುದರ ಹಿಂದೆ ಹೇಗೆ ಪುರೋಹಿತಶಾಹಿಗಳ, ಜಮೀನ್ದಾರರ ಹಾಗೂ ಶಕ್ತಜಾತಿ ಮನಸ್ಸುಗಳ ವಿಕಾರ ಮನಸ್ಸಿನ ಹುನ್ನಾರವಿದೆ ಎಂಬುದನ್ನು ಕಾದಂಬರಿಯು ತೆರೆದಿಡುತ್ತದೆ.

ನೀಲವ್ವಳನ್ನು ಆಕೆಗೇ ಇಷ್ಟವಿಲ್ಲದಿದ್ದರೂ ಒತ್ತಾಯಪೂರ್ವಕವಾಗಿ ಜೋಗಿಣಿ ಮಾಡಿದ ಕಾರಣವಾಗಿ ಹಾಗೂ ಅದೇ ನೆಪವಾಗಿ ಆಕೆಯ ಪ್ರಿಯಕರ ತುಕಾರಾಮ ಕೈಕೊಟ್ಟದ್ದರಿಂದ ನೀಲವ್ವ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಒಂದು ಸಂಪ್ರದಾಯ ಹೇಗೆ ಲೈಂಗಿಕ ಶೋಷಣೆ ಹಾಗೂ ಜೀವಕಂಟಕವಾಗಿ ಅಮಾಯಕ ಬದುಕಿಗೆ ಎರವಾಗುತ್ತದೆ ಎಂಬುದು ಇಲ್ಲಿ ವ್ಯಕ್ತವಾಗಿದೆ.

ಮಾದಾರ ಕಳಸಪ್ಪನ ಮಗಳು ತುಳಜಾ ತಾನು ಜೋಗಿಣಿಯಾದರೂ ಅದನ್ನು ಮೀರಿ ತನ್ನನ್ನು ಒಪ್ಪುವ ಹುಸನಪ್ಪನ ಜೊತೆ ಮುಂಬೈಗೆ ಓಡಿ ಹೋಗಿ ಸಾಂಸಾರಿಕ ಜೀವನ ನಡೆಸುತ್ತಾಳೆ. ಕಾಲಾನಂತರ ತನ್ನ ಮಗು ಹಾಗೂ ಗಂಡನೊಡನೆ ತನ್ನ ತಂದೆ-ತಾಯಿಯನ್ನು ನೋಡಲು ಊರಿಗೆ ಬರುವ ಆಕೆಗೆ ವ್ಯವಸ್ಥೆ ದಿಗ್ಬಂಧನ ವಿಧಿಸಿ ಮತ್ತೆ ಆಕೆಯನ್ನು ಜೋಗಿಣಿಯಾಗಲು ಒತ್ತಾಯಿಸುತ್ತದೆ. ಆದರೆ ಆಕೆ ಅತ್ಯಂತ ಸ್ವಾಭಿಮಾನ ಮತ್ತು ಆತ್ಮಸ್ಥೈರ್ಯದಿಂದ ವ್ಯವಸ್ಥೆಯನ್ನು ಎದುರುಗೊಳ್ಳುತ್ತಾಳೆ. ಸತಾಯಿಸುವ ಪೂಜಾರಿಗೆ "....ಖರೆ ಹೇಳು ನೀನು....ಆ ಮಾಪುರ ತಾಯಿ ನಿನ್ನ ಮೈಯಾಗ ಬಂದು ನಮ್ಮ ಕೇರ್ಯಾಗಿನ ಹರೇದ, ಚಲುವಿನ ಪೋರಿಗೊಳಾಗಿ ಸೂಳೇರ ಆಗಲಿ ಅಂತ ಹೇಳ್ತಾಳೇನು? ನೀ ಖರೇ ಆಕಿನ ಭಕ್ತ ಇದ್ದೆಂದ್ರ ಆ ದೇವಿ ಮ್ಯಾಲ ಆಣೆ ಮಾಡಿ ಹೇಳ ನೀನು" (ಪುಟ ೨೨೧) ಎಂದು ಸವಾಲು ಹಾಕುತ್ತಾಳೆ. ಇದಕ್ಕೆ ತೀವ್ರ ಪ್ರತಿರೋಧ ಒಡ್ಡಿ ಬಹಿಷ್ಕಾರದ ಬೆದರಿಕೆ ಹಾಕುವ ಊರ ನ್ಯಾಯದವರಿಗೆ-"ನೀವು ಕೊಟ್ಟ ತೀರ್ಮಾನ ನಮಗೆ ಒಪ್ಪಿಗೆಯಿಲ್ಲ. ಏಕತರಫಾ ನ್ಯಾಯಾ ನಿಮ್ದು. ನಾವೇನು ತಪ್ಪು ದಂಡ ಕುಡಂಗಿಲ್ಲ. ಹಾಂಗ ಕುಡ್ಲಕ್ಕ ನಾವೇನೂ

ತಪ್ಪು ಕೆಲಸಾ ಮಾಡಿಲ್ಲ ! ನೀವು ನಮ್ಮಪ್ಪಗೇನು ಕುಲದಲಿಂದ ಕೇರಿಲಿಂದ ಹೊರಗಿಡ್ತೀರಿ ? ನಾನೆ ನಮ್ಮಪ್ಪ, ಅವ್ವಗ ಈ ಊರುಕೇರಿಯಿಂದ ದೂರ ಮಾಡಿ ನನ್ ಜೋಡಿ ಕರ್ಕೊಂಡ ಹೋಗ್ತೀನಿ....ನಿಮಗಾ....ನಿಮ್ ನ್ಯಾಯಕ್ಕಾ ದೊಡ್ಡ ನಮಸಗಾರ್ರೀಯಪ್ಪಾ" (ಪುಟ ೨೨೫) ಎಂದು ಆ ಪರಿಸರದಿಂದ ದೂರ ನಡೆಯುತ್ತಾಳೆ. ಬಿಡುಗಡೆಯ ಆಶಯವಾಗಿ ಕಾದಂಬರಿಯಲ್ಲಿ ಇದು ವ್ಯಕ್ತಗೊಳ್ಳುತ್ತದೆ.

ಕೆಳಜಾತಿ ಜನಕ್ಕೆ ಮಾತ್ರವೇ ಸೀಮಿತವಾಗಿರುವ ಈ ಜೋಗಣಿ ಬಿಡುವ ಪದ್ಧತಿಯ ಹಿಂದಿರುವ ಕ್ರೌರ್ಯವನ್ನು ಹಾಗೂ ಜೋಗಣಿಯರ ಬದುಕಿನ ಕರಾಳತೆಯನ್ನು ಕಾದಂಬರಿಕಾರರು  ಮೌಢ್ಯ, ಅಜ್ಞಾನ, ಅನಕ್ಷರತೆಯಿಂದಾಗುವ ಶೋಷಣೆಯ ದುರಂತಗಳನ್ನು ನೈಜತೆಯೊಟ್ಟಿಗೆ ಧ್ವನಿಸುತ್ತಾರೆ.

ಸಾಂಪ್ರದಾಯಿಕ ನ್ಯಾಯಾಂಗ ವ್ಯವಸ್ಥೆಯ ಒಳಗೊಂಡಿರುವ ಅಸಮಾನತೆಯ ಪರಿಕಲ್ಪನೆಗಳನ್ನು ಕಾದಂಬರಿ ಕಟ್ಟಿಕೊಡುತ್ತದೆ. ದಲಿತರ ಬದುಕಿಗೆ ಎರವಾಗುವ ಜೋಗಣಿ ಪದ್ಧತಿ ಉಳಿಯಲು ಸಾಂಪ್ರದಾಯಿಕ ನ್ಯಾಯ ಪದ್ಧತಿ ಒಪ್ಪುವಂತೆಯೇ, ಹದಿನಾಲ್ಕು ವರ್ಷಗಳ ಜೈಲನ್ನು ಅನುಭವಿಸಿ ಪಶ್ಚಾತ್ತಾಪಕ್ಕೆ ತನ್ನನ್ನು ಒಳಪಡಿಸಿಕೊಂಡು ಹೊಸ ಮನುಷ್ಯನಾಗಲು ಕಾಯಕಯೋಗಿಯಾಗುವ ಕನಸುಳ್ಳ ಕಲ್ಯಾಣಿಯನ್ನು ಇದೇ ನ್ಯಾಯ ವ್ಯವಸ್ಥೆ ಆತ ಜೈಲಿನಲ್ಲಿದ್ದು ಬಂದುದರಿಂದ ಸುದ್ದಿ ಕಾರ್ಯ ಮಾಡಬೇಕೆಂದು ಆತನನ್ನು ಇನ್ನಷ್ಟು ಕಂಗಾಲು ಮಾಡುತ್ತದೆ. ಆ ಊರ ಪರಿಸರದಲ್ಲೆ ಅನಿವಾರ್ಯವಾಗಿ ಬದುಕಬೇಕಾದ ಕಲ್ಯಾಣಿ ನ್ಯಾಯಕ್ಕೆ ಹೆದರಿ ಅವರ ತೀರ್ಮಾನದಂತೆ ನಡೆಯಲು ಮತ್ತಷ್ಟು ಸಾಲ ಮಾಡಿ ಇನ್ನಷ್ಟು ಜರ್ಝರಿತನಾಗುತ್ತಾನೆ. ಹೇಗೆ ಜಡವ್ಯವಸ್ಥೆ ಮತ್ತೆ ಮತ್ತೆ ತನ್ನ ಹಿಂಸೆಯ ಮೂಲಕ ಮನುಷ್ಯನನ್ನು ಮತ್ತಷ್ಟು ಶೋಷಣೆಗೆ ಒಳಪಡಿಸಿ ಕಂಗಾಲು ಮಾಡಿ ಮಾನವೀಯತೆಗೆ ತೊಡಕಾಗುತ್ತದೆ ಎಂಬುದನ್ನು ಇಲ್ಲಿ ಗಮನಿಸಬಹುದು.

ಎಲ್ಲವೂ ಇದ್ದು ತಮ್ಮ ವೈಯಕ್ತಿಕ ತಪ್ಪಿನಿಂದ ಇದ್ದುದನೆಲ್ಲ ಕಳೆದುಕೊಳ್ಳುವ ಮಲ್ಲಪ್ಪನ ಕುಟುಂಬ ಒಂದೆಡೆಯಾದರೆ, ಏನೂ ಇಲ್ಲದ ಕೊಳಗೇರಿ ಮಂದಿಯು ಬೇರೆ ಬೇರೆ ದಂದೆಗಳಲ್ಲಿ ತಮ್ಮ ಬದುಕನ್ನು ನಿರ್ವಹಿಸಬೇಕಾಗಿದೆ. ಬದುಕುವ ಅನಿವಾರ್ಯತೆಯಿಂದ ಕೊಳಗೇರಿಯ ನಾಗ್ಯಾ ತನ್ನ ಹೆಂಡತಿಗೆ ಆಗಿರುವ ಹೊಟ್ಟೆ ಹುಣ್ಣಿನ ಆಪರೇಷನ್ ಮಾಡಿಸಲು ಹಣದ ಅವಶ್ಯಕತೆಯಿಂದ ಜೇಬುಗಳ್ಳತನ ಮಾಡುತ್ತಾನೆ. ಅದರ ಬಗೆಗೆ ಆತನಿಗೆ ಯಾವುದೇ ಭಯ ಹಾಗೂ ಮುಜುಗರವಿಲ್ಲ. ಅಲ್ಲದೆ 'ಆ ಪೊಲೀಸರು ಜೈಲಿಗೆ ಹಾಕಿದರೆ ಸ್ವಲ್ಪ ಕಾಲ ಇದ್ದು ಬರುತ್ತೇನೆ' ಎಂದು ಆತ ಹೇಳುವುದು ಹಾಗೂ ಇಡೀ ಕೊಳಗೇರಿಯು ಆತನ ದಂದೆಗೆ ಪ್ರೋತ್ಸಾಹಿಸುವುದು ವಾಸ್ತವ ಬದುಕಿನ ಅಸ್ತವ್ಯಸ್ತ ಸ್ಥಿತಿಯ ವ್ಯಂಗ್ಯವಾಗಿದೆ. ಅಲ್ಲದೆ ಕೊಳಗೇರಿಗೆ ದಾಳಿ ಇಡುವ ಪೊಲೀಸರು ತಮ್ಮ ಕ್ರೌರ್ಯವನ್ನು ಅಲ್ಲಿನ ಜನತೆಯ ಮೇಲೆ ಪ್ರಯೋಗಿಸುವ ಮೂಲಕ ಅವರ ಅಭದ್ರತೆಯ ಬದುಕಿನ ಮೇಲೆ ದೌರ್ಜನ್ಯ ಎಸಗುತ್ತದೆ. ಜನಪರವಾಗಬೇಕಾದ ಪೊಲೀಸ್ ಹಾಗೂ ಕಾನೂನು ವ್ಯವಸ್ಥೆ ಅಮಾಯಕರಿಗೆ ಹೇಗೆ ಜೀವಕಂಟಕವಾಗಿದೆ ಎಂಬುದು ಕಾದಂಬರಿಯಲ್ಲಿ ಅಂತರ್ಗತವಾಗಿದೆ.

ಆಧುನಿಕ ಶಿಕ್ಷಣದ ಗೊಂದಲದ ಅಂಶವೂ ಕಾದಂಬರಿಯಲ್ಲಿ ಬರುತ್ತದೆ. ಕಲ್ಯಾಣಿಯು ಜೈಲು ಸೇರಿದ ನಂತರ ಆತನ ಹೆಂಡತಿ ಬೆಳ್ಳಿಯು ತನ್ನ ಮಗ ಪುಟ್ಟಮಲ್ಲಪ್ಪನನ್ನು ಸಾಕಲಾಗದೆ ಹಾಗೂ ಓದಿಸಲಾಗದೆ ತನ್ನ ತವರಿನಲ್ಲಿ ಓದಿಸುತ್ತಾಳೆ. ಓದಿನಲ್ಲಿ ಅತ್ಯಂತ ಬುದ್ಧಿವಂತನಾದ

ಪುಟ್ಟಮಲ್ಲಪ್ಪ ತನ್ನ ಬಗೆಗೆ, ತನ್ನ ಅಪ್ಪನ ಬಗೆಗೆ ಅಸಹನೆಯನ್ನು ಬೆಳೆಸಿಕೊಳ್ಳುತ್ತಾನೆ. "....ನನ್ನ ಕಾಲೇಜದಾಗ ನನ್ನ ದೋಸ್ತರ ಮುಂದ ನನ್ನ ಮಾನ ಮರ್ಯಾದಿ ಅಂಬಾದು ಮೂರು ಕಾಸಿಗಿ ಹರಾಜಾಗ್ತದಾ? ತಿಳಿತೇನು. ಹಿಂತಾ ಅಪ್ಪಾ ಇರಾದಕ್ಕಿಂತಾ ಸಾಯೂದಾ ಛಲೋ...." (ಪುಟ ೪೪೧) ಎಂದು ಹೇಳುವ ಆತ ಜೀವವಿರೋಧಿಯಾಗಿ ನೋವಿಗೆ ಸ್ಪಂದಿಸಲಾರದವನಾಗಿದ್ದಾನೆ. ಆಧುನಿಕ ಶಿಕ್ಷಣವು ವ್ಯಕ್ತಿಯು ತನ್ನನ್ನು ಪುನರ್ವಿಮರ್ಶೆ ಮಾಡಿಕೊಂಡು ಮಾನವೀಯ ಅಂಶಗಳ ಜೊತೆಗೆ ಗುಣಾತ್ಮಕವಾಗಿ ಬದುಕುವ ಬಗೆಯನ್ನು ಕಲಿಸುವ ಬದಲು ಕೀಳರಿಮೆಯಿಂದ ಬಳಲುವ, ನಗರದ ಐಶಾರಾಮಿ ಜೀವನಕ್ಕೆ ಪ್ರಚೋದಿಸುವ, ಯಾಂತ್ರಿಕವಾಗುತ್ತಿರುವ ದುರಂತವನ್ನು ಕಾದಂಬರಿ ವಿಷಾದದಿಂದ ಕಟ್ಟಿಕೊಡುತ್ತದೆ.

'ಬದುಕು' ಕಾದಂಬರಿಯಲ್ಲಿ ಕುಡಿತ ಭಿನ್ನ ಭಿನ್ನ ಸ್ವರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಮಲ್ಲಪ್ಪನಂತಹ ಮಧ್ಯಮ ಜಾತಿಗೆ ಕುಡಿತ ಬದುಕಿನ ಸಂಸ್ಕೃತಿಯ ಭಾಗವಾಗಿ ಬರುತ್ತದೆ. ಮಲ್ಲಪ್ಪ, ಆತನ ಹೆಂಡತಿ, ಮಕ್ಕಳು, ಮೊಮ್ಮಕ್ಕಳು ಎಲ್ಲರೂ ಬೆರೆತು ಸಾಮೂಹಿಕವಾಗಿ ಕುಡಿಯುತ್ತಾರೆ; ಅದರಲ್ಲಿ ಸಂಭ್ರಮಿಸುತ್ತಾರೆ. ಆದರೆ ದಲಿತ ಸಮುದಾಯದ ಹೆಚ್ಚು ಮಂದಿ ಇಲ್ಲಿ ತಮ್ಮ ಅಭದ್ರತೆ, ಅಸ್ಥಿರತೆ, ಹಾಗೂ ನಿರಂತರವಾಗಿರುವ ಶೋಷಣೆಯನ್ನು ಮರೆಯಲು ಕುಡಿತಕ್ಕೆ ಮೊರೆ ಹೋಗುತ್ತಾರೆ. ಕುಡಿತ ಒಂದು ಸಂಸ್ಕೃತಿಯ ಭಾಗವಾಗಿರುವುದೇ ಅಲ್ಲದೆ ಮುಂದುವರೆದು ಅಸ್ತಿತ್ವವಿಲ್ಲದ ಭಗ್ನ ಬದುಕಿನ ಜನತೆಯ ನೋವನ್ನು ಮರೆಸುವ ಅನಿವಾರ್ಯ ಭಾಗವೂ ಆಗಿ ಇಲ್ಲಿ ಚಿತ್ರಿತವಾಗಿದೆ.

ಉತ್ತರ ಕರ್ನಾಟಕ ಭಾಗದ ಭಾಷೆಯನ್ನು ಸಮರ್ಥವಾಗಿ ಕಾದಂಬರಿಕಾರರು ಬಳಸುತ್ತಾರೆ. ಭಾಷೆ ಅಲ್ಲಿನ ಸಾಮಾಜಿಕ ಬದುಕಿನ ಭಾಗವಾಗಿಯೂ ಇರುವುದನ್ನು ಕಾಣಬಹುದು. ಜಾತಿಗ್ರಸ್ಥ ಸಮಾಜದಲ್ಲಿ ಭಾಷಾ ಬಳಕೆಯ ವಿಧಾನಕ್ಕೆ ಕಾದಂಬರಿಯೊಳಗೆ ಬರುವ : "ಯಾಕಲೇ ಮಲ್ಲ್ಯಾ....ಸೊಕ್ಕ ಬಂದಾದೇನ್ಲೇ ಕಬ್ಬಲಿಗ್ಯಾ ?" ಒದರಾಡಿದ ಮಲ್ಲಪ್ಪನಿಗೆ ಏನೂ ತಿಳಿಯದೆ ಪಿಳಿಪಿಳಿ ಕಣ್ಣು ಬಿಟ್ಟ. "ನಿಮ್ಮವ್ವನ ಸೂಳ್ಯಾಮಗನೇ....ಕಡೀಗಿ ನಿಮ್ ಕಮಜಾತಿ ಹಲ್ಕಟ ಗುಣಾ ಎಲ್ಲಿ ಬಿಟ್ಟಿರಲೇ ನೀವು ? ಏಟು ಸೊಕ್ಕಲೆ ಭೋಸಡಿ ಮಗನೇ ನಿನಗೆ" ಎನ್ನುವ ಮಾತಿನ ಭಾಷೆ ಜಮೀನ್ದಾರಿಕೆಯ ಗತ್ತಿನಿಂದ ಹೊರಬಂದದ್ದಾಗಿದೆ. ಇಂತಹ ಭಾಷೆಯಲ್ಲಿ ಜಾತಿ, ಅಹಂ, ಸಾಮಾಜಿಕ ಸ್ಥಿತಿಗಳೆಲ್ಲವೂ ವ್ಯಕ್ತವಾಗುತ್ತವೆ.

ಇಂದು ಧರ್ಮಾಂಧತೆ ಹೆಚ್ಚುತ್ತಿರುವ ಸಂದರ್ಭದಲ್ಲಿ ಧರ್ಮಾತೀತ ಮಾನವ ಸಂಬಂಧಗಳ ಬಗೆಯನ್ನು ಕಾದಂಬರಿಕಾರರು ಕಟ್ಟಿಕೊಡುತ್ತಾರೆ. ಇಲ್ಲಿನ ಫತರೂ ಮುಸ್ಲಿಮನಾದರೂ ಮಲ್ಲಪ್ಪನು ಆತನನ್ನು ಮಗನಂತೆಯೇ ತನ್ನ ಮನೆಯಲ್ಲಿ ಸಾಕುತ್ತಾನೆ. ಮಲ್ಲಪ್ಪನ ಇಡೀ ಕುಟುಂಬ ಅಧೋಗತಿಯತ್ತ ಸಾಗಿದಾಗ ಫತರೂ ಅವರಿಗೆ ಆಸರೆಯಾಗುತ್ತಾನೆ. ಧರ್ಮವನ್ನು ಮೀರಿದ ಸಹಜ ಸ್ನೇಹ-ಪ್ರೀತಿ ಸಂಬಂಧಗಳನ್ನು ಫತರೂ ಕುಟುಂಬ ಹಾಗೂ ಮಲ್ಲಪ್ಪನ ಕುಟುಂಬದಲ್ಲಿ ಕಾಣಲು ಸಾಧ್ಯ. ಅಲ್ಲದೆ ಈ ಪರಿಸರದ ಇಡೀ ಶೂದ್ರರು, ದಲಿತರು ಹಾಗೂ ಮುಸ್ಲಿಮರು ಮೊಹರಂ ಹಬ್ಬವನ್ನು ಅತ್ಯಂತ ಆತ್ಮೀಯತೆಯಿಂದ ತಮ್ಮ ತಮ್ಮ ಮನೆಯ ಹಬ್ಬವಾಗಿ ಆಚರಿಸುವುದು ಇಲ್ಲಿ ಗಮನಾರ್ಹ. ಕೋಮುಭಾವನೆಗಳು ಉದ್ದೀಪನಗೊಳ್ಳುತ್ತಿರುವ ಇಂದಿನ ಮನಸ್ಸುಗಳನ್ನು ಇಂತಹ ವಾಸ್ತವ ಮಾನವ ಸ್ಪರ್ಶ ಆರೋಗ್ಯಕರವಾಗಿಸುತ್ತದೆ ಎಂಬ ಮಂಗಳಕರ ತತ್ತ್ವ ಕಾದಂಬರಿಯಲ್ಲಿ ವ್ಯಕ್ತವಾಗುತ್ತದೆ.

ಬಹುಪಾಲು ಈ ಸಮಾಜದ ವಾಸ್ತವ ಬದುಕಿನ ವಿಷಾದವನ್ನು ತನ್ನ ಅಂತರ್ಯದಲ್ಲಿ ಒಳಗೊಂಡಿರುವ ಗೀತಾನಾಗಭೂಷಣ ಅವರ 'ಬದುಕು' ಕಾದಂಬರಿಯು ಮನುಷ್ಯ ತನ್ನೆಲ್ಲ ಸಣ್ಣತನ, ಪ್ರತಿಷ್ಠೆ, ಧರ್ಮಾಂಧತೆ, ಜಾತಿ ಅಹಮಿಕೆಯನ್ನು ಮೀರಬೇಕಾದ ತುರ್ತನ್ನು ಧ್ವನಿಸುತ್ತದೆ. ವಿಶಾಲ ಮನಸ್ಸನ್ನು ವ್ಯಕ್ತಿ ಒಳಗೊಳ್ಳಬೇಕಾದರೆ ಆತ ಮತ್ತೆ ಮತ್ತೆ ಈ ಸಮಾಜವನ್ನು ಹಾಗೂ ತನ್ನನ್ನು ಪುನರ್ವಿಮರ್ಶಿಸಿಕೊಳ್ಳುತ್ತ ಗಾಢ ಪ್ರೀತಿಯನ್ನು ಮೈಗೂಡಿಸಿಕೊಳ್ಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಮಾನವೀಯತೆ ಹಾಗೂ ಅಹಿಂಸೆಯನ್ನು ತಮ್ಮ ಬದುಕು, ಚಿಂತನೆ, ಆಂದೋಲನಗಳಲ್ಲಿ ಸಾರಿದ ಬುದ್ಧ, ಬಸವಣ್ಣ, ಗಾಂಧಿ ಹಾಗೂ ಅಂಬೇಡ್ಕರರ ಮಾನವತೆಯ ವೈಚಾರಿಕ ಚಿಂತನೆಗಳು ಈ ಸಮಾಜಕ್ಕೆ ಚಿಕಿತ್ಸಕವಾಗಬಲ್ಲವು ಎಂಬ ಮಹದಾಸೆಯನ್ನು ಕಾದಂಬರಿ ತನ್ನ ಅಂತರ್ಯದಲ್ಲಿ ಒಳಗೊಂಡಿದೆ.

□

---

ಮಲ್ಲಿಗಹಳ್ಳಿ ನರೇಂದ್ರಕುಮಾರ್
ಉಪನ್ಯಾಸಕರು, ಡಾ. ಬಿ.ಆರ್. ಅಂಬೇಡ್ಕರ್ ಸಂಶೋಧನ ಹಾಗೂ ವಿಸ್ತರಣ ಕೇಂದ್ರ
ಮಾನಸಗಂಗೋತ್ರಿ, ಮೈಸೂರು

# ನಿಂತ ಸಾಲು

ಕನಕ ಹಾ.ಮ.

ಚಡಪಡಿಕೆ ಯಾರಳವಲ್ಲ
ಹದ್ದುಮೀರಿ ಹರಿಯುತ್ತದೆ ಅಕ್ಷರಕ್ಷರದಲ್ಲಿ
ಜಡಗೊಂಡ ಆತ್ಮಮರುಕವಲ್ಲ

ನಗರದ ತುಂಬಾ ವಿಪರೀತ ಘಟನೆ
ನೆರೆ, ಕೊಲೆ, ಅಪಘಾತ, ರೋಗ ರುಜಿನಗಳ ಸರಮಾಲೆ
ಅವಸರದಲ್ಲಿ ಬಿತ್ತರಿಸುವ ಮಾಧ್ಯಮಗಳ ಹಾವಳಿ
ದಾಖಲಿಸುವ ಹಪಾಹಪಿ
ಸುದ್ದಿ ಗೌಜಿ

ಪದುಮನಾಭ ಮಾತ್ರ ಕ್ಷೀರಸಾಗರದಲ್ಲಿ
ಶೇಷಸಾಯಿ
ಆಷಾಢ ಏಕಾದಶಿ, ಪೂಜೆ, ಪ್ರಾರ್ಥನೆ ಗುಡಿಗೋಪುರಗಳಲ್ಲಿ
ಕಾಯಬೇಕು ತಾನೆ ಚಾತುರ್ಮಾಸದವಸಾನಕ್ಕೆ
ಸುಗ್ಗಿ ಬೆಳದಿಂಗಳಿಗೆ

ನಡುವೆ ನಿಂತುಬಿಟ್ಟಿದೆ ಕವನದ ಸಾಲು
ಖಾಲಿ ಇರುವಾಗ ಅನಿಶ್ಚಿಯದ ಗಡುವು
ಜೀವ ಕೊರಗು

ಇರಲಿ ತೃಣಬಿಂದು ನಂಬಿಕೆ ಪ್ರಬಲ
ಅಲ್ಲಿ ಜನಮನದ ಗೆಲವು ಘನವೃಕ್ಷವಾಗಿ
ಸೂಕ್ಷ್ಮದಲ್ಲಿ ತಪಿಸಬೇಕು
ತಪಸ್ಸು ಬೇಕು

□

---

ಕನಕ ಹಾ.ಮ.
ಬಿ-೭೦೨, ದೀಪಾಲಿ ಅಪಾರ್ಟ್‌ಮೆಂಟ್
ಯಾರಿ ರಸ್ತೆ, ವರ್ಸೋವಾ
ಅಂಧೇರಿ ವೆಸ್ಟ್, ಮುಂಬೈ - ೪೦೦ ೦೬೧

# ಸೀಮನ್-ದ-ಬೊವಾ (Simone De Beauvoir)

ಡಾ. ಟಿ. ಸುಬ್ರಹ್ಮಣ್ಯಂ

ನಮ್ಮ ಸಾಹಿತ್ಯ ಮತ್ತು ಪರಂಪರೆಯಲ್ಲಿ ಸ್ತ್ರೀಪರವಾದ ಧೋರಣೆಗಳು ಬೇಕಾದಷ್ಟಿದ್ದರೂ ಸ್ತ್ರೀವಾದವು ಪಾಶ್ಚಾತ್ಯರಿಂದಲೇ ನಮಗೆ ಬಂದದ್ದು ನಿರ್ವಿವಾದ. ಇದಕ್ಕೆ ಐತಿಹಾಸಿಕವಾದ ಕಾರಣಗಳಿದೆಯೇ ವಿನಹ ಇನ್ನೇನೂ ಮಹತ್ವವಿಲ್ಲ. ಸ್ತ್ರೀವಾದದ ಇತಿಹಾಸದಲ್ಲಿ ಎದ್ದು ಕಾಣುವ ಮೊದಲ ಹೆಸರು ಸೀಮಾನ್-ದ-ಬೊವಾ ಅವರದ್ದು. ಈಕೆಯ 'ದ ಸೆಕೆಂಡ್ ಸೆಕ್ಸ್' ಎಂಬ ಅತ್ಯಂತ ಮಹತ್ವದ ಕೃತಿಯು ಯೂರೋಪಿನ ಸ್ತ್ರೀವಾದಕ್ಕೆ ಭದ್ರವಾದ ಬುನಾದಿಯನ್ನು ಹಾಕಿಕೊಟ್ಟಿತೆಂದು ಬಹುಮಂದಿ ಭಾವಿಸುತ್ತಾರೆ. ಸ್ತ್ರೀವಾದದ ಬಗ್ಗೆ ಯೂರೋಪಿನ ಕಣ್ಣು ತೆರೆಸಿದ ಗ್ರಂಥವಿದೆಂದೂ ಸ್ತ್ರೀವಾದದ ಉದ್ಘಾಟಕ ಕೃತಿ ಇದೆಂದೂ ವಿಮರ್ಶಕರು ಗುರುತಿಸಿದ್ದಾರೆ. ಸೀಮನ್-ದ-ಬೊವಾ ಅವರು ಸ್ವತಃ ಒಬ್ಬ ಅಸ್ತಿತ್ವವಾದಿಯಾಗಿದ್ದರು. ಜೀನ್ ಪಾಲ್ ಸಾರ್ತ್ ನ ನಿಕಟವರ್ತಿಯಾಗಿದ್ದರು. ಸಾರ್ತ್‌ನ ಅಸ್ತಿತ್ವವಾದ ಬೊವಾ ಅವರ ಮೇಲೆ ಭಾರಿ ಪರಿಣಾಮವನ್ನು ಬೀರಿತ್ತು. ಅವರ ಬರವಣಿಗೆಯಲ್ಲೂ ಈ ಪ್ರಭಾವ ನಿಚ್ಚಳವಾಗಿ ಕಾಣುತ್ತದೆ. ಈ ಕಾರಣದಿಂದಲೇ ಬೊವಾ ಅವರ ಸ್ತ್ರೀವಾದಿ ಧೋರಣೆಯನ್ನು ಅಸ್ತಿತ್ವವಾದಿ ಸ್ತ್ರೀವಾದವೆಂದು ವರ್ಗೀಕರಿಸುತ್ತಾರೆ. ಬೊವಾ ಅವರ ನಂತರ ಸ್ತ್ರೀವಾದ ತುಂಬಾ ವ್ಯಾಪಕವಾಗಿ ಬೆಳೆದಿದೆ. ಸಮಾಜವಾದಿ ಸ್ತ್ರೀವಾದ, ತೀವ್ರಗಾಮಿ ಸ್ತ್ರೀವಾದ, ಉದಾರವಾದಿ ಸ್ತ್ರೀವಾದ, ಮಾರ್ಕ್ಸ್‌ವಾದಿ ಸ್ತ್ರೀವಾದ, ಆಧುನಿಕ ಸ್ತ್ರೀವಾದ, ಆಧುನಿಕೋತ್ತರ ಸ್ತ್ರೀವಾದ ಮುಂತಾದ ಅನೇಕ ಪಂಥಗಳು ಹುಟ್ಟಿಕೊಂಡಿವೆ. ಸ್ತ್ರೀವಾದಿಗಳ ಗುಂಪಿನಲ್ಲೇ ಸೀಮನ್-ದ-ಬೊವಾ ಕಟುವಾದ ಟೀಕೆಗೆ ಒಳಗಾಗಿದ್ದಾರೆ. 'ದ ಸೆಕೆಂಡ್ ಸೆಕ್ಸ್' ನಂತರ ಸ್ತ್ರೀವಾದವು ತುಂಬಾ ಬೆಳೆದಿದೆ. ಅದಾಗ್ಯೂ ಸೀಮನ್-ದ-ಬೊವಾ ಅವರ ವಿಚಾರಗಳು ಇಂದಿಗೂ ಹಲವಾರು ಅಂಶಗಳಲ್ಲಿ ಮಹತ್ವದ್ದಾಗಿದೆ. 'ದ ಸೆಕೆಂಡ್ ಸೆಕ್ಸ್' ಗ್ರಂಥದ ಐತಿಹಾಸಿಕ ಮಹತ್ವವನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಸ್ತ್ರೀಯು ಪುರುಷನಿಗಿಂತ "ಭಿನ್ನವಾದವಳು" ಎಂಬ ಕಾರಣಕ್ಕಾಗಿ ಇತಿಹಾಸದ ಉದ್ದಕ್ಕೂ ಶೋಷಣೆಗೆ ಒಳಪಟ್ಟಿದ್ದಾಳೆ ಎಂದು ಬೊವಾ ಪ್ರತಿಪಾದಿಸುತ್ತಾರೆ. ಪುರುಷ ಪ್ರಾಧಾನ್ಯದ ಸಮಾಜ ಈ ಭಿನ್ನತೆಯನ್ನು 'ಕೀಳು' ಎಂದು ಭಾವಿಸಿ ಸ್ತ್ರೀಯರನ್ನು ದಮನ ಮಾಡಿದೆ. ಈ ವಿಚಾರಗಳನ್ನು ವಿಶ್ಲೇಷಿಸುವಾಗ ಬೊವಾ ಅವರು ಸಾರ್ತ್ರ್‌ನ ಅಸ್ತಿತ್ವವಾದದ ಪರಿಭಾಷೆಯನ್ನೇ ಉಪಯೋಗಿಸಿದ್ದಾರೆ. ಮಾನವ ಸಮಾಜದ ಆದಿಮ ಕಾಲದಿಂದಲೂ ಪುರುಷ ತನ್ನನ್ನು 'ತಾನು' (self) ಎಂದು ಗುರುತಿಸಿಕೊಂಡಿದ್ದಾನೆ. ಆದರೆ ಸ್ತ್ರೀಯನ್ನು 'ಅನ್ಯ'ಳೆಂದು (other) ಪರಿಗಣಿಸಿದ್ದಾನೆ. 'ಅನ್ಯ' ಮತ್ತು 'ತಾನು' ಇವೆರಡು ಪರಸ್ಪರ ವಿರೋಧಿ ಪರಿಕಲ್ಪನೆಗಳು. 'ತಾನು', 'ಅನ್ಯ'ರೊಡನೆ ಸಂಘರ್ಷಿಸಿದಾಗ ತನ್ನತನವನ್ನು ಉಳಿಸಿಕೊಳ್ಳಬೇಕಾದರೆ, 'ಅನ್ಯ'ದೊಡನೆ ಒಂದಾಗಿ ಇನ್ನೊಂದಾಗುವ ಅಪಾಯವನ್ನು ತಪ್ಪಿಸಿಕೊಳ್ಳಬೇಕು. ಆದ್ದರಿಂದಲೇ ತನ್ನತನವನ್ನು ಉಳಿಸಿಕೊಳ್ಳುವ ಹಂಬಲದ ಪುರುಷರು ಅನ್ಯಳಾದ ಸ್ತ್ರೀಯನ್ನು ತನ್ನ ಸಮಾನವಾಗಿ ಕಾಣದೆ ಅಧೀನಳನ್ನಾಗಿ ಮಾಡಿಕೊಂಡಿದ್ದಾರೆ. ಸ್ತ್ರೀ ಮತ್ತು ಪುರುಷನಿಗೆ ಸ್ತ್ರೀ ದೇಹ ಮತ್ತು ಪುರುಷ ದೇಹದ ಮುಖೇನ ಭಿನ್ನ ಭಿನ್ನ ಅಸ್ತಿತ್ವಗಳಿವೆ. ಆದ್ದರಿಂದಲೇ ಈ ಭಿನ್ನ ದೈಹಿಕ ಸ್ಥಿತಿಗಳು ಭಿನ್ನ ರೀತಿಯ ಕಾರ್ಯವನ್ನು ನಿರ್ವಹಿಸುತ್ತವೆ. ಈ ಭಿನ್ನತೆಯೇ ಸ್ತ್ರೀ ಪುರುಷರ ಅಸಮಾನತೆಗೆ ಮೂಲ ಕಾರಣ. ದೈಹಿಕವಾಗಿ ಇರುವ ಈ ಭಿನ್ನತೆಯನ್ನು ಪುರುಷಪ್ರಧಾನ ಸಮಾಜವು ಹೇಗೆ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಂಡಿದೆ ಎಂಬುದನ್ನು ಸೀಮನ್-ದ-ಬೊವಾ ವಿವರವಾಗಿ ಪ್ರತಿಪಾದಿಸುತ್ತಾರೆ. ಪುರುಷನ ದೈಹಿಕ ರಚನೆಯ ಕಾರಣದಿಂದ ಸಮಾಜದಲ್ಲಿ ಅವನಿಗೆ ಮಹತ್ವ ದೊರಕಿರುವುದನ್ನು ಟೀಕಿಸುತ್ತಾರೆ. ದೈಹಿಕ ರಚನೆಯ ಆಧಾರದ ಮೇಲೆ ಅಸಮಾನತೆಯನ್ನು ಪ್ರತಿಪಾದಿಸುವುದನ್ನು ವಿರೋಧಿಸುತ್ತಾರೆ. ಸ್ತ್ರೀ ಅಸಮಾನತೆಯನ್ನು ಕುರಿತ ಮಾರ್ಕ್ಸ್‌ನ ವಿಶ್ಲೇಷಣೆಯನ್ನು ಅವರು ಒಪ್ಪುವುದಿಲ್ಲ. ವರ್ಗ ಅಸಮಾನತೆಯ ಚೌಕಟ್ಟಿನಲ್ಲಿ ಮಾತ್ರ ಸ್ತ್ರೀ ಶೋಷಣೆಯನ್ನು ಪರಿಭಾವಿಸಿದ ಮಾರ್ಕ್ಸ್‌ನ ಧೋರಣೆ ಅಸಮರ್ಪಕವೆಂದು ಬೊವಾ ಭಾವಿಸುತ್ತಾರೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಇರುವ ವರ್ಗಭೇದವು ಬಂಡವಾಳಶಾಹಿ ವ್ಯವಸ್ಥೆಯ ನಾಶದೊಡನೆ ನಾಶವಾಗಬಹುದು. ಆದರೆ ಮುಂದೆ ಬರುವ ಸಮಾಜವಾದೀ ವ್ಯವಸ್ಥೆಯಲ್ಲೂ ಸ್ತ್ರೀ ಶೋಷಣೆಯು ಇನ್ನೊಂದು ರೂಪದಲ್ಲಾದರೂ ಇದ್ದೇ ಇರುತ್ತದೆ ಎನ್ನುತ್ತಾರೆ. ಸಾರ್ತ್ರ್‌ನೊಡನೆ ಸಂವಾದವೊಂದನ್ನು ನಡೆಸುತ್ತಾ ಬೊವಾ ಹೇಳುತ್ತಾರೆ: "ಸಾಮಾಜಿಕ ಕ್ರಾಂತಿಯು ಮಹಿಳೆಯರ ವಿಮೋಚನೆಯನ್ನು ಸಾಧ್ಯವಾಗಿಸುತ್ತದೆ ಎಂದು ನಮ್ಮಿಬ್ಬರಲ್ಲೂ ವಿಶ್ವಾಸವಿತ್ತು. ಆದರೆ ರಷ್ಯಾ, ಜಕೋಸ್ಲಾವೇಕಿಯಾ ಮುಂತಾದ ಸಮಾಜವಾದಿ ರಾಷ್ಟ್ರಗಳಲ್ಲಿ ಹೆಣ್ಣು ಗಂಡಿಗೆ ಸಮಾನವಾಗಿಲ್ಲ ಎನ್ನುವುದನ್ನು ಕಂಡಾಗ ನಾವು ನಮ್ಮ ಅಭಿಪ್ರಾಯವನ್ನು ಬದಲಿಸಬೇಕಾಯಿ."[೧] ಈ ಮಾತಿಗೆ ಪೂರಕವಾಗಿ ಸಾರ್ತ್ರ್ "ಅವೆರಡೂ ವಿಭಿನ್ನ ರೂಪದ ಪ್ರತ್ಯೇಕ ಹೋರಾಟಗಳು, ಒಂದು ಮತ್ತೊಂದನ್ನು ಮರೆಮಾಡುವಂತದ್ದು" ಎನ್ನುತ್ತಾನೆ. (ಅಸ್ತಿತ್ವವಾದಿ ಚಿಂತನೆಯ ಮೇಲೆ ಅಪಾರ ಪ್ರಭಾವ ಬೀರಿದ ಸಾರ್ತ್ರ್ ಮತ್ತು ಬೊವಾ ಅವರ ವಿಚಾರಗಳು ಪರಸ್ಪರ ಪೂರಕವಾಗಿದೆ. 'ದ ಸೆಕೆಂಡ್ ಸೆಕ್ಸ್' ಪುಸ್ತಕವನ್ನು ಬರೆಯುವಂತೆ ಬಲವಂತ ಮಾಡಿ, ಉತ್ತೇಜಿಸಿದವರು ಸಾರ್ತ್ರ್. 'ಪುಸ್ತಕ ಪೂರ್ಣವಾದಾಗ ಅದರಲ್ಲಿನ ಎಲ್ಲ ವಾದಗಳನ್ನು ಸಾರ್ತ್ರ್ ಒಪ್ಪಿಕೊಂಡರು. ಆದರೆ ಕಮ್ಯೂನಿಸ್ಟ್ ಜನರು ಪುಸ್ತಕವನ್ನು ಮುಖಕ್ಕೇ ಎಸೆಯುವಂತೆ ವರ್ತಿಸಿದರು. ಹೆಣ್ಣಿನ ಸ್ವಾತಂತ್ರ್ಯದ ಬಗ್ಗೆ ಪ್ರಜಾಪ್ರಭುತ್ವವಾದಿ ಧೋರಣೆಯನ್ನು ಹೊಂದಿರುವರೆಂದು ನಂಬಿದ್ದ

೧. ಜೀನ್ ಪಾಲ್ ಸಾರ್ತ್ರ್ : ಸಂದರ್ಶನ — ಸೀಮನ್ ದಿ ಬುವಾಯಿರಿ ಶೂದ್ರ ೫-೮, ಜೂನ್, ೧೯೮೦.

ಅನೇಕ ಗಂಡಸರಲ್ಲಿ, ತಾವು ಮೇಲೆಂಬ ಭಾವನೆಯಿದ್ದುದು ಈ ಪ್ರಸಂಗದಿಂದ ಪತ್ತೆಯಾಯಿತು' ಎಂದು ಬೊವಾ ಹೇಳುತ್ತಾರೆ. ಸಾರ್ತ್ರ್ ಮತ್ತು ಸೀಮನ್-ದ-ಬೊವಾ ಅವರ ಮಧ್ಯೆ ಅತ್ಯಂತ ನಿಕಟ ಬಾಂಧವ್ಯ ಇತ್ತು. ಆದರೆ ಅವರು ವೈವಾಹಿಕ ಬಂಧನಕ್ಕೆ ಒಳಪಟ್ಟಿರಲಿಲ್ಲ. ಸಾರ್ತ್ರ್ ಎಂದೂ ತನ್ನ ಮೇಲೆ 'ದಬ್ಬಾಳಿಕೆ ನಡೆಸಿಲ್ಲ ಅಥವಾ ತನಗಿಂತ ಮೇಲು' ಎಂಬ ರೀತಿಯಲ್ಲಿ ವರ್ತಿಸಿಲ್ಲ ಎಂದು ಬೊವಾ ಹೇಳುತ್ತಾರೆ). ಸ್ತ್ರೀ ಶೋಷಣೆಯು ಅಥವಾ ಲಿಂಗಾಧರಿತ ಅಸಮಾನತೆಯು ವರ್ಗಭೇದ ಮತ್ತು ಜನಾಂಗೀಯ ಭೇದಗಳನ್ನು ಮೀರಿ ವ್ಯಾಪಿಸಿರುವಂತದು. ಮಾರ್ಕ್ಸ್‌ನ ವಿಶ್ಲೇಷಣೆ ಈ ಬಗ್ಗೆ ಹೇಗೆ ಅಪರಿಪೂರ್ಣವೋ ಏಂಜಲ್ಸ್‌ನ ವಿಶ್ಲೇಷಣೆಯೂ ಅದೇ ರೀತಿ ಅಪರಿಪೂರ್ಣ. ಖಾಸಗಿ ಆಸ್ತಿಗಳಿಕೆಯಿಂದ ಸ್ತ್ರೀ ಶೋಷಣೆಯ ಪ್ರಾರಂಭವನ್ನು ಏಂಜಲ್ಸ್ ಗುರುತಿಸುತ್ತಾನೆ. ಆದರೆ ಬೊವಾ ದೃಷ್ಟಿಯಲ್ಲಿ 'ತಾನು' ಮತ್ತು 'ಅನ್ಯ' ಎಂಬ ಭಾವನೆಯು ಹೆಣ್ಣು ಗಂಡ ಸಂಬಂಧದಲ್ಲಿ ಹೋಗುವತನಕ ಲಿಂಗಭೇದವು ಹೋಗುವುದಿಲ್ಲ.

ಬೊವಾ ದೃಷ್ಟಿಯಲ್ಲಿ ಪುರುಷನು ಸ್ತ್ರೀಯನ್ನು ಕುರಿತು ಅನೇಕ "ಮಿತ್" (Myth) ಗಳನ್ನು ಸೃಷ್ಟಿಸಿದ್ದಾನೆ. ಇದರ ಮುಖ್ಯ ಉದ್ದೇಶ ಸ್ತ್ರೀಯನ್ನು ತನ್ನ ಅಡಿಯಾಳಾಗಿ ಇಟ್ಟುಕೊಳ್ಳುವುದು. ಆದ್ದರಿಂದಲೇ ಸ್ತ್ರೀಗೆ ಆದರ್ಶಮಾತೆಯ ಪಟ್ಟ ಕಟ್ಟುತ್ತಾನೆ. ಈ ಗೃಹತಪಸ್ವಿನಿಯ ಕಲ್ಪನೆಯು ಪುರುಷ ಸಂಸ್ಕೃತಿಯ ಪ್ರತೀಕ. ಮಹಾಸತಿ, ಮಹಾಮಾತೆ ಮುಂತಾದ ಆದರ್ಶಕೃತ ಪರಿಕಲ್ಪನೆಗಳು ಅವಳನ್ನು ಬಂಧಿಸುತ್ತಿರುವ ಮಾನಸಿಕ ಸಂಕೋಲೆಗಳು. ಹೆಣ್ಣಿಗೆ, ಓರ್ವ ಸ್ವತಂತ್ರ ವ್ಯಕ್ತಿಯಾಗಿ ಬದುಕನ್ನು ರೂಪಿಸಿಕೊಳ್ಳುವ ಅವಕಾಶ ನೀಡದಂತಹ ಸಾಮಾಜಿಕ ವ್ಯವಸ್ಥೆಯನ್ನು ಪುರುಷನು ರೂಪಿಸಿದ್ದಾನೆ. ಈ ಕಾರಣದಿಂದಲೇ ತನ್ನ ಬದುಕಿಗೆ ಸಂಬಂಧಿಸಿದ ನಿರ್ಧಾರಗಳನ್ನು ತೆಗೆದುಕೊಳ್ಳುವುದಕ್ಕೆ ಅವಳಿಗೆ ಅವಕಾಶವಿಲ್ಲ. ಈ ರೀತಿ ಸ್ತ್ರೀಯ ಸೃಜನಶೀಲತೆಯನ್ನು, ಕ್ರಿಯಾಶೀಲತೆಯನ್ನು ಮುರುಟಿ ಹಾಕಲಾಗುತ್ತಿದೆ. ಪತ್ನಿತ್ವ ಮತ್ತು ತಾಯಿತನಗಳೇ ಸ್ತ್ರೀಯ ಅಭಿವೃದ್ಧಿಗೆ ಅಡ್ಡಿಯನ್ನುಂಟು ಮಾಡುವ ಅತ್ಯಂತ ಪ್ರಮುಖವಾದ ಅಂಶಗಳೆಂದು ಬೊವಾ ಸಾರುತ್ತಾರೆ. ಸ್ತ್ರೀಯರು ಉದ್ಯೋಗಸ್ಥರಾಗಿ ಆರ್ಥಿಕವಾಗಿ ಸ್ವತಂತ್ರರಾದರೆ ತಮ್ಮ ಈ ಸಂಕೋಲೆಗಳಿಂದ ಪಾರಾಗಬಹುದೆಂದು ಕೆಲವರು ಭಾವಿಸಿದ್ದಾರೆ. ಆದರೆ ಸ್ತ್ರೀಯರು ಮನೆಯ ಹೊರಗಿನ ದುಡಿಮೆಯಲ್ಲಿ ತೊಡಗಿದ ಮಾತ್ರಕ್ಕೆ ಆಕೆಗೆ ಅಂಟಿಕೊಂಡಿದ್ದ ಬಂಧನಗಳ ನಿವಾರಣೆಯಾಗುವುದಿಲ್ಲ. ಪುರುಷಪ್ರಧಾನ ಮೌಲ್ಯಗಳು ಮನೆಯ ಒಳಗಿದ್ದಂತೆ ಮನೆಯ ಹೊರಗಡೆಯೂ ಅವಳನ್ನು ನಿಯಂತ್ರಿಸುತ್ತದೆ. ವೃತ್ತಿಜೀವನದಲ್ಲೂ ಆಕೆ ತನ್ನ ಸ್ತ್ರೀತ್ವವನ್ನು ಕಾಪಾಡಿಕೊಳ್ಳಬೇಕೆಂಬ ಒತ್ತಡ ಬರುತ್ತದೆ. ಸ್ತ್ರೀ ಸಹಜವಾದ ಗುಣಗಳನ್ನೇ ಉಳಿಸಿಕೊಂಡು ಪ್ರದರ್ಶಿಸಬೇಕೆಂದು ಸಮಾಜ ಬಯಸುತ್ತದೆ : (ಉದಾ : "ತಾನು ಯಾವುದೇ ಕಾರ್ಯಕ್ಷೇತ್ರವನ್ನು ಆರಿಸಿಕೊಂಡರೂ ಅದರಲ್ಲಿ ಸ್ತ್ರೀಯು ನಾರೀ ಸಹಜ ಮಧುರಶೀಲವನ್ನು ಬೆಳೆಸಿಕೊಳ್ಳಲು ಪ್ರಯತ್ನಿಸಬೇಕು" ಡಾ. ರಾಧಾಕೃಷ್ಣನ್)[೨]. ಈ ಸಂದರ್ಭದಲ್ಲಿ ವೃತ್ತಿಜೀವನದ ಹೊಣೆಗಾರಿಕೆಗೂ ಸ್ತ್ರೀತ್ವವನ್ನು ಕಾಪಾಡಿಕೊಳ್ಳುವ ಹೊರೆಗೂ ಸಂಘರ್ಷ ಉಂಟಾಗುತ್ತದೆ. ವೃತ್ತಿಜೀವನದಲ್ಲಿ ಯಶಸ್ಸನ್ನು ಸಾಧಿಸಿದ ಸ್ತ್ರೀಯರು ಕುಟುಂಬದ ಜವಾಬ್ದಾರಿಯನ್ನು ನಿರ್ಲಕ್ಷಿಸಿದ್ದೇನೆಂಬ ಅಪರಾಧಿ ಪ್ರಜ್ಞೆಯಿಂದ ನರಳಬೇಕಾಗಿ ಬರಬಹುದು. ಏಕೆಂದರೆ ಇವರು ತಮ್ಮ ಸ್ವಇಚ್ಛೆಯಿಂದ ಅಥವಾ ಕೆಲವೊಮ್ಮೆ ಪರಿಸರದ ಒತ್ತಡದಿಂದ 'ಸ್ತ್ರೀ ಸಹಜ'ವೆಂಬ ಗುಣಗಳನ್ನು ರೂಢಿಸಿಕೊಳ್ಳುತ್ತಾಳೆ.

---

೨. ಡಾ।। ಎಸ್. ರಾಧಾಕೃಷ್ಣನ್ (ಮುನ್ನುಡಿ) : ಭಾರತೀಯ ಮಹಿಳೆಯರ ಮುನ್ನಡೆ -ಡಾ।। ಎಸ್. ಶ್ರೀದೇವಿ.

ಈ 'ಸ್ತ್ರೀ ಸಹಜ' ಗುಣಗಳೇ ಅವರ ಸ್ವಾತಂತ್ರ್ಯಕ್ಕೆ ಮಾರಕವಾಗುತ್ತದೆ. (ಭಾರತದ ಮಧ್ಯಮ ವರ್ಗದ ಉದ್ಯೋಗಸ್ಥ ಸ್ತ್ರೀ ಮನೆ ಮತ್ತು ಹೊರಗಡೆ - ಈ ಎರಡೂ ಕಡೆ ದುಡಿಯಬೇಕಾದ ಅನಿವಾರ್ಯತೆಯಿಂದ ದ್ವಿಶೋಷಣೆಗೂ ಒಳಗಾಗುತ್ತಾಳೆ).

ಪುರುಷಪ್ರಧಾನ ಸಮಾಜವು ತನ್ನ ಮೇಲೆ ಹೇರಿರುವ ಶೋಷಣಾತ್ಮಕ ಬಂಧನಗಳನ್ನು ಕಿತ್ತುಹಾಕದೆ ಸ್ತ್ರೀಯರು ತನ್ನ ಸ್ವಂತ ಅಸ್ತಿತ್ವವನ್ನು ಕಂಡುಕೊಳ್ಳುವುದು ಅಸಾಧ್ಯ. ಪುರುಷಪ್ರಧಾನ ಮೌಲ್ಯಗಳ ಹೊರೆಯಲ್ಲಿ ಸ್ತ್ರೀ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಿದ್ದಾಳೆ. ತನ್ನ ಅಸ್ತಿತ್ವವನ್ನು ಅವಳು ಮತ್ತೆ ಪಡೆದುಕೊಂಡಾಗ ಮಾತ್ರ ಅವಳ ಸೃಜನಶೀಲತೆಯು ತನ್ನ ಸುಪ್ತಾವಸ್ಥೆಯಿಂದ ಜಾಗೃತವಾಗಿ, ಕ್ರಿಯಾಶೀಲವಾಗುತ್ತದೆ. ಇದು ಅವಳ ವಿಮುಕ್ತಿ ಮಾತ್ರವಲ್ಲದೆ, ಒಟ್ಟು ಸಮಾಜದ ವಿಮೋಚನೆಗೂ ಕಾರಣವಾಗುತ್ತದೆ. ಸ್ತ್ರೀಯು ಉದ್ಯೋಗಸ್ಥಳಾಗುವುದರ ಮೂಲಕ ತನ್ನ ಜೀವನದಲ್ಲಿ ಹೊಸ ಹೊಸ ಅವಕಾಶಗಳನ್ನು ಸೃಷ್ಟಿಸಿಕೊಳ್ಳಬೇಕು. ಉದ್ಯೋಗವು ತನ್ನ ಭವಿಷ್ಯವನ್ನು ಹೊಸ ಹೊಸ ಅವಕಾಶಗಳನ್ನು ಸೃಷ್ಟಿಸಿಕೊಳ್ಳಬೇಕು. ಉದ್ಯೋಗವು ತನ್ನ ಭವಿಷ್ಯವನ್ನು ತಾನೇ ರೂಪಿಸಿಕೊಳ್ಳುವ ಸ್ವಾತಂತ್ರ್ಯವನ್ನು ತಂದುಕೊಡಬಹುದು. ಉದ್ಯೋಗಸ್ಥಳಾಗುವುದರ ಜೊತೆಗೆ ಸ್ತ್ರೀಯರು ಬುದ್ಧಿಜೀವಿಗಳೂ ಆಗಬೇಕು. ಹೊಸ ಹೊಸ ವಿಚಾರಗಳ ಅಧ್ಯಯನಗಳಿಂದ ಹೊಸ ಹೊಸ ದೃಷ್ಟಿಕೋನಗಳು ರೂಪುಗೊಳ್ಳುತ್ತವೆ. ವ್ಯಕ್ತಿಗಳಾಗಿ ತಮ್ಮ ವೈಯಕ್ತಿಕ ವಿಮೋಚನೆಯನ್ನು ತಂದುಕೊಳ್ಳುವುದರ ಜೊತೆಗೆ ಇಡೀ ಸಮಾಜದ ಬದಲಾವಣೆಗಾಗಿಯೂ ದುಡಿಯಬೇಕು. ಏಕೆಂದರೆ ವಿಮೋಚನೆಗೆ ಪೂರಕವಾದ ಸಾಮಾಜಿಕ ಪರಿಸರವನ್ನು ಆಕೆಯೇ ಸೃಷ್ಟಿಸಿಕೊಳ್ಳಬೇಕಾಗುತ್ತದೆ.

'ದ ಸೆಕೆಂಡ್ ಸೆಕ್ಸ್' ಗ್ರಂಥ ಬೀರಿದ ಪ್ರಭಾವವು ಬಹಳ ವ್ಯಾಪಕವೂ, ಆಳವೂ ಆದುದು. ಅದರ ಕೆಲವು ಪರಿಕಲ್ಪನೆಗಳು, ಸ್ತ್ರೀಯ ದಿನನಿತ್ಯದ ಬದುಕನ್ನು ಅವಲಂಬಿಸಿದ್ದಾಗಿರದೆ ತತ್ವಶಾಸ್ತ್ರೀಯ ಸಿದ್ಧಾಂತಗಳನ್ನು ಆಧರಿಸಿದ್ದು - ಎಂಬ ಟೀಕೆಗೆ ಕೂಡ ಗುರಿಯಾಗಿದೆ. ಅಲ್ಲದೆ ಸ್ತ್ರೀಯ ದೈಹಿಕ ರಚನೆ ಅಥವಾ ದೈಹಿಕ ಅಸ್ತಿತ್ವಕ್ಕೆ ಬೊವಾ ನೀಡಿರುವ ಪ್ರಾಶಸ್ತ್ಯವು ಅತಿಯಾಯಿತೆಂಬ ಭಾವನೆಯೂ ಇದೆ. ಎಲ್ಲಕ್ಕಿಂತ ಹೆಚ್ಚಾಗಿ ತನ್ನ ವಿಮೋಚನೆಗಾಗಿ ವಿವಾಹ, ಮಾತೃತ್ವಗಳನ್ನು ಧಿಕ್ಕರಿಸಬೇಕೆಂಬ ಬೊವಾರ ಧೋರಣೆ ಬಹುಮಂದಿ ಸ್ತ್ರೀವಾದಿಗಳಿಂದ ತಿರಸ್ಕೃತವಾಗಿದೆ. ಆದಾಗ್ಯೂ ಸ್ತ್ರೀಪ್ರಜ್ಞಾಸ್ಫೋಟಕ್ಕೆ ಸೀಮನ್-ದ-ಬೊವಾ ಸಲ್ಲಿಸಿದ ಕಾಣಿಕೆ ಅಪಾರವೆಂದು ಎಲ್ಲರೂ ಒಪ್ಪುತ್ತಾರೆ.

□

---

ಡಾ. ಟಿ. ಸುಬ್ರಹ್ಮಣ್ಯಂ
ಪ್ರಾಂಶುಪಾಲರು
ಸರ್ಕಾರಿ ಮಹಿಳಾ ಕಾಲೇಜು
ಮಂಡ್ಯ - ೫೭೧ ೪೦೧

# ಕಾತ ಚಿಕ್ಕಣ್ಣನವರ ಕಥೆಗಳಲ್ಲಿ ಮನುಷ್ಯ ಸಂಬಂಧಗಳ ಸ್ವರೂಪ

ಎಚ್. ದಂಡಪ್ಪ

ಕಥಾ ಜಗತ್ತಿನ ವೈವಿಧ್ಯತೆ ಬೆರಗನ್ನುಂಟು ಮಾಡುವಂತಹದ್ದು. ಅವರ ಕಥಾ ಜಗತ್ತಿನ ವೈವಿಧ್ಯವು ಪಾತ್ರಗಳ ಅನನ್ಯತೆಯ ಮೂಲಕ ಪ್ರಕಟವಾಗುವಂತಹದ್ದಲ್ಲ. ಬದಲಿಗೆ ವೈವಿಧ್ಯವನ್ನು ಮಾನವ ಪ್ರಕೃತಿಯ ವರ್ಣಪಟಲದ ಬಂಧನಕ್ಕೆ ಅಳವಡಿಸಿರುವ ಕ್ರಮ ಬೆರಗು ಹುಟ್ಟಿಸುತ್ತದೆ. ಜೀವನದ ವಿಘಟನೆಯ ಕಾರಣಗಳ ಶೋಧನೆ ವಿಘಟನೆಯ ಪರಿಣಾಮಗಳು. ವಿಘಟನೆಯ ಹಿಂದೆ ಇರುವ ಪ್ರಬಲವಾದ ರಾಜಕೀಯ ಆರ್ಥಿಕ ಮತ್ತು ಸಾಮಾಜಿಕ ಶಕ್ತಿಗಳನ್ನು ಅನಾವರಣಗೊಳಿಸುವುದು ಮುಂತಾದ ನೆಲೆಗಳಲ್ಲಿ ಬದುಕಿನ ಶೋಧನೆಗೆ ತೊಡಗಿ ಆ ಮೂಲಕ ಮನುಷ್ಯನ ಹುಡುಕಾಟದ ನೆಲೆಗಳಿಗೆ ಕೊಂಡೊಯ್ಯುವ ಕಥನದ ಗುಣಗಳಿರುವುದರಿಂದಲೇ ಚಿಕ್ಕಣ್ಣನವರ ಕಥೆಗಳಿಗೆ ಕನ್ನಡ ಕಥಾ ಸಾಹಿತ್ಯ ಪರಂಪರೆಯಲ್ಲಿ ಮಹತ್ವದ ಸ್ಥಾನವಿದೆ.

ಗ್ರಾಮೀಣ ಪರಿಸರದ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಪಲ್ಲಟಗಳನ್ನು ಅನ್ವೇಷಿಸವ ಕ್ರಿಯೆ ಚಿಕ್ಕಣ್ಣನವರ ಕಥೆಗಳಲ್ಲಿ ನಡೆಯುತ್ತದೆ. ಮನುಷ್ಯನನ್ನು ಮೂರ್ತವಾದ ಸಾಮಾಜಿಕ ರಾಜಕೀಯ ಚೌಕಟ್ಟುಗಳಲ್ಲಿಟ್ಟು ಅದು ಸಾಂಸ್ಕೃತಿಕ ಅನ್ವೇಷಣೆಯಾಗುವಂತೆ ಮಾಡುವ ಅರ್ಥಪೂರ್ಣ ಕಥನದ ಸೃಷ್ಟಿ ಬಹಳ ವಿರಳ. ಇಂತಹ ವಿರಳವಾಗಿರುವ ಸಂದರ್ಭದಲ್ಲಿಯೂ ಚಿಕ್ಕಣ್ಣನವರ ಕಥೆಗಳಲ್ಲಿ ಈ ಬಗೆಯ ಸಾಂಸ್ಕೃತಿಕ ಅನ್ವೇಷಣೆ ಸಾಧ್ಯವಾಗಿದೆ. ನಾಗರಿಕತೆಯು ಸೃಷ್ಟಿಸಿದ ಜಾತಿ ಹಣ ಪ್ರಭಾವ ಮುಂತಾದ ಲೌಕಿಕ ಅನಿಷ್ಟಗಳು ಸ್ವಾತಂತ್ರ್ಯಾನಂತರ ಸಂಸ್ಕೃತಿಯ ಭಾಗವಾಗಿ ಹೋಗಿರುವುದರ ವಿವರಗಳು ಇಲ್ಲಿಯ ಕಥೆಗಳಲ್ಲಿ ಪರಿಣಾಮಕಾರಿಯಾದ ಗ್ರಹಿಕೆಗೆ ಒಳಗಾಗಿವೆ. ಆರ್ಥಿಕ ಅಸಮಾನತೆ ಹಾಗೂ ಜಾತೀಯ ಪ್ರಭಾವದಿಂದ ಮನುಷ್ಯರು ಮನುಷ್ಯರಾಗಿ ಉಳಿಯದಿರುವ

ವಿನ್ಯಾಸಗಳನ್ನು ಚಿಕ್ಕಣ್ಣನವರ ಕಥೆಗಳು ಕಟ್ಟಿಕೊಡುತ್ತವೆ. ಕೃಷಿ ಸಂಸ್ಕೃತಿಯ ಜಗತ್ತಿನ ಆವರಣದಲ್ಲಿ ಮನುಷ್ಯ ಸಂಬಂಧಗಳ ವಿವರಗಳು ಬಿಚ್ಚಿಕೊಳ್ಳುವ ಪರಿ ಅನನ್ಯವಾಗಿದೆ.

ಕಾತ ಚಿಕ್ಕಣ್ಣನವರ ಕಥೆಗಳನ್ನು ಸಂಪೂರ್ಣವಾಗಿ ಓದಿ ಮಗಿಸಿದಾಗ ತಂತ್ರ ಮತ್ತು ಸಂವೇದನೆಗೆ ಸಂಬಂಧಿಸಿದಂತೆ ಎರಡು ಪ್ರಮುಖ ವಿಚಾರಗಳು ಸ್ಪಷ್ಟವಾಗುತ್ತವೆ, ಮೊದಲನೆಯದಾಗಿ ಚಿಕ್ಕಣ್ಣನವರ ಕಥನದ ಮುಖ್ಯ ನೆಲೆಗಳನ್ನು ಈ ಕೆಳಕಂಡಂತೆ ಗುರುತಿಸಬಹುದು.

೧) ನಿಸರ್ಗ ಮತ್ತು ಮನುಷ್ಯ ಸಂಬಂಧದ ನೆಲೆಗಳು, ೨) ನಿಸರ್ಗ ಮತ್ತು ಸಾಮಾಜಿಕ ಸಂಬಂಧದ ನೆಲೆಗಳು, ೩) ನಿಸರ್ಗ ಮತ್ತು ಸಂಸ್ಕೃತಿಯ ಸಂಬಂಧದ ನೆಲೆಗಳು, ೪) ಜಾಗತೀಕರಣದ ಪ್ರಭಾವದಿಂದ ನಿರ್ಮಾಣವಾಗಿರುವ ಸಮಾಜಿಕ ಆರ್ಥಿಕ, ಸಾಂಸ್ಕೃತಿಕ ಸ್ಥಿತ್ಯಂತರದ ನೆಲೆಗಳು, ೫) ಊಳಿಗಮಾನ್ಯ ವ್ಯವಸ್ಥೆಯಲ್ಲಿನ ಶೋಷಣೆಯ ಸ್ವರೂಪದ ನೆಲೆಗಳು, ೬) ಯಜಮಾನ ಸಂಸ್ಕೃತಿಯ ಪ್ರತಿರೋಧದ ನೆಲೆಗಳು, ೭) ಬಡತನ ಸಂಸ್ಕೃತಿಯ ನೆಲೆಯ ಶೋಧನೆ, ೮) ಮತ ಧಾರ್ಮಿಕ ನಂಬಿಕೆಗಳು, ಇವುಗಳ ಮೂಲಕ ಸಮಾಜ ಮನುಷ್ಯ ಮತ್ತು ಸಂಸ್ಕೃತಿಯನ್ನು ನಿಯಂತ್ರಿಸುವ ನೆಲೆಗಳ ಶೋಧನೆ, ೯) ಜಾತಿಯ ಸಂಬಂಧದಲ್ಲಿ ಮನುಷ್ಯ ಸಂಬಂಧಗಳು ವಿಘಟನೆಗೊಳ್ಳುವ ಬಗೆ, ೧೦) ಪ್ರೀತಿ ಪ್ರೇಮದಲ್ಲಿ ಮನುಷ್ಯ ಸಂಬಂಧಗಳು ಗಟ್ಟಿಗೊಳ್ಳುವ ಇಲ್ಲವೆ ವಿಘಟನೆಗೊಳ್ಳುವ ನೆಲೆಗಳ ಸ್ವರೂಪ. ಮೇಲ್ಕಂಡ ನೆಲೆಗಳಲ್ಲಿ ಚಿಕ್ಕಣ್ಣನವರ ಕಥೆಗಳನ್ನು ಅಧ್ಯಯನ ನಡೆಸುವುದರಿಂದ ಕಥೆಗಳ ಕಥನಗಾರಿಕೆಯ ಸ್ವರೂಪ ಅನಾವರಣಗೊಳ್ಳುತ್ತದೆ.

ಮನುಷ್ಯ ಒಂದೇ ಪಾತಳಿಯಲ್ಲಿ ಬದುಕುವುದಿಲ್ಲ. ಏಕಕಾಲಕ್ಕೆ ಅವನು ಹಲವಾರು ಪಾತಳಿಗಳ ಮೇಲೆ ಬದುಕುತ್ತಿರುತ್ತಾನೆ. ಸಾಮಾಜಿಕ-ಸಾಂಸ್ಕೃತಿಕ ಪಾತಳಿ, ಜೈವಿಕ-ಸಾಮೂಹಿಕ ಪಾತಳಿ, ಮತ್ತು ಅಸ್ತಿತ್ವ ಪಾತಳಿ. ಈ ಪಾತಳಿಗಳ ಮೇಲೆ ಬದುಕುತ್ತಿರುವ ಮನುಷ್ಯನ ಸಂಬಂಧಗಳೂ ಕೂಡಾ ಭಿನ್ನ ಭಿನ್ನ. ತಾಯಿ-ಅಪ್ಪ, ಮಕ್ಕಳು ತಾಯಿ-ಮಕ್ಕಳು, ತಂಗಿ-ತಮ್ಮ, ಬಂಧು-ಬಾಂಧವರು, ಸ್ನೇಹಿತರು, ಹುಟ್ಟು-ಸಾವು, ಯಾತನೆ-ಕೆಡಕು ಇವುಗಳು ಅಸ್ತಿತ್ವದ ಪಾತಳಿ ಜಾತಿ ಜಾತಿಗೆ ಸಂಬಂಧಿಸಿದ ಆಚರಣೆಗಳು, ಮದುವೆಗಳು ಸಂಪ್ರದಾಯ ರಾಜಕೀಯ ಆರ್ಥಿಕ, ಸಂಸ್ಕೃತಿ ಇವೆಲ್ಲವೂ ಸಾಮಾಜಿಕ ಪಾತಳಿ. ಪಶುಪಕ್ಷಿ, ಗಿಡಮರ, ನಿಸರ್ಗ ಭೂಮಿ ಇವು ಜೈವಿಕ ಪಾತಳಿ. ಈ ಮೂರು ಪಾತಳಿಗಳು ಒಂದಕ್ಕೊಂದು ತಳಕು ಹಾಕಿಕೊಂಡಿರುತ್ತವೆ. ಚಿಕ್ಕಣ್ಣನವರ ಕಥೆಗಳಲ್ಲಿನ ಮನುಷ್ಯ ಸಂಬಂಧಗಳ ಸ್ವರೂಪವನ್ನು ಈ ಮೂರು ಪಾತಳಿಗಳ ನೆಲೆಗಳಲ್ಲಿ ಗ್ರಹಿಸಬಹುದು.

ಭಾರತದಂತಹ ಜಾತಿ ವ್ಯವಸ್ಥೆ ಇರುವ ಸಾಮಾಜಿಕ ವ್ಯವಸ್ಥೆಯಲ್ಲಿ ಮನುಷ್ಯ ಸಂಬಂಧಗಳು ಜಾತಿಯಷ್ಟೆ ಸಂಕೀರ್ಣ ಸ್ವರೂಪವನ್ನು ಪಡೆದುಕೊಂಡುಬಿಟ್ಟಿವೆ. ವರ್ಣವ್ಯವಸ್ಥೆ ಇರುವ ದೇಶಗಳಲ್ಲಿ ಅಥವಾ ಕಪ್ಪು ಬಿಳಿ ಎಂದು ಜನರನ್ನು ವರ್ಗೀಕರಿಸಿಕೊಂಡಾಗ ಉಂಟಾಗುವ ಮನುಷ್ಯ ಸಂಬಂಧಗಳಿಗೂ ಸಾವಿರಾರು ಜಾತಿಗಳು ಉಪಜಾತಿಗಳು ಇರುವ ಭಾರತದಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಮನುಷ್ಯ ಸಂಬಂಧಗಳ ಸ್ವರೂಪ ಬಹಳಷ್ಟು ಸಂಕೀರ್ಣ. ಈ ಸಂಕೀರ್ಣತೆಯನ್ನು ಹಿಡಿದಿಡುವ ಆ ಮೂಲಕ ಅದನ್ನು ವಿವರವಾಗಿ ಅನಾವರಣಗೊಳಿಸುವ ಕಲೆಗಾರಿಕೆ ಚಿಕ್ಕಣ್ಣನವರ ಕಥನಕ್ಕೆ ಇದೆ. 'ಜಪದ ಕಟ್ಟೆ'ಯಾಗಿರಬಹುದು 'ಗೌತಮ'ನಾಗಿರಬಹುದು, 'ಒಡಲುರಿ' ಕಥೆಯಾಗಿರಬಹುದು, ಇಲ್ಲಿ ಬರುವ ಪಾತ್ರಗಳು ಜಾತಿ ವ್ಯವಸ್ಥೆಯಲ್ಲಿಯೇ ಮನುಷ್ಯ ಸಂಬಂಧಗಳನ್ನು ಹುಡುಕಿ ಎಲ್ಲರೂ ಮನುಷ್ಯರು ಎಂಬ ಭಾವನೆಯಿಂದಲೆ ಬದುಕುವುದಕ್ಕೆ ತೊಡಗುತ್ತವೆ. ಜಪದ ಕಟ್ಟೆಯಲ್ಲಿನ ಶಂಕರಯ್ಯನ ಪಾತ್ರ ಜೈವಿಕ ಮತ್ತು ಸಾಮಾಜಿಕ ಪಾತಳಿಯ ಮೇಲೆ ನಿಂತಿರುವಂತಹದು.

ಆದ್ದರಿಂದ ಇಲ್ಲಿ ನಿಸರ್ಗದೊಂದಿಗೆ ಮನುಷ್ಯನ ಬದುಕು ಮತ್ತು ಸಂಬಂಧಗಳನ್ನು ಹುಡುಕುವ ಪ್ರಯತ್ನವಿದೆ.

"ಅಪ್ಪನ ರಕ್ತ ಹಂಚಿಕೊಂಡು ಬಂದ ಆರು ಮಕ್ಕಳಾದ
ನಾವು ಒಂದು ದಿಕ್ಕಾಗಲಿಲ್ಲ. ಮನುಷ್ಯರಿರೋ ಕೇರಿ
ಯವರು ಮನುಷ್ಯರಾಗಿ ನಡೆದುಕೊಳ್ಳಲಿಲ್ಲ"
ಶಂಕರಯ್ಯ ಸರಕ್ಕನೆ ಆ ಜೊಂಡೆ ಹುಲ್ಲಿನ
ಪೊದೆಯಿಂದ ಬಂದ ಸದ್ದಿನತ್ತ ನೋಡಿದ. ಆ
ಪೊದೆಯೊಳಗಿದ್ದ ನೀರಾನೆಗಳು ಕಿರಿಪಿರಿಗುಟ್ಟುತ್ತಾ
ಒಂದೊಂದಾಗಿ ಈಚೆ ಬಂದವು. ಹೊಳೆಯೊಳಗಿಂದ
ಕಿತಾಪತಿಯೋ ಅಥವಾ ಪಕ್ಕದ ತಾಳೆ ಮಂಡಿಗೆಯಲ್ಲಿರೊ
ಹಾವು ಕಂಡವೋ? ಏನದು? ಸುಮ್ಮನೆ ಅಂದುಕೊಂಡ.
ಐದಾರು ಇದ್ದ ಆ ತೆಂಡೆ ಹಕ್ಕಿಗಳು ತಿರುಗಿ ಹೊಳೆ
ನಡುವಿನ ನೀರಿರೋ ಗುಂಡಿಗೆ ಬಂದವು. ಕಚ್ಚಾಡಿ
ಕೊಂಡಂಗೆ ಈಚೆ ಬಂದಿದ್ದವು. ಈಗ ಎಲ್ಲವೂ
ಒಂದೆಯಾಗಿ ಸೇರಿಕೊಂಡೂ ಯಾವ ಗುಂಪೂ
ಒಡೆಯಲಿಲ್ಲ."

ಜೈವಿಕ ಮತ್ತು ಸಾಮಾಜಿಕ ಪಾತಳಿಗೆ ಇದೊಂದು ಉದಾಹರಣೆ ಸಾಕು. ಕಾತ ಚಿಕ್ಕಣ್ಣನವರ ಕಥನದ ಸ್ವರೂಪ ಯಾವ ಬಗೆಯದು, ಮನುಷ್ಯ ಸಂಬಂಧಗಳ ಸ್ವರೂಪವನ್ನು ಯಾವ ರೀತಿ ಅನಾವರಣಗೊಳಿಸುತ್ತವೆ ಎಂಬುದನ್ನು ತಿಳಿಯಲು. ಎಷ್ಟೆಲ್ಲ ಧ್ವನಿಯ ಅರ್ಥ ಸಾಧ್ಯತೆಗಳನ್ನು ಗಮನಿಸಬಹುದು. ನಿಸರ್ಗದಲ್ಲಿನ ಪಶು, ಪಕ್ಷಿ ಕೀಟಗಳಲ್ಲಿ ಒಂದು ರೀತಿಯ ಸಂಬಂಧವಿದೆ, ಆ ಸಂಬಂಧವೇ ಮನುಷ್ಯರಲ್ಲೂ ಇರಬೇಕು. ಆದರೆ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳು ಮನುಷ್ಯ ಸಂಬಂಧಗಳನ್ನು ನಿರ್ಧರಿಸಿಬಿಡುವಂತಹ ಸನ್ನಿವೇಶಗಳನ್ನು ಕೆಲವು ಪಟ್ಟಭದ್ರ ಹಿತಾಸಕ್ತಿಗಳು ನಿರ್ಮಾಣ ಮಾಡುವುದರಿಂದ ಮಾನವ ಸಂಬಂಧಗಳಲ್ಲಿ ತರತಮ ಉಂಟಾಗಿದೆ. ಈ ಕಾರಣದಿಂದಾಗಿಯೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಪಾತಳಿಯ ನೆಲೆಗಳಲ್ಲಿ ಮನುಷ್ಯ ಸಂಬಂಧಗಳು ಎಷ್ಟೊಂದು ಹದಗೆಟ್ಟಿವೆಯೆಂದರೆ ಊಳಿಗಮಾನ್ಯ ವ್ಯವಸ್ಥೆಯಲ್ಲಿದ್ದ ಒಡೆಯ ಮತ್ತು ಆಳುವಿನ ಮಧ್ಯೆ ಇರುವ ಸಂಬಂಧಕ್ಕಿಂತಲೂ ಭೀಕರವಾದದ್ದಾಗಿದೆ. ವೈಯಕ್ತಿಕ ಸ್ವಾರ್ಥ, ಲೋಭಗಳು, ಧಾರ್ಮಿಕಭೀತಿ ಅಂಧ ವಿಶ್ವಾಸ ಇತ್ಯಾದಿಗಳು ಬಂದುಬಳಗದವರನ್ನೆ ಶೋಷಣೆ ಮಾಡುವ ಮಟ್ಟಕ್ಕೆ ಕೊಂಡೊಯ್ದಿವೆ. 'ಒಂದೂರು ಒಂದ್ಕತೆ'ಯಲ್ಲಿ ನಿರೂಪಕನನ್ನು ಅಕ್ಕ ಬಾವನೇ ಶೋಷಿಸುತ್ತಾರೆ. ಜೀತದಾಳು ಯಂಕ್ಟನನ್ನು ಅವನ ಅಣ್ಣನೇ ಶೋಷಿಸುತ್ತಾನೆ. ಒಡಲುರಿ, ವಂಶಸ್ಥರು ಇತ್ಯಾದಿ ಕಥೆಗಳು ಪರಂಪರಾನುಗತ ಧಾರ್ಮಿಕ ವ್ಯವಸ್ಥೆ, ಮೂಢ ನಂಬಿಕೆಗಳನ್ನು ಬಳಸುವುದರ ಮೂಲಕ ಅಶಿಕ್ಷಿತ ಜನರನ್ನು ಶೋಷಿಸುವ ಪರಿಯನ್ನು ಶೋಧಿಸುತ್ತವೆ.

ಇಂದು ಆರ್ಥಿಕ ಸ್ಥಿತಿಗತಿಗಳು ಮಾನವನ ಬದುಕಿನಲ್ಲಿ ಪ್ರಧಾನ ಪಾತ್ರವಹಿಸುತ್ತಿರುವುದರಿಂದ ಮಾನವ ಸಂಬಂಧಗಳನ್ನು ಸಹ ಆರ್ಥಿಕ ಸ್ಥಿತಿಗತಿಗಳೇ ನಿರ್ಧರಿಸುವಂತಹ ಸ್ಥಿತಿ ಏರ್ಪಟ್ಟಿದೆ. ಇದಕ್ಕೆ ಕಾರಣ ಜಾಗತೀಕರಣದ ಪ್ರಭಾವದಿಂದ ಮಾರುಕಟ್ಟೆಯೆ ಎಲ್ಲ ನಿಯಂತ್ರಿಸುತ್ತಿದೆ. ಆದುದ್ದರಿಂದ

ಬಂಧು ಬಳಗ, ಅಣ್ಣ-ತಮ್ಮ, ಅಕ್ಕ-ತಂಗಿ, ತಂದೆ-ಮಕ್ಕಳು-ತಾಯಿ ಇವರೆಲ್ಲರ ಮಧ್ಯೆ ಇದ್ದ ಸಂಬಂಧಗಳು ಮಾರುಕಟ್ಟೆಯ ಸಂಬಂಧಗಳಾಗಿಬಿಟ್ಟಿವೆ. ಇದು ಅನಾರೋಗ್ಯಕರವಾದ ಸಂಸ್ಕೃತಿಯ ಉಗಮಕ್ಕೆ ಕಾರಣವಾಗುತ್ತದೆ. ಅಷ್ಟೆ ಅಲ್ಲ ಮಾನವ ಸಂಬಂಧಗಳ ಸ್ವರೂಪವೇ ಮಾರುಕಟ್ಟೆಯ ಸ್ವರೂಪದಂತಾದರೆ ಮನುಷ್ಯತ್ವಕ್ಕೆ ಬೆಲೆಯೇ ಇಲ್ಲವಾಗಿಬಿಡುತ್ತದೆ. 'ಕಪ್ಪು ಮನಸ್ಸಿನ ಮೇಲೆ ಬರೆದ ಬಿಳಿ ಅಕ್ಷರ' ಕಥೆ ಇದಕ್ಕೆ ಅತ್ಯುತ್ತಮ ಉದಾಹರಣೆ. ಕಥನವು ಮುಖ್ಯವಾಗಿ ಮನುಷ್ಯನನ್ನೆ ಕುರಿತಂತಹದ್ದು. ಮನುಷ್ಯನನ್ನು ಬಿಟ್ಟರೆ ಕಥನವಾಗುವುದಿಲ್ಲ. ಕಥೆ ಮನುಷ್ಯನ ಬಗೆಗಿನ ಆಸ್ಥೆಯಿಂದ ಕಥನ ಹುಟ್ಟುತ್ತದೆ. ಈ ಆಸ್ಥೆಯಿಂದಲೇ ಮಾನವೀಯ ಸಂಬಂಧಗಳ ಶೋಧನೆ ಮುಖ್ಯವಾಗುತ್ತದೆ. ಈ ಶೋಧನೆಯ ಮಾರ್ಗಗಳನ್ನು ಚಿಕ್ಕಣ್ಣನವರ ಕಥೆಗಳು ನಿಸರ್ಗದಲ್ಲಿರುವ ಪ್ರಾಣಿ ಪಕ್ಷಿ ನೀರು ಅಂದರೆ ಜೈವಿಕ ಪಾತಳಿ ಮತ್ತು ಸಾಮಾಜಿಕ ಪತಳಿಯ ನೆಲೆಗಳಲ್ಲಿ ಶೋಧಿಸುತ್ತವೆ. ಯಾವುದೇ ಮಾಧ್ಯಮಕ್ಕೂ ಅಥವಾ ಜ್ಞಾನಶಾಖೆಗೂ ದಕ್ಕದೆ ಇರುವ ಬದುಕಿನ ಮಗ್ಗಲುಗಳನ್ನು ಗ್ರಹಿಸುವ ಸಾಮರ್ಥ್ಯ ಕಥನಕ್ಕಿದೆ. ಈ ಸಾಮರ್ಥ್ಯ ಚಿಕ್ಕಣ್ಣನವರ ಬಹುತೇಕ ಕಥೆಗಳಿಗೆ ಇದೆ. ಹಕ್ಕಿಗೂಡು ಕಟ್ಟುವಾಗ ಅದರ ಕಾಳಜಿ ಇರುವುದು ಗೂಡಿನ ಬಗ್ಗೆ ಅಲ್ಲ. ಅದರ ಕಾಳಜಿ ಮರಿಗಳ ಸುರಕ್ಷತೆಯ ಬಗೆಗೆ. ಈ ಪ್ರಾಥಮಿಕ ಕಾಳಜಿಯಿಂದಾಗಿಯೆ ಹಕ್ಕಿಗೂಡು ಹುಟ್ಟಿಕೊಳ್ಳುತ್ತವೆ. ಚಿಕ್ಕಣ್ಣನವರ ಕಥನವಲ್ಲಿ ಆವಿಷ್ಕಾರಗೊಳ್ಳುವ ಮನುಷ್ಯ ಸಂಬಂಧಗಳೂ ಕೂಡಾ ಬಗೆಯದು. ಈ ದೃಷ್ಟಿಯಿಂದ ಗೌತಮ ಕಥೆಯನ್ನು ಗಮನಿಸಬಹುದು.

ಗುರುಮೆ ಹಾಕಿರುವ ಬಿಲದಲ್ಲಿ ಏಡಿ ಇರುತ್ತದೆಂಬುದು ಲೋಕಕ್ಕೆ ಗೊತ್ತು. ಆದರೆ ಏಡಿ ಗುರುಮೆ ಹಾಕಿರುವ ಬಿಲದಲ್ಲಿರುವುದರಿಂದ ತನಗೆ ರಕ್ಷಣೆ ಇದೆ ಎಂದು ಭಾವಿಸಿಕೊಂಡು ಬದುಕುತ್ತಿರುತ್ತದೆ. ಆದರೆ ಅದರಲ್ಲಿ ಅದರ ಸಾವು ಅಡಗಿರುತ್ತದೆ ಎಂಬುದೆ ಇಲ್ಲಿನ ವ್ಯಂಗ್ಯ. ಹಾಗೆಯೇ ಗೌತಮನೂ ಕಡ ಗುರುಮೆಯಲ್ಲಿರುವ ಏಡಿಯಂತೆಯೆ ತನ್ನೆಲ್ಲಾ ಭಾವನೆಗಳನ್ನು ಹುದುಗಿಸಿಟ್ಟುಕೊಂಡು ಮೌನಿಯಾಗಿ ಬಿಡತ್ತಾನೆ. ಈ ಮೌನವೇ ಅವನ ಬದಕನ್ನು ಆವರಿಸಿ ಬದುಕಿನಿಂದ ವಂಚಿತನಾಗುವಂತೆ ಮಾಡುತ್ತದೆ. ತನ್ನ ತಂದೆ ತನಗಿಂತ ಕಿರಿಯಳನ್ನು ಮದವೆಯಾಗುವುದು ಅವನಿಗೆ ಇಷ್ಟವಾಗದೆ ಒಂದು ವರ್ಷ ಕಾಲ ಊರು ಬಿಟ್ಟು ಹೋಗಿ ಹಿಂತಿರುಗಿ ಬಂದಾಗ ತಾನು ಅಪಾರವಾಗಿ ಪ್ರೀತಿಸುತ್ತಿದ್ದ ನಾಗಾಜಿಯು ತನಗೆ ಚಿಕ್ಕಪ್ಪನ ಸಮಾನನಾದ ದೇವರಸನನ್ನು ಮದವೆಯಾಗಿರುವುದು ತಿಳಿಯುತ್ತದೆ. ಅವಳು "ನಾನೀಗ ನಿನಗೆ ಚಿಕ್ಕವ್ವ ಆಗಬೇಕು" ಎಂದು ಹೇಳಿದಾಗ ಅವನು ಮತಿಭ್ರಮಣೆಯಾದವನಂತೆ ವರ್ತಿಸಿಬಿಡುತ್ತಾನೆ ಮೌನಿಯಾಗಿಬಿಡುತ್ತಾನೆ.

ಮನುಷ್ಯ ಮೌನಿಯಾಗುವುದು ಬದುಕಿನ ಕ್ಷಣಿಕತೆಯ ಅರಿವಾದಾಗ, ಇಲ್ಲವೇ ಅಪಾರವಾದ ಕಷ್ಟ ದುಃಖ ಅನುಭವಿಸಿದಾಗ ಗೌತಮನಿಗೆ ಇವೆರಡೂ ಆಗಿರಬಹುದಾದ್ದರಿಂದ ಅವನು ಮೌನಿಯಾಗಿ ಬಿಡುತ್ತಾನೆ. ಈ ಮೌನದಲ್ಲಿಯೆ ದೇವರಾಜು, ಸುಂದರ, ನಿಂಗಾಜಿ, ಊರಿನ ಜನ ಇವರ ವ್ಯಕ್ತಿತ್ವಗಳ ಸ್ವರೂಪ ಮತ್ತು ಸಂಬಂಧಗಳು ಬಿಚ್ಚಿಕೊಳ್ಳುತ್ತಾ ಗೌತಮನ ಬದುಕಿನ ರೀತಿ ನೀತಿಗಳು ಅನಾವರಣಗೊಳ್ಳುತ್ತವೆ.

ಚಿಕ್ಕಣ್ಣನವರ ಬಹುತೇಕ ಕಥೆಗಳು ತನ್ನ ತಂತ್ರ ಮತ್ತು ಸಂವೇದನೆಯ ಮೂಲಕ ಹಿಡಿದಿಟ್ಟಿರುವ ಬಹಳ ಮುಖ್ಯವಾದ ವಿಚಾರವೆಂದರೆ ಜಾತಿ ವ್ಯವಸ್ಥೆಯ ದುಷ್ಪರಿಣಾಮಗಳು ಹಾಗೂ ಈ ವ್ಯವಸ್ಥೆಯಿಂದುಂಟಾಗಿರುವ ಮಾನವ ಸಂಬಂಧಗಳ ವಿಘಟನೆ. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಅಂಬೇಡ್ಕರ್ ಹೇಳುವಂತೆ 'ಅಂತಸ್ತುಗಳ ಅಸಮಾನತೆ' ಇದೆ. ಅಂದರೆ ಮೇಲು ಕೀಳುಗಳನ್ನು

ಉಂಟು ಮಾಡುವ ಶ್ರೇಣೀಕೃತ ವ್ಯವಸ್ಥೆ. ಇಂತಹ ಅಂತಸ್ತುಗಳ ಅಸಮಾನತೆ ಇದ್ದರೂ ಸಹ ವೃತ್ತಿಗಳಿಂದಾಗಿ ಗ್ರಾಮಾಂತರ ಪ್ರದೇಶದಲ್ಲಿ ಪರಸ್ಪರ ಅವಲಂಬಿತರಾಗಿದ್ದರು ಎಂಬುದು ಕೂಡಾ ಸತ್ಯ. ಆದರೂ ಈ ಅವಲಂಬನೆ ಅಥವಾ ಹೊಂದಾಣಿಕೆಯು ಬರೀ ತೋರಿಕೆಯದು ಮಾತ್ರವಾಗಿದೆ. ಸದ್ಭಾವನೆಯಿಂದ ಕೂಡಿರುವ ಸಮಾನ ಸ್ಥಾನೀಯ ವ್ಯವಸ್ಥೆಯ ಹೊಂದಾಣಿಕೆಯಲ್ಲ. ಇದನ್ನು 'ವೃತ್ತಿ ಸಂಘಗಳ ಒಕ್ಕೂಟ'ವೆಂದು ಕರೆಯಬಹುದು. 'ವೃತ್ತಿ ಸಂಘಗಳ ಒಕ್ಕೂಟ'ವೆಂಬುದನ್ನು ನಾನು ಪರಿಮಿತ ಅರ್ಥದಲ್ಲಿ ಬಳಸುತ್ತಿದ್ದೇನೆ. ಆದರೆ ಮಾನವ ಸಂಬಂಧಗಳ ದೃಷ್ಟಿಯಲ್ಲಿ ಜಾತಿ ಪದ್ಧತಿಯು ವೃತ್ತಿ ಸಂಘಗಳ ಒಕ್ಕೂಟವನ್ನು ಒಡೆದುಬಿಡುತ್ತದೆ. ಭಾರತೀಯನ ಬೌದ್ಧಿಕತೆಯನ್ನು, ವಿವೇಚನಾ ಶಕ್ತಿಯನ್ನು ಎಷ್ಟರಮಟ್ಟಿಗೆ ಜಾತಿ ಪದ್ಧತಿಯು ನಿಸ್ಸತ್ವಗೊಳಿಸಿದೆಯೆಂದರೆ ಬದುಕಿನ ಯಾವುದೇ ರಂಗದಲ್ಲೂ ಜಾತಿ ಬೇಧವನ್ನಲ್ಲದೆ ಮತ್ತೇನನ್ನು ನೋಡಲಾಗದ ಕುರುಡರಂತಾಗಿದ್ದಾರೆ. ಭಾರತೀಯ ಮತ ಧಾರ್ಮಿಕ ಜಗತ್ತಿನ ಜೀವ ನಿರ್ಜೀವ ವಿಭಾಗಗಳೆರಡರಲ್ಲೂ ಜಾತಿ ಎಂಬ ಭಾವನೆ ಬೇರು ಬಿಟ್ಟಿದೆ. ದವಸ-ಧಾನ್ಯ, ಚಿನ್ನ-ಬೆಳ್ಳಿ, ವಜ್ರ, ಸಂಗೀತ ಕಲೆ, ಪ್ರಾಣಿ ಪಕ್ಷಿಗಳಲ್ಲಿಯೂ ಕೂಡ ಜಾತಿ ಬೇಧವನ್ನು ಹುಡುಕಲಾಗಿದೆ. ಈ ಮೂಲಕ ಜಾತಿ ಪದ್ಧತಿಯು ಜೀವನದ ಸಹಜ ನಿಯಮ ಎಂಬ ಭಾವನೆಯನ್ನು ಜನಮನದಲ್ಲಿ ಬಿತ್ತಲಾಗಿದೆ. ಹೀಗಾಗಿ ಜಾತಿ ವ್ಯವಸ್ಥೆಯು ಆಹಾರ ಸೇವನೆ ಉಡುಗೆ ತೊಡುಗೆ ವ್ಯವಹಾರಗಳು ವಿವಾಹ ಸಂಬಂಧಗಳು, ದೈವಾರಾಧನೆಯಂತಹ ಸಾಮಾಜಿಕ ಚಟುವಟಿಕೆಗಳನ್ನೊಳಗೊಂಡಿರುವ ಒಂದು ಜೀವನ ವ್ಯವಸ್ಥೆಯಾಗಿ ಮಾರ್ಪಟ್ಟು ಮತಧರ್ಮದ ವ್ಯವಸ್ಥೆಯಾಗಿಬಿಟ್ಟಿದೆ. ಯಾವ ಸಾಮಾಜಿಕ ವ್ಯವಸ್ಥೆ ಮತೀಯ ಸ್ವರೂಪವನ್ನು ಪಡೆದುಕೊಳ್ಳುತ್ತದೋ ಇಲ್ಲವೇ ಜಾತಿಯ ಸ್ವರೂಪವನ್ನು ಪಡೆದುಕೊಳ್ಳುತ್ತದೊ ಅದು ಚಲನಶೀಲ ಸಾಮಾಜಿಕ ವ್ಯವಸ್ಥೆ ಯಾಗುವುದಿಲ್ಲ. ಇಂತಹ ವ್ಯವಸ್ಥೆಯಲ್ಲಿ ಜಾತಿ ಪದ್ಧತಿಯನ್ನು ಪಾಲಿಸದಿದ್ದಲ್ಲಿ ಉಗ್ರ ಶಿಕ್ಷೆಯನ್ನು ವಿಧಿಸಲಾಗುತ್ತದೆ. ಮತೀಯ ಧರ್ಮದ ಸ್ವರೂಪದಲ್ಲಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ನ್ಯಾಯದ ಪರಿಕಲ್ಪನೆ ಹೇಗಿರುತ್ತದೆಂಬುದು ಸರ್ವವಿಧಿತ. ನಗರೀಕರಣ, ಜಾಗತೀಕರಣ, ಉದಾರಿಕರಣಗಳಿಂದಾಗಿ ಇಂದು ಚಲನಶೀಲರಹಿತವಾದ ಸಮಾಜ ವ್ಯವಸ್ಥೆಯ ಜಾತಿ ಪದ್ಧತಿಯು ತನ್ನ ಜಡತ್ವವನ್ನು ಸ್ವಲ್ಪ ಸ್ವಲ್ಪವಾಗಿ ಕಳೆದುಕೊಂಡು ಚಲನಶೀಲವಾಗುತ್ತಿದೆ. ಶೈಕ್ಷಣಿಕ ರಾಜಕೀಯ ಆರ್ಥಿಕ ಉತ್ಕರ್ಷಕ್ಕಾಗಿ ನಡೆಸುತ್ತಿರುವ ಹಿಂದುಳಿದ ವರ್ಗ/ಜಾತಿಗಳ ಸಂಘಟಿತ ಯತ್ನ. ಈ ಮೂಲಕ ರೂಪುಗೊಳ್ಳುತ್ತಿರುವ ಹಿಂದುಳಿದ ದಲಿತ ವರ್ಗ/ಜಾತಿಗಳ ಆಂದೋಲನ, ಸಮಾನತೆಯ ತತ್ವಾದರ್ಶದ ವ್ಯಾಪಕ ಬಳಕೆ, ರಾಜಕೀಯ ಹಾಗೂ ಸಾಮಾಜಿಕ ಚಲನೆ ಮುಂತಾದ ಅಂಶಗಳು ಹಾಗೂ ನಗರೀಕರಣ ಜಾಗತೀಕರಣ, ಉದಾರೀಕರಣದ ಪ್ರಭಾವಗಳು ಜಾತಿ ವ್ಯವಸ್ಥೆಯಲ್ಲಿ/ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಲವು ಪರಿವರ್ತನೆಗಳಾಗುತ್ತಿವೆ. ಇದನ್ನು 'ಮುಚ್ಚಿದ ವ್ಯವಸ್ಥೆಯಿಂದ ಮುಕ್ತಸ್ತರ ವ್ಯವಸ್ಥೆಯತ್ತ' ಸಾಗಲು ನಡೆಯುತ್ತಿರುವ ಸಾಮಾಜಿಕ ಚಲನೆ ಎಂದು ಗುರುತಿಸಬಹುದು. ಇಂತಹ ಸಾಮಾಜಿಕ ಚಲನೆಯ ಸ್ವರೂಪವನ್ನು ಮುಚ್ಚಿದ ವ್ಯವಸ್ಥೆಯಿಂದ ಮುಕ್ತ ಸ್ತರದ ವ್ಯವಸ್ಥೆಯತ್ತ ಸಾಮಾಜಿಕ ಸ್ತರಗಳು ಮುನ್ನಡೆಯುತ್ತಿರುವ ಬಗೆಯನ್ನು ಚಿಕ್ಕಣ್ಣನವರು ತಮ್ಮ ಕಥನದಲ್ಲಿ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ. ಈ ಹಿಡಿದಿಡುವ ಬಗೆಯಿದೆಯಲ್ಲಾ ಅದನ್ನೇ ನಾವು ಕಥನ ಕ್ರಿಯೆ (Narration) ಎಂದು ಕರೆಯುವುದು. ಚಿಕ್ಕಣ್ಣನವರ ಬಹುತೇಕ ಕಥೆಗಳಲ್ಲಿ ಅದರಲ್ಲೂ ಹಮಿದಾಯಣ, ಒಡಲುರಿ ಕೊಂಡಿ ಮುಳ್ಳುಗಳು, ಜಪದ ಕಟ್ಟೆ, ಬೋರೆ ಮ್ಯಾಲೆ ಬಳೆಸರ ಬಿದ್ದಾವೆ, ಕಿಡಿ ಮುಂತಾದ ಕಥೆಗಳಲ್ಲಿ ಕಥೆ, ಕಥಾ ಪ್ರಬಂಧ (Narrative) ಮತ್ತು ಕಥನಕ್ರಿಯೆ (Narating) ಪರಸ್ಪರ ಸಂಬಂಧ

ಪಡೆದ 'ಸಂಕಥನ'ವಾಗಿದೆ. ಹೇಗಿದ್ದರೂ ಇಂದು ಕಥೆ ಕಾದಂಬರಿಗಳನ್ನು ನಿರೂಪಣೆಗಳು/ಭಾಷಿಕ ಸಂಕಥನಗಳು ಎಂದು ಪರಿಗಣಿಸುತ್ತಿದ್ದಾರಲ್ಲವೆ? ಈ ಸಂದರ್ಭದಲ್ಲಿ 'ಹಮಿದಾಯಣ' ಕಥೆಯನ್ನು ವಿಶ್ಲೇಷಣೆಗೆ ತೆಗೆದುಕೊಳ್ಳಬಹುದು. ಈ ಕಥೆಯು ಮೇಲೆ ವಿವರಿಸಿಕೊಂಡಂತಹ ಸಾಮಾಜಿಕ ಚಲನೆ, ಅಂದರೆ ಮುಚ್ಚಿದ ವ್ಯವಸ್ಥೆಯಿಂದ ಮುಕ್ತ ವ್ಯವಸ್ಥೆಯತ್ತ ನಡೆಯುವ ಸಾಮಾಜಿಕ ಚಲನೆಗೂ ಸ್ತ್ರೀವಾದಿ ನೆಲೆಗಳ ಅಧ್ಯಯನಕ್ಕೂ ಗಂಡು ಹೆಣ್ಣಿನ ಸಂಬಂಧಗಳ ಸ್ವರೂಪದ ವಿಶ್ಲೇಷಣೆಗೂ ನಿದರ್ಶನವಾಗುತ್ತದೆಯಲ್ಲದೆ ಚಿಕ್ಕಣ್ಣನವರ ಕಥೆಗಳ ಕಲಾಸಾಮರ್ಥ್ಯ ಮತ್ತು ಅರ್ಥ ಸಾಧ್ಯತೆಗಳ ಧ್ವನಿ ಶಕ್ತಿಯ ಕಡೆ ಗಮನ ಸೆಳೆಯುವುದಲ್ಲದೆ ಉತ್ತಮ ಸಂಕಥನವಾಗಿರುವುದನ್ನು ಮನದಟ್ಟು ಮಾಡಿಕೊಡುತ್ತದೆ.

ಹಮೀದ ಅಂತರ್ ಧರ್ಮ ವಿವಾಹ ಮಾಡಿಕೊಂಡವನು. ಇಂತಹ ಅಂತರ್ ಧರ್ಮ/ಜಾತಿ ವಿವಾಹಗಳು ನಡೆದಾಗ ಮತಸಿಷ್ಠ ಸಾಮಾಜಿಕ ವ್ಯವಸ್ಥೆಯಲ್ಲಿ ವಿರೋಧ ವ್ಯಕ್ತವಾಗುವುದು ಸಹಜ. ಇಂತಹ ವಿರೋಧದ ನಡುವೆ ಅವನು ಮದುವೆಯಾಗುತ್ತಾನೆ.

"ನಾವು ಲಗ್ನ ಆಯ್ತಿವಿ ಅಂತ ಹೊಂಟಾಗ ಜಾತಿ ಕುಲ
ಕೆಟ್ಹೋಯ್ತು ಅಂತ ಬಾಳ ಗದ್ಲ ಆಗೋಯ್ತು
ಊರ್ನೋರು ನಮ್ಮಪ್ಪ ಅವ್ವರಿಗೆಲ್ಲ ಹೀಡಿಸಿದ್ರು.
ಹಿಂಸೆ ಕೊಟ್ರು. ನಂಗೆ ಹಿಡ್ಕೊಂಡು ಹೊಡದ್ರು
ಸಾಯ್‌ಸೇಬುಡ್ತಿವಿ ಅಂತ ಹೇಳಿದ್ರು. ಇದುನೆಲ್ಲ
ನೋಡಿದ ನಮ್ಮವ್ವ ಒತ್ತಾಯ ಮಾಡಿ ಎಲ್ಲಾರ
ಹೋಗಿ ಬದುಕೋಳಿ ಅಂತ ಕಣ್ಣೀರು ಹಾಕಿದ್ಳು
ಇವಳೂ ಇಲ್ಲಿರೋದು ಬ್ಯಾಡ ಅಂತ ಹಠ
ಹಿಡಿದ್ಬುಟ್ಟಳು. ಆಗ ಇತ್ತಾಗಿ ಬಂದ್ ಬುಟ್ವೋ
ಇತ್ತೀಚ್ಗೆ ನಮ್ಮಪ್ಪನೂ ತೀರ್ಕೊಂಡು ಬುಟ್ಟನಂತೆ
ನಂಗೆ ಗೊತ್ತಾಗನಿಲ್ಲ. ನಮ್ಮವ್ವ ನಾವಿಲ್ಲಿರೋದ
ಹೆಂಗೋ ತಿಳಿದು ಹೇಳಿ ಕಳ್‌ಸವಳೆ ಅದು ಏಟೇ ಆದ್ರೂ
ನಮ್ಮೂರಲ್ವಾ? ನಮ್ದೊಂದು ನೆರಳ್ ಮಾಡ್ಕೊಂಡು ಅಲ್ಲಿ
ಬದುಕೀವಿ ಬುಡಿ ಸಹೇಬ್ರಾ?"

ಹಮೀದನ ಈ ಮಾತುಗಳು ಮತೀಯ, ಜಡ್ಡುಗಟ್ಟಿದ ಸಾಂಸ್ಥಿಕ ಸ್ವರೂಪ ಪಡೆದಿರುವ ಸಾಮಾಜಿಕ ವ್ಯವಸ್ಥೆಗೆ ಒಡ್ಡಿದ ಪ್ರತಿರೋಧವಾಗಿದೆ. ಹಾಗೆಯೇ ಮುಚ್ಚಿದ ವ್ಯವಸ್ಥೆಯಿಂದ ಮುಕ್ತಸ್ತರ ವ್ಯವಸ್ಥೆಗೆ ಚಲಿಸುವ ಸಾಮಾಜಿಕ ವ್ಯವಸ್ಥೆಯಲ್ಲಿನ ಮನುಷ್ಯ ಸಂಬಂಧಗಳ ಸ್ವರೂಪವನ್ನು ವ್ಯಕ್ತಪಡಿಸುವಂತಹುದ್ದಾಗಿದೆ. ಹಮೀದನ ಮೂಲಕವೇ ಗ್ರಾಮ ಮತ್ತು ನಗರ ಪ್ರದೇಶಗಳಲ್ಲಿನ ಬದುಕು ಮತ್ತು ಮನುಷ್ಯ ಸಂಬಂಧಗಳ ಸ್ವರೂಪವನ್ನು ಮನವರಿಕೆ ಮಾಡುವ ಕಥನದ ಉದ್ದೇಶ ಸಾಫಲ್ಯವನ್ನು ಪಡೆದಿದೆ. ಪಟ್ಟಣದವರ ಮೋಸ ವಂಚನೆ ಮನುಷ್ಯ ಸಂಬಂಧಗಳ ಬಗ್ಗೆ ಅಷ್ಟೇನು ಕಾಳಜಿ ಇಲ್ಲದಿರುವಿಕೆ. ಬರೀ ಆರ್ಥಿಕವಾಗಿಯೇ ಯೋಚಿಸುವ ಮನುಷ್ಯರ ಸಂಬಂಧದ ವಿನ್ಯಾಸಗಳುಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಇಲ್ಲಿನ ಕಥನ ಕ್ರಿಯೆಯ ಸ್ವರೂಪದಿಂದಾಗಿಯೇ ಈ ಕಥೆ ಕನ್ನಡ ಕಥಾ ಸಾಹಿತ್ಯದಲ್ಲಿ ಉತ್ತಮ ಸ್ಥಾನ ಪಡೆದುಕೊಳ್ಳುತ್ತದೆ.

ಈ ಕಥೆಗೆ ಮತ್ತೊಂದು ಆಯಾಮವೂ ಇದೆ. ಸ್ತ್ರೀವಾದಿ ನೆಲೆಯಲ್ಲಿ ಇದನ್ನು ವಿಶ್ಲೇಷಣೆಗೆ ಗುರಿಪಡಿಸಬಹುದು. ಸ್ತ್ರೀವಾದಿ ಚಳುವಳಿಯು ಹೆಣ್ಣಿನ ಹೊಸ ಚಿತ್ರಣದ ಹೊಸ ಯೋಚನಾ ಕ್ರಮ ಮತ್ತು ಮೌಲ್ಯಗಳ ಹೊಸ ವ್ಯವಸ್ಥೆಯಿಂದೊಡಗೂಡಿದ ಹೆಣ್ಣಿನ ಹೊಸ ವ್ಯಕ್ತಿತ್ವವನ್ನು ಸೃಷ್ಟಿಸುತ್ತದೆ. ಸ್ತ್ರೀವಾದಿ ಆಧ್ಯಾತ್ಮಿಕತೆಯು ಧರ್ಮ ಮತ್ತು ತತ್ವಶಾಸ್ತ್ರದ ಜೊತೆ ಸಾಮಾಜಿಕ ಮತ್ತು ರಾಜಕೀಯ ಜೀವನದ ಮೇಲೆ ಆಳವಾದ ಪ್ರಭಾವ ಬೀರುತ್ತಿದೆ. ಸ್ತ್ರೀವಾದಿ ಚಳುವಳಿ, ಹಿಂದುಳಿದ ವರ್ಗಗಳ ಚಳುವಳಿ, ರೈತ ಚಳುವಳಿ, ದಲಿತ ಚಳುವಳಿ, ಪರಿಸರ ಚಳುವಳಿ, ಕುಲ ಸಂಬಂಧಿ ಚಳುವಳಿ, ಜನಾಂಗದ ಹೆಗ್ಗಳಿಕೆಯಿಂದ ಅಲ್ಪಸಂಖ್ಯಾತರನ್ನು ಶೋಷಿಸುವುದರ ವಿರುದ್ಧ ಬಂಡೆದ್ದಿರುವ ಅನೇಕ ಜನಾಂಗೀಯ ವಿಮೋಚನಾ ಚಳುವಳಿಗಳು ಸಾಂಪ್ರದಾಯಿಕ ಜಡತ್ವದ ಸಮಾಜದ ಕಲ್ಪನೆಯನ್ನು ವಿರೋಧಿಸುತ್ತಿವೆ. ಜಾಗತಿಕ ಮಟ್ಟದಲ್ಲಿ ಇದು ಆರ್ಥಿಕ ಸ್ವರೂಪವನ್ನು ಪಡೆದುಕೊಂಡು ತೃತೀಯ ಜಗತ್ತಿನ ರಾಷ್ಟ್ರಗಳು ಮುಂದುವರಿದ ರಾಷ್ಟ್ರಗಳ ಮೇಲರಿಮೆಯ ಬಗ್ಗೆ ವಿರೋಧವನ್ನು ವ್ಯಕ್ತಪಡಿಸುತ್ತಿವೆ. ಮೇಲೆ ತಿಳಿಸಿದ ಎಲ್ಲ ಚಳುವಳಿಗಳು ಪ್ರತ್ಯೇಕವಾಗಿ ಕಾರ್ಯನಿರತವಾಗಿದ್ದರೂ ಇವುಗಳ ನಡುವೆ ಪರಸ್ಪರ ಸಂಬಂಧವಿಲ್ಲದಂತೆ ಗೋಚರವಾದರೂ ಇತ್ತೀಚಿನ ಅಮೆರಿಕಾ ಮತ್ತು ಯುರೋಪುಗಳಲ್ಲಿ ಹಲವಾರು ಸಾಮಾಜಿಕ ಸಾಂಸ್ಕೃತಿಕ ಚಳುವಳಿಗಳಲ್ಲಿ ಸ್ತ್ರೀವಾದಿ ಚಳುವಳಿ ಮಹತ್ವಪೂರ್ಣ ಪಾತ್ರವಹಿಸುತ್ತಿರುವುದನ್ನು ಕಾಣಬಹುದು. ಇದರಿಂದಾಗಿ ಇಂದು ಎಲ್ಲ ಬಗೆಯ ಚಳುವಳಿಗಳ ನಡುವೆ ಸಂಬಂಧವನ್ನು ಬೆಸೆದು ಸ್ತ್ರೀವಾದಿ ಚಳುವಳಿಯು ಒಂದು ದೊಡ್ಡ ಸಾಂಸ್ಕೃತಿಕ ಶಕ್ತಿಯಾಗಿ ಅಮೆರಿಕಾ ಮತ್ತು ಯುರೋಪುಗಳಲ್ಲಿ ಬೆಳೆಯುತ್ತಿದೆ, ಬೆಳೆದಿದೆ. ನೂರಾರು ಗುಂಪುಗಳ ಹೊಸ ಮೈತ್ರಿ ಮತ್ತು ಸಂಯೋಜನೆಗಳು ಶ್ರೇಣಿರಹಿತವೂ ದರ್ಪರಹಿತವೂ ಅಹಿಂಸಾತ್ಮಕವೂ ಆದ ಉದ್ದೇಶಗಳನ್ನು ಹೊಂದಿದೆ. ಈ ಶತಮಾನದಲ್ಲಿ ಕೆಲವು ಚಳುವಳಿಗಳು ತಮ್ಮೆಲ್ಲ ಉದ್ದೇಶಗಳ ಸಾಮುದಾಯಕತೆಯನ್ನು ಅರ್ಥ ಮಾಡಿಕೊಂಡು ಜತೆ ಜತೆಗೆ ಬೆಳೆಯುತ್ತ ಸಮಗ್ರ ಸಾಮಾಜಿಕ ಪರಿವರ್ತನೆಗೆ ಬೇಕಾದ ಪ್ರಬಲ ಶಕ್ತಿಯಾಗಿ ಮಾರ್ಪಾಟುಗೊಳ್ಳುತ್ತಿವೆ. ಇಂತಹ ಶಕ್ತಿಯನ್ನು 'ಸಾಂಸ್ಕೃತಿಕ ಕ್ರಿಯಾತ್ಮಕ ಪ್ರೇರಕ ಮಾದರಿ' ಎಂದು ಕರೆಯಬಹುದು. ಇಂತಹ ಸಾಂಸ್ಕೃತಿಕ ಕ್ರಿಯಾತ್ಮಕ ಪ್ರೇರಕ ಮಾದರಿಯನ್ನು ಹುಟ್ಟುಹಾಕುವುದಕ್ಕೆ ಸ್ತ್ರೀವಾದಿ ಚಳುವಳಿ ಕಾರಣವಾಗಿರುವುದರಿಂದ ಸ್ತ್ರೀಯರು ಮಹತ್ವದ ಪಾತ್ರವನ್ನು ಸಾಮಾಜಿಕ ಪರಿವರ್ತನೆಯಲ್ಲಿ ಹಾಗೂ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಾರೆ. 'ಹಮೀದಾಯಣ' ಕಥೆಯ ಈ ಮಾತುಗಳು ಉಲ್ಲೇಖನೀಯ.

"ಇಂಥ ಹೊತ್ತು ಹಮೀದಗೆ ಹೆಂಡತಿಯೆ
ಪರಮ ಆಸರೆ, ಚಟುವಟಿಕೆ ನಗುಗಳನ್ನು
ಕಬಳಿಸಿಬಿಡುವಷ್ಟು ಇಂತಹ ಹಾಳು ಅವಸರ
ಪೆದ್ದುತನಗಳು ತನ್ನನ್ನು ಮುತ್ತುವಾಗ ಚಿಟಿಕೆ
ಹೊಡೆದಂತೆ ಪರಿಹರಿಸಿಬಿಡುವ ಜಾಣೆ ಅವಳು
ಅದಕ್ಕಾಗಿಯೇ ಅವಳನ್ನು ಹೆಚ್ಚು ಹೊತ್ತು
ಬಿಟ್ಟಿರಲಾಗುವುದಿಲ್ಲ"

ಇಲ್ಲಿ ಸ್ತ್ರೀ ಶಕ್ತಿಯ ಅಗಾಧತೆಯನ್ನು ಅರಿಯಬಹುದು. ಅಷ್ಟೆ ಅಲ್ಲ ಸ್ತ್ರೀವಾದಿ ನೆಲೆಗಳು ಇಂದಿನ ಸಂದರ್ಭದಲ್ಲಿ ಯಾವ ಸ್ವರೂಪದಲ್ಲಿ ಕಾರ್ಯನಿರ್ವಹಿಸುತ್ತಿವೆ ಎಂಬುದನ್ನು ತಿಳಿಯಬಹುದು.

ಹಾಗೆಯೇ ಹೆಣ್ಣನ್ನು ಸಾಂಪ್ರದಾಯಿಕ ಹೆಣ್ಣನ್ನಾಗಿ ಭಾವಿಸದೆ ಅವಳನ್ನು ಸಖಿಯಾಗಿ ನೋಡುವ ಭಾವ ಇಲ್ಲಿ ಮುಖ್ಯವಾಗಿದೆ.

ಕುವೆಂಪು ಬೇಂದ್ರೆಯಲ್ಲಿರುವಂತೆ ಚಿಕ್ಕಣ್ಣನವರಲ್ಲೂ ಸಹ ಸಮುದಾಯ ಮತ್ತು ವ್ಯಕ್ತಿ ಇವುಗಳ ಸಂಘರ್ಷದ ಚಿತ್ರ ಇದೆ. ಕುವೆಂಪು ಇದಕ್ಕಾಗಿ ಕಾದಂಬರಿಯಂತಹ ದೊಡ್ಡ ಕ್ಯಾನ್‌ವಾಸ್ ಬಳಸುತ್ತಾರೆ. ಬೇಂದ್ರೆ ಭಾವಗೀತೆಯಂತಹ ಚಿಕ್ಕ ಕ್ಯಾನ್‌ವಾಸ್ ಬಳಸಿದ್ದಾರೆ. ಆದರೆ ಚಿಕ್ಕಣ್ಣನವರು ಕಾಂದಬರಿಯಂತಹ ದೊಡ್ಡ ಕ್ಯಾನ್‌ವ್ಯಾಸ್ ಮತ್ತು ಕಥೆಗಳಂತಹ ಚಿಕ್ಕ ಕ್ಯಾನ್‌ವಾಸ್ ಎರಡನ್ನು ಬಳಸಿಕೊಳ್ಳುತ್ತಾರೆ. ಇದು ಬಹಳ ಮುಖ್ಯವಾದದ್ದು. ಆಧುನಿಕ ಸಂದರ್ಭದಲ್ಲಿ ಮೂಡಿದ ವ್ಯಕ್ತಿ ಸ್ವಾತಂತ್ರ್ಯದ ಕಥೆ ಬೇಂದ್ರೆಯವರದು. ಅದು ಹೆಣ್ಣಿನ ಸ್ವಾತಂತ್ರ್ಯದ ಕಥೆ ಉದಾಹರಣೆಗೆ ಸಖೀಗೀತ ನೋಡಬಹುದು. ಹೆಂಡತಿಯನ್ನು ಇಲ್ಲಿ ಸಾಂಪ್ರದಾಯಿಕ ಹೆಣ್ಣನ್ನಾಗಿ ನೋಡದೆ ಸಖಿಯನ್ನಾಗಿ ನೋಡಲಾಗಿದೆ. ಗಂಡನ ಅಡಿಯಾಳು, ಹೆಣ್ಣು ಗಂಡಿನ ಸಮಾನ ಅಲ್ಲ ಎಂಬ ಭಾವನೆ ಇಲ್ಲ. ಇಲ್ಲಿನ ನಾಯಕ ಸಖಿಯಾಗಬೇಕೆಂದು ಒತ್ತಾಯಿಸುತ್ತಾನೆ. ಗಂಡು ಹೆಣ್ಣಿನ ಸಂಬಂಧ ಸಾಂಪ್ರದಾಯಿಕವಾಗಿರದೆ ಬೇರೊಂದು ಸ್ವರೂಪದಲ್ಲಿ ನೋಡಬೇಕೆನ್ನುವ ಮನಸ್ಥಿತಿ ಇಲ್ಲಿದೆ. ಹೆಣ್ಣನ್ನು ಸಖಿಯನ್ನಾಗಿ ನೋಡುವುದು ಆಧುನಿಕ ಚಿಂತನೆ. ಬಡವ ಬಲ್ಲಿದರ ಪರಿಕಲ್ಪನೆಗಳನ್ನು ಕುವೆಂಪು ನೇರವಾಗಿ ಬಳಸಿದರೆ ಬೇಂದ್ರೆಯವರು ಗಂಡು ಹೆಣ್ಣಿನ ಸಂಬಂಧದೊಂದಿಗೆ ಬಡವ ಬಲ್ಲಿದರ ಪರಿಕಲ್ಪನೆಗಳನ್ನು ಬಳಸುತ್ತಾರೆ. ಕುವೆಂಪು ಅವರ ಕವಿತೆ ಮತ್ತು ಕಾದಂಬರಿಗಳಲ್ಲಿ ಬಡವರ ಸ್ಥಿತಿಗತಿಗಳು ನೇರವಾಗಿ ಬಳಕೆಯಾಗುತ್ತವೆ. ಬೇಂದ್ರೆ ಮತ್ತು ಚಿಕ್ಕಣ್ಣನವರಲ್ಲಿ ಬಡವ ಬಲ್ಲಿದರ ಪರಿಕಲ್ಪನೆಗಳು ಗಂಡು ಹೆಣ್ಣಿನ ಸಂಬಂಧದೊಂದಿಗೆ ಬಳಕೆಯಾಗುತ್ತವೆ. ಆದ್ದರಿಂದ ಚಿಕ್ಕಣ್ಣನವರ ಕಥನಕ್ಕೆ ತನ್ನದೆ ಆದ ಮಹತ್ವ ಸಿದ್ಧಿಸಿದೆ ಹಾಗೂ ಉತ್ತಮ ಸಂಕಥನದ ವ್ಯಾಪ್ತಿ ಪಡೆದುಕೊಂಡಿದೆ. ಹಮೀದಾಯಣ ಹಾಗೂ ಕಂಡೇರಿ ಸಂಕಲನದ ಎಲ್ಲ ಕಥೆಗಳು ಇದಕ್ಕೆ ಸ್ಪಷ್ಟವಾದ ನಿದರ್ಶನಗಳಾಗಿವೆ.

ಚಿಕ್ಕಣ್ಣನವರ ಕಥನಕ್ಕೆ ಕಾವ್ಯಗುಣವಿದೆ. ಭಾಷಿಕ ಸಂಕಥನದಲ್ಲಿ ಈ ಕಾವ್ಯಗುಣ ಬಹಳ ಪ್ರಮುಖವಾದ ಅಂಶ. ಕಾವ್ಯದ ಕಾವಿಲ್ಲದೆ ದ್ವಂದ್ವ ಪ್ರವೃತ್ತಿಗಳನ್ನು ಬೆಸೆಯಲು ಸಾಧ್ಯವಿಲ್ಲ. ಆದರೆ ಕಾವ್ಯಕ್ಕೆ ಇಲ್ಲದ ಸ್ವಚ್ಛಂದ ಗದ್ಯಕ್ಕೆ ಇರುವುದರಿಂದ ಹೆಚ್ಚು ವಿಸ್ತಾರವುಳ್ಳ ಸಂವೇದನೆಗಳನ್ನು ಕಥೆಯ ಕ್ರಿಯೆಯಲ್ಲಿ ತರಲು ಸಾಧ್ಯವಾಗುತ್ತದೆ, ಚಿಕ್ಕಣ್ಣನವರ ಕಥನ ಕ್ರಿಯೆಗೆ ಮಹತ್ವ ಬಂದಿರುವುದು ಕಾವ್ಯಗುಣದಿಂದ. ಕಥನ ಶಿಲ್ಪ, ಸಂಯಮ, ಸಂಕ್ಷಿಪ್ತತೆ ಮಾನವೀಯ ಸಂಬಂಧಗಳ ಚಿತ್ರಣದಲ್ಲಿ ಔಚಿತ್ಯ ಮತ್ತು ಸುಶೀಲತೆಯ ಶಿಷ್ಟಗುಣ ಇವುಗಳ ನಿಷ್ಕರ್ಷೆಯಲ್ಲಿ ಚಿಕ್ಕಣ್ಣನವರು ಸಮರ್ಥವಾದ ಅಭಿವ್ಯಕ್ತಿಯನ್ನು ಸಾಧಿಸಿದ್ದಾರೆ.

□

---

ಎಚ್. ದಂಡಪ್ಪ
೫೬೧, ಶ್ರೇಯಸ್, ೨ನೇ ಕ್ರಾಸ್, ಯು.ವಿ.ಸಿ.ಇ. ಲೇಔಟ್, ಬಸವೇಶ್ವರನಗರ
ಬೆಂಗಳೂರು - ೫೬೦ ೦೭೯
ದೂರವಾಣಿ : ೨೩.೨೨ ೧೧೫೫

# ಕಲಾವಿದ : ಡಾಲಿ

ಪೂರ್ಣಿಮಾ ದೇವಿ ಜಿ.

ನಾಗರಿಕತೆ ಬೆಳೆದಂತೆಲ್ಲಾ ಮನುಷ್ಯನ ನಡೆ, ನುಡಿ, ಸಂಸ್ಕೃತಿ, ಸಂಪ್ರದಾಯ ಬದುಕಿನ ರೀತಿ ರಿವಾಜುಗಳೆಲ್ಲಾ ತಮ್ಮ ಮೂಲ ಹಾದಿಯನ್ನು ಬಿಟ್ಟು ಹೊಸ ಮಾರ್ಗವನ್ನು ಪಡೆದುಕೊಂಡವು. ಹೀಗೆ ಹೊಸ ಮಾರ್ಗದಲ್ಲಿ ನಡೆಯುವ ಬದಲಾವಣೆಗಳು ಬದುಕಿನಲ್ಲಿ ವಿವಿಧ ಆಯಾಮಗಳನ್ನು ಪರಿಚಯಿಸುತ್ತವೆ. ಆ ಮುಖಗಳಲ್ಲಿ ಕಲೆಯೂ ಒಂದು. ನಾಗರಿಕತೆಯ ಬೆಳವಣಿಗೆಯಲ್ಲಿ ಮೊಟ್ಟ ಮೊದಲು ಸ್ಫೋಟಗೊಂಡಿದ್ದು ದೃಶ್ಯಕಲೆ. ಚಿತ್ರಕಲೆಯು ಅಂದಿನ ಆದಿಮಾನವನ ಮೌಖಿಕ ಭಾಷೆಯಾಗಿದ್ದನ್ನು ಪ್ರಾಗಿತಿಹಾಸಕಾರರು ಗುರುತಿಸುತ್ತಾರೆ. ನಂತರದಲ್ಲಿ ಇದೇ ಕಲೆಯು ಆಚರಣೆಯಾಗಿ ಬೆಳೆದು ಪ್ರಸ್ತುತ ಕಲಾವಿದನ, ಮಾನವನ ಭಾವನೆಗಳನ್ನು ಅಭಿವ್ಯಕ್ತಪಡಿಸುವ ಮಾಧ್ಯಮವಾಗಿ ಬೆಳೆದು ನಿಂತಿದೆ.

ಕಾಲಾಂತರದಲ್ಲಿ ರಾಜಾಶ್ರಯ ಹೊಂದಿದ್ದ ಕಲಾವಿದರು ಸೀಮಿತ ಪರಿಧಿಯೊಳಗೆ ಕೃತಿ ರಚಿಸಬೇಕಾಗಿದ್ದುದು ಅನಿವಾರ್ಯವಾಗಿತ್ತು. ಕ್ಯಾಮೆರಾದ ಪ್ರವೇಶವಾದ ನಂತರ ಈ ಕಲಾವಿದರಿಗೆ ಅಂದರೆ ಅಕಾಡೆಮಿಕ್ ಶೈಲಿಯಲ್ಲಿ ಚಿತ್ರಿಸುತ್ತಿದ್ದ ಕಲಾವಿದರಿಗೆ ಪ್ರೋತ್ಸಾಹವಿಲ್ಲದಂತಾಯಿತು. ಈ ಆಕಸ್ಮಿಕ ವೈಜ್ಞಾನಿಕ ಪ್ರಗತಿಯಿಂದ ಕಲಾವಿದನ ವಿಚಾರಗಳೂ ಸಹ ಬದಲಾವಣೆಗೊಂಡವು. ಕಲಾವಿದ ಸಾಮಾನ್ಯ ವಿಷಯಗಳ ಜೊತೆಜೊತೆಗೆ ಅಗೋಚರವಾದಂತ ವಿಷಯಗಳ ಮೇಲೆ ಕೃತಿ ರಚಿಸತೊಡಗಿದ. ಇದರ ಫಲಿತಾಂಶವೇ ಅಂದಿನ ಇಂಪ್ರೆಶನಿಸಂ, ಎಕ್ಸಪ್ರೆಶನಿಸಂ, ಕ್ಯೂಬಿಸಂ, ಅಬಸ್ಟ್ರಾಕ್ಟ್ ಆರ್ಟ, ಪಾವಿಸಂ, ಪಾಯಿಂಟಾಲಿಸಂ, ದಾದಾಯಿಸಂ, ಸರಿಯಲಿಸಂ....ಇತ್ಯಾದಿ ಪಂಥಗಳ ಉಗಮ.

ಲೌಕಿಕ ಪ್ರಪಂಚದಲ್ಲಿ ನೈಸರ್ಗಿಕವಾಗಿ ಸಂಭವಿಸಲು ಸಾಧ್ಯವಿಲ್ಲದ ಕೇವಲ ಕನಸು ಹಾಗೂ ಕಲಾವಿದನ ಸುಪ್ತ ಮನಸ್ಸಿನಲ್ಲಿಯೇ ಮೈದಳೆದು, ಕುಂಚದ ಮೂಲಕ ಮಾತ್ರವೇ ಸಿಕ್ಕಂತಹ ಅವಕಾಶದಲ್ಲಿ ಮೂಡಲು ಸಾಧ್ಯವಿರುವಂತಹ, ಮನುಷ್ಯನ ವಿಕೃತ ಪ್ರಜ್ಞೆಯಲ್ಲಿ ಗರಿಷ್ಠ ಸಾಧ್ಯತೆಗಳನ್ನು ಕೃತಿಯಾಗಿಸುವುದೇ 'ಸರಿಯಾಲಿಸಂ' ಎಂದು ಕರೆದರು. ಇಂತಹ ಸರಿಯಾಲಿಸಂ ಪಂಥದ ದೊರೆಯೆಂದವು ಖ್ಯಾತನಾದ ಕಲಾವಿದ ಡಾಲಿ ಮೇ ೧೧, ೧೯೦೪ರಲ್ಲಿ ಡಾಲಿಯ ಜನನ ಸ್ಪೇನಿನ ಕ್ಯಾಟಲೋನಿಯಾದ ಫಿಗರಸ್‌ನಲ್ಲಿ ಆಯಿತು. ಬಾಲ್ಯದಲ್ಲಿಯೇ ವಯೋಮಾನದ ಸಹಜ ಕುತೂಹಲದಿಂದ ತನ್ನ ಐದನೆಯ ವಯಸ್ಸಿನಲ್ಲಿಯೇ ಡಾಲಿ ಚಿತ್ರಗಳನ್ನು ಗೀಚತೊಡಗಿದ್ದ. ಡಾಲಿಯ ಆಸಕ್ತಿ ವಿದ್ಯಾಭ್ಯಾಸದಲ್ಲಿ ಇರದೆ ಇತರೆ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಇತ್ತು. ಶಾಲೆಗೆ ಸರಿಯಾಗಿ ಹಾಜರಾಗದೇ ಅನೇಕ ಬಾರಿ ಶಾಲೆಯಿಂದ ಹೊರದದಿಸಿಕೊಂಡು ಬಂದ ಶ್ರೀಮಂತ ಮನೆತನ ಡಾಲಿಯದಾಗಿತ್ತು.

೧೯೧೪-೧೫ರ ವೇಳೆಗೆ ವಿದ್ಯಾಭ್ಯಾಸವನ್ನು ಫಿಗರಸ್‌ನಲ್ಲಿಯೇ ಮುಗಿಸಿದ ಡಾಲಿಗೆ ಆಗಲೇ ಕಲೆಯಲ್ಲಿ ಆಸಕ್ತಿ ಕೊಂಚ ಕೊಂಚವೇ ಮೂಡಿದ್ದು, ಇದೇ ಸಂದರ್ಭದಲ್ಲಿ ವರ್ಣಚಿತ್ರಕಲೆಯಲ್ಲಿ ಹಾಗೂ ಚಿತ್ರಸಂಯೋಜನೆಯಲ್ಲಿ ಆಸಕ್ತನಾಗಿ ಮೂರ್ತ ಚಿತ್ರಗಳಿಂದ ಅಮೂರ್ತ ಸೃಜನಾತ್ಮಕತೆಯತ್ತ ವಾಲತೊಡಗಿದ್ದ. ಕಲೆಯಲ್ಲಿಯೇ ಅಲ್ಲದೆ ವ್ಯಕ್ತಿತ್ವದಲ್ಲಿಯೂ ಅಸಾಮಾನ್ಯ ಲಕ್ಷಣಗಳು ಸಹ ಈ ಅವಧಿಯಲ್ಲಿಯೇ ಡಾಲಿಯಲ್ಲಿ ಗೋಚರಿಸತೊಡಗಿದ್ದು. ಡಾಲಿಯು ವರ್ಣಚಿತ್ರಕಲೆಯ ಕುರಿತು ಪಾಠಗಳನ್ನು ಅಕಾಡೆಮಿ ಆಫ್ ಆರ್ಟ್‌ನ ಪ್ರೊಫೆಸರ್ ಒಬ್ಬರ ಬಳಿ ವಿಶೇಷವಾಗಿ ಹೇಳಿಸಿಕೊಳ್ಳತೊಡಗಿದ.

ಡಾಲಿಯ ಮೊದಲ ಕೃತಿಗಳು ಹಿಂದಿನ ಸ್ಪಾನಿಷ್ ಕಲಾವಿದರಾದ ಮಾಡೆಸ್ಟೋ ಉಜ್ಜಲಾ ರಾಮೆನ್ ಪಿಚಾಟ್ ಮತ್ತು ಮರಿಯಾನೋ ಫಾರ್ಚುರಿ ಇವರ ಪ್ರಭಾವ ಆತನ ಕೃತಿಗಳಲ್ಲಿ ಕಂಡುಬರುವುದನ್ನು ಆತನೇ ಹೇಳಿಕೊಂಡಿದ್ದಾನೆ. ಆದರೆ ನಮ್ಮ ಕಲೆಯ ಇತಿಹಾಸವನ್ನರಿತ ನಂತರ ಡಾಲಿಯು ಫ್ರೆಂಚ್ ಇಂಪ್ರೆಶನಿಸ್ಟ ಹಾಗೂ ನಿಯೋ ಇಂಪ್ರೆಶನಿಸ್ಟ ಕಲಾವಿದರನ್ನು ಅನುಸರಿಸತೊಡಗಿದ್ದು ವಾಸ್ತವ ಸಂಗತಿಯಾಗಿತ್ತು. ಆ ಸಂದರ್ಭದಲ್ಲಿ ರಚಿಸಲಾದ "Aunt Ana sewing in Cadavues", "Crepurular Old man" ಕೃತಿಗಳು ಪ್ರಮುಖವಾದವುಗಳು.

೧೯೧೯ರಲ್ಲಿ ಪ್ರಪ್ರಥಮ ಬಾರಿಗೆ ಸ್ಟೇಡಿಯಂ ಎಂಬ ಪುಸ್ತಕದಲ್ಲಿ ಡಾಲಿಯ ಕುರಿತು ಹಾಗೂ ಆತನ ಕಲಾಕೃತಿಗಳನ್ನು ಕುರಿತು ಫಿಗರಸ್‌ನಲ್ಲಿ ಪ್ರಕಟಗೊಂಡಿತು. ಆ ಸಮಯದಲ್ಲಿ ಕೆಲವೆಡೆ ಪಾಪ್ ಆರ್ಟ್ ಪ್ರಚಲಿತಗೊಂಡಿದ್ದು ಡಾಲಿಯ ಮೇಲೂ ಅದರ ಪ್ರಭಾವ ಬೀರತೊಡಗಿತ್ತು. ಆದರೆ ಡಾಲಿಯ ವ್ಯಕ್ತಿತ್ವ ಯಾವಾಗಲೂ ಅಮೂರ್ತ ಕಲೆ ಹಾಗೂ ಬರವಣಿಗೆಯ ಮೇಲೆ ಆಸಕ್ತಿ ತೋರಿಸುತ್ತಿದ್ದರಿಂದ ಡಾಲಿಗೆ ತನ್ನದೇ ಆದಂತಹ ಶೈಲಿಯನ್ನು ಕಂಡುಹಿಡಿಯಲು ಸಾಧ್ಯವಾಯಿತು.

೧೯೨೦-೨೧ರಲ್ಲಿ ಡಾಲಿಯು ಮ್ಯಾಡ್ರಿಡ್‌ನ ಫೈನ್ ಆರ್ಟ್ ಕಲಾಶಾಲೆಗೆ ಪ್ರವೇಶ ಪಡೆದು ಆ ಶಾಲೆಯ ಶಿಕ್ಷಣವನ್ನು ಶ್ರದ್ಧೆ ಹಾಗೂ ನಿಷ್ಠೆಯಿಂದ ಕಲಿಯತೊಡಗುತ್ತಾನೆ. ಅದರಲ್ಲೂ ನಿಜಾನ್ ಹಾಗೂ ಕೆಲಿ ಇಟಾಲಿಯನ್ ಕಲಾವಿದರಂತಹ ಕೃತಿಗಳ ಪ್ರಭಾವ ಇವನ ಮೇಲಾಗಿ ಈತನ ಕೃತಿಯಲ್ಲೂ ಅವರ ಬಿಂಬ ಕಾಣುತ್ತದೆ. ಈ ಅವಧಿಯಲ್ಲಿ ಡಾಲಿಯು ತನ್ನ ಸ್ವಭಾವ ಚಿತ್ರವನ್ನು, ತಂದೆಯ ಭಾವಚಿತ್ರವನ್ನು ಮುಂತಾದವುಗಳನ್ನು ಚಿತ್ರಿಸುತ್ತಾನೆ.

ಫಿಗರಸ್‌ನಿಂದ ೨೮ ಕಿ.ಮೀ. ದೂರದಲ್ಲಿದ್ದ ತನ್ನ ತಂದೆಯ ಜನ್ಮಸ್ಥಳವಾದ ಕ್ಯಾಡಕ್ಯೂಸ್‌ನಲ್ಲಿ ಬಹು ಸಮಯವನ್ನು ಕಳೆಯುತ್ತಿರುತ್ತಾನೆ. ಮೊದಲಿನಿಂದಲೂ ಆ ಹಳ್ಳಿ ಮನೆಯನ್ನೇ ಸ್ಟುಡಿಯೋ ಮಾಡಿಕೊಂಡು ಅಲ್ಲಿಯೇ Still Life with fruit, Self portratit with neck of Raphal, The fruitdays of spring ಎಂಬ ಕಲಾಕೃತಿಗಳನ್ನು ನಿರ್ಮಿಸಿದನು. ಈ ಸಮಯದಲ್ಲಿ ಡಾಲಿಗೆ ಮೂವರು ಸರಿಯಾಲಿಸಂ ಕಲಾವಿದರ ಪರಿಚಯವಾಗುತ್ತದೆ. ಅವರೇ ಫ್ರಾನ್ಸಿಸ್ ಪಿಛಾಬಿಯಾ, ಮ್ಯಾಕ್ಸ್ ಏರ್ನೆಸ್ಟ್, ಮಾನ್‌ರೇ.

೧೯೨೬ರಲ್ಲಿ ತನ್ನ ವಿಪರೀತ ವರ್ತನೆಯಿಂದ ಹಾಗೂ ಕಲಾ ಅಕಾಡೆಮಿಯ ಆಡಳಿತಾಧಿಕಾರಿಗಳ ಕೆಲ ದ್ವೇಷದಿಂದಾಗಿ ಡಾಲಿಯು ಅಕಾಡೆಮಿಯಿಂದ ಹೊರಹಾಕಲ್ಪಡುತ್ತಾನೆ. ತನ್ನ ವಿಚಿತ್ರ ವರ್ತನೆ, ರೀತಿ ಹಾಗು ಕೆಲ ರಾಜಕೀಯ ಅಂಶಗಳಿಂದಲೂ ಕೂಡ ಕೆಲ ಅವಧಿ ಡಾಲಿಯು ಜೈಲಿನಲ್ಲಿ ಉಳಿಯುವ ಪ್ರಸಂಗ ಬರುತ್ತದೆ. ಎರಡು ವರ್ಷಗಳ ನಂತರ ಅಕಾಡೆಮಿಗೆ ಪುನಃ ಪ್ರವೇಶ ಮಾಡಿ ಶ್ರದ್ಧೆಯಿಂದ ಕಲಾಭ್ಯಾಸ ಮಾಡಿ ೧೯೨೭ ನವೆಂಬರ್‌ನಲ್ಲಿ ಪ್ರಥಮ ಬಾರಿಗೆ ಏಕವ್ಯಕ್ತಿ ಪ್ರದರ್ಶನವನ್ನು ಬರ್ಸಿಲೀನದಲ್ಲಿ ಮಾಡಿದನು. ಈ ವೇಳೆಗಾಗಲೇ ಡಾಲಿಯು ಕಲಾವಲಯದಲ್ಲಿ ಸ್ವಲ್ಪಮಟ್ಟಿಗೆ ತನ್ನನ್ನು ಗುರುತಿಸಿಕೊಂಡಿದ್ದ. ಬಾರ್ಸಿಲೋನಾದ ಪ್ರದರ್ಶನವನ್ನು ನೋಡಿದ್ದ ಖ್ಯಾತ ಕಲಾವಿದ ಪಿಕಾಸೋ ಡಾಲಿಯ ಕೃತಿಗಳನ್ನು ಮೆಚ್ಚಿಕೊಂಡಿದ್ದ. ಈ ಅವಧಿಯಲ್ಲಿ ಮೂಡಿದ ಡಾಲಿಯ ಒಂದು ಕಲಾಕೃತಿ "Girl seen from behing" ಎಂಬುದು. ಈ ಕಲಾಕೃತಿ ನಿರ್ಮಾಣದಲ್ಲಿರುವಾಗ ಡಾಲಿಯು ಆ ಹುಡುಗಿಯ ಹಿಂಬದಿಯನ್ನು ಚಿತ್ರಿಸುವಾಗ ಆತನಿಗೆ ಒಂದು ರೀತಿಯ ಭಯಾನಕ ಅನುಭವವಾಯಿತೆಂದು ಹೇಳಿದ್ದಾನೆ.

ಈ ಸಮಯದಲ್ಲಾಗಲೇ ಸರಿಯಾಲಿಸಂ ಪಂಥಕ್ಕೆ ಜಾರುತ್ತಿದ್ದ ಡಾಲಿಯ ಮನಸ್ಸು ಅದೇ ಸಂದರ್ಭಕ್ಕೆ ಪ್ರಥಮ ಬಾರಿಗೆ ಒಂದು ಸರಿಯಾಲಿಸಂ ಪಂಥದ ಪ್ರದರ್ಶನವೊಂದು ನಡೆದು ಈತನು ಈ ಪಂಥದಲ್ಲಿ ಐಕ್ಯವಾಗಲು ಕಾರಣವಾಯಿತು. ಪ್ಯಾರಿಸ್‌ನಲ್ಲಿ ನಡೆದ ಈ ಸರಿಯಾಲಿಸಂ ಪಂಥದ ಪ್ರದರ್ಶನದಲ್ಲಿ ಆರ್ಪ, ಡಿಜಿರಿಗೋ, ಎರ್ನೆಸ್ಟೋ, ಮೈರೋ, ರೆಬ್ರೆಟನ್ ಮತ್ತು ರಾಬರ್ಟ್ ಡೆಸ್‌ನೋಸ್ ಮುಂತಾದ ಕಲಾವಿದರಿದ್ದರು. ಫ್ರೆಂಚ್ ಮತ್ತು ಸ್ಪಾನಿಷ್ ಸರಿಯಾಲಿಸ್ಟ್ ಕಲಾವಿದರಿಂದ ಒಂದು ಚಳುವಳಿಯೇ ನಡೆದು ಸರಿಯಾಲಿಸಂ ಪಂಥವು ಅತಿ ಉಗ್ರವಾದ ಛಾಪನ್ನು ಮೂಡಿಸಿದ್ದರಲ್ಲಿ ಡಾಲಿಯು ಒಂದು ನಿರ್ದಿಷ್ಟ ಶೈಲಿಯನ್ನು ಅಪ್ಪಲು ಕಾರಣವಾಯಿತು.

ಡಾಲಿಯು ಬಾಲಕನಿದ್ದಾಗಲೇ ಒಬ್ಬ ಅಸಾಮಾನ್ಯ ವಿಚಿತ್ರ ವರ್ತನೆಯ ವ್ಯಕ್ತಿತ್ವ ಉಳ್ಳವನಾಗಿದ್ದು ಒಂದು ರಿ ಯ ಮಾನಸಿಕ ರೋಗಿಯಾಗಿದ್ದನು. ಆದರೆ ಅದು ಆತನನ್ನು ಕೀಳಿರಿಮೆಯಿಂದ ಎಂದೂ ಕುಗ್ಗಿಸಲಿಲ್ಲ. ಬದಲಿಗೆ ಡಾಲಿಗೆ ತಾನು ಉತ್ಕೃಷ್ಟ ಮನಸ್ಕನಾಗಿ ತಯಾರಾಗಲು ಕಾರಣವಾಯಿತು. ಕಾಲಾನಂತರದಲ್ಲಿ ಡಾಲಿಯು ತನ್ನ ನಡೆ ನುಡಿ, ವೇಷಭೂಷಣಗಳಲ್ಲದೆ ಕೃತಿಗಳ ಮೂಲಕವೂ ಜನರನ್ನು ಆಕರ್ಷಿತರನ್ನಾಗಿ ಮಾಡತೊಡಗಿದ. ಒಟ್ಟಾರೆ ಒಂದು ಗುಂಪಲ್ಲಿ ಡಾಲಿಯು ತಾನಿದ್ದರೆ ಎಲ್ಲರಿಗಿಂತ ಭಿನ್ನವಾಗಿ ನಿಲ್ಲಬೇಕೆಂಬ ನಿಲುವು ಅವನದಾಗಿತ್ತು. ಹಾಗೆಯೇ ನಡೆದುಕೊಳ್ಳುತ್ತಿದ್ದ ಕೂಡ. ಉದಾಹರಣೆಗೆ ಆತನ ಮೀಸೆಯ ಶೈಲಿ. ಮೀಸೆಯ ತುದಿಯನ್ನು ಹುರಿಗೊಳಿಸಿ ಚೂಪಾಗಿಸಿ ಯಾವಾಗಲೂ ಆಕಾಶಕ್ಕೆ ಮುಖ ಮಾಡಿ ನಿಲ್ಲಿಸುತ್ತಿದ್ದ. ಅಲ್ಲದೆ ಈತ ಹಲವು ವ್ಯಕ್ತಿಗಳಿಗೆ ಮಾದರಿಯಾಗಿದ್ದ. ಒಬ್ಬ ಪಾಶ್ಚಾತ್ಯ ಕವಿಯು ಡಾಲಿಯ ಕುರಿತು ಒಂದು

ಕವನವನ್ನೇ ರಚಿಸಿದ್ದ ಎಂದರೆ ಈ ಮೂಲಕ ನಮಗೆ ತಿಳಿಯುವುದೇನೆಂದರೆ ಡಾಲಿಯು ತನ್ನ ವಿಚಿತ್ರ ವರ್ತನೆಯಿಂದಲೇ ಸಾಕಷ್ಟು ಅಭಿಮಾನಿಗಳನ್ನು ಹುಟ್ಟು ಹಾಕಿದ್ದ ಎಂದು.

ಕಳೆದ ಶತಮಾನದ ಸ್ಪಾನಿಷ್‌ನ ಇಬ್ಬರು ಪ್ರಸಿದ್ಧ ಕಲಾವಿದರೆಂದರೆ ಪಿಕಾಸೋ ಹಾಗೂ ಡಾಲಿ. ಇಬ್ಬರೂ ಒಬ್ಬರಿಗೊಬ್ಬರು ಕೃತಿಗಳನ್ನು ಮೆಚ್ಚಿಕೊಂಡರೂ ಎಂದೂ ಸ್ನೇಹಿತರಾಗಿರಲಿಲ್ಲ. ಕಾರಣ ಈ ಜಗದ್ ವಿಖ್ಯಾತ ಕಲಾವಿದರಿಬ್ಬರೂ ಕಲಾಜಗತ್ತಿನಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದರು. ತಮ್ಮ ತಮ್ಮ ಮಾಧ್ಯಮದಲ್ಲಿ ಶೈಲಿಯಲ್ಲಿ ಇಬ್ಬರೂ ಅಗ್ರಗಣ್ಯರಾಗಿದ್ದುದು ಕಾರಣವಿದ್ದಿರಬಹುದು.

ಸೃಜನಶೀಲತೆ ಇಬ್ಬರಲ್ಲೂ ಇದ್ದರೂ ಅಭಿವ್ಯಕ್ತಿಯಲ್ಲಿ ಭಿನ್ನತೆಯಿತ್ತು. ಪಿಕಾಸೋ ಕ್ಯೂಬಿಸಂ ಹಾಗೂ ಇತರೆ ಕೆಲವು ಪಂಥಗಳಲ್ಲಿ ಪ್ರಸಿದ್ಧಿ ಪಡೆದರೆ ಡಾಲಿಯು ಸರಿಯಾಲಿಸಂ ಪಂಥವನ್ನಷ್ಟೆ ತನ್ನದಾಗಿಸಿಕೊಂಡ. ಈತನ ಕೃತಿಗಳಲ್ಲಿ ಸಾಮಾನ್ಯವಾಗಿ ಮಾತ್ರ ಕಾಣಲು ಸಾಧ್ಯವಾಗುತ್ತದೆ. ಯಾವಾಗಲೋ ಅಂದುಕೊಂಡ, ಕನಸಿನಲ್ಲಿ ಗೋಚರಿಸಿದ, ಕ್ಷಣ ಮಾತ್ರದಲ್ಲಿ ಮಿಂಚಿ ಮರೆಯಾದ ಕೆಲ ಕಲ್ಪನೆಗಳನ್ನು ಡಾಲಿಯು ಬಣ್ಣಗಳ ಸಹಾಯದಿಂದ ಸಮತೋಲನಗೊಳಿಸಿರುವುದು ಕಂಡುಬರುತ್ತದೆ.

ಡಾಲಿಯ ಪ್ರಮುಖ ಕಲಾಕೃತಿಗಳಲ್ಲೊಂದರ ಪೈಕಿ "The persistence of the memory" ಯಲ್ಲಿ ಗಡಿಯಾರಗಳು ಮೇಣದ ಹಾಗೆ ಕರಗಿ ಬೀಳುತ್ತಿರುವ ದೃಶ್ಯವಿದೆ. ಮರದ ಒಂದು ಬೊಡ್ಡೆಯ ಕೊಂಬೆಯಲ್ಲಿ ಗಡಿಯಾರ ಒಂದು ನೇತಾಡುತ್ತಿದ್ದು, ದೂರದಲ್ಲಿ ಸಮುದ್ರದ ದೃಶ್ಯವಿದೆ. ಮುಂದಿರುವ ಒಂದು ಗಡಿಯಾರಕ್ಕೆ ಹುಳಗಳು ಮುತ್ತಿರುವ ದೃಶ್ಯ ಕಂಡು ಬರುತ್ತದೆ. ಈ ಕೃತಿಯಲ್ಲಿ ಕಲಾವಿದನಲ್ಲಿರುವ ಬಣ್ಣಗಳ ಮೇಲಿನ ಹಿಡಿತ, ವಸ್ತು ಸಂಯೋಜನೆ, ಜೊತೆಗೆ ಕಲಾವಿದನ ಪ್ರತಿಭೆಗೆ ಕನ್ನಡಿಯಾಗಿದೆ. ಮೈರೋ ಎಂಬ ಕಲಾವಿದನ ಆಹ್ವಾನದ ಮೇರೆಗೆ ೧೯೨೮ರಲ್ಲಿ ಪ್ಯಾರಿಸ್‌ಗೆ ತೆರಳಿದ ಡಾಲಿಯು ಮೈರೋನ ಮೂಲಕ ಹಲವು ಸರಿಯಾಲಿಸ್ಟ್ ಕಲಾವಿದರಾದ ಬ್ರೆಟನ್ ಮತ್ತು ಪಾಲ್ ಎಲೂರ್ಡರನ್ನು ಭೇಟಿ ಮಾಡುತ್ತಾನೆ.

ಪ್ಯಾರಿಸ್‌ಗೆ ತೆರಳಿದ ಡಾಲಿಯು ಅಲ್ಲಿ ಸರಿಯಾಲಿಸಂನ ಅನೇಕ ತಂತ್ರಗಳನ್ನು ಕಲಿಯ ಬಂದ. ಇದೇ ವರ್ಷದಲ್ಲಿ ಆವನ ಮೂರು ಕಲಾಕೃತಿಗಳು ಅಂತರಾಷ್ಟ್ರೀಯ ಮಟ್ಟದ ಪ್ರದರ್ಶನವು ಪೀಟರ್ಸ್‌ಬರ್ಗ್‌ನ ಕಾರ್ನಿಗ್ ಇನ್ಸ್ಟಿಟ್ಯೂಟ್‌ನಲ್ಲಿ ನೆರವೇರಿತು. ಈ ಪ್ರದರ್ಶನದ ದ ಡಾಲಿಯ ಬೇಡಿಕೆ, ಹೆಸರು ಜೊತೆಗೆ ಸ್ವತಃ ಆತನಿಗೆ ಆತ್ಮವಿಶ್ವಾಸ ಹೆಚ್ಚಿತು. ೧೯೨೮ನೆಯ ಇಸವಿಯ ಕೊನೆಯಲ್ಲಿ ಡಾಲಿ ಹಾಗೂ ಆತನ ಸ್ನೇಹಿತ ಲೂಯಿಸ್ ಬ್ಯೂನೆಲ್ ಇಬ್ಬರೂ ಸೇರಿ ಒಂದು ಅದ್ಭುತ ಸಿನಿಮಾ ಮಾಡಿದರು. ಇದರಿಂದ ಡಾಲಿಯ ಬಹುಮುಖ ಪ್ರತಿಭೆಯು ಹೊರಜಗತ್ತಿಗೆ ಗೊತ್ತಾಯಿತು.

೧೯೨೯ನೇ ಇಸವಿಯು ಡಾಲಿಯು ಜೀವನದಲ್ಲಿ ಅತ್ಯಂತ ಮಹತ್ವದ ವರ್ಷ. ಡಾಲಿಯ ಜೀವನ ಸಂಗಾತಿಯಾದ ಗಾಲಾ ಆತನ ಮನ-ಮನೆ ಹೊಕ್ಕು ಆತನ ಬದುಕಿಗೆ ಹಾಗೂ ಬಣ್ಣಕ್ಕೆ ಎರಡರಲ್ಲೂ ಸ್ಫೂರ್ತಿಯಾದವಳು. ಮೊದಲ ನೋಟದಲ್ಲಿಯೇ ಅಂಕುರಿಸಿದ ಪ್ರೇಮ ಇಬ್ಬರನ್ನು ಬಳಿಗೆ ಸೇರಿಸಿತು. ನಂತರ ಮದುವೆಯ ಬಳಿಕ ಆತನ ಕಲಾಕೃತಿಗಳಿಗೆ ರೂಪದರ್ಶಿಯಾಗಿ ಆತನಿಗೆ ಸ್ಫೂರ್ತಿಯ ಚಿಲುಮೆಯಾಗಿದ್ದಳು. ಡಾಲಿಯೇ ಹೇಳುವಂತೆ ಗಾಲಾ ಆತನ ಜೀವನ ಪ್ರವೇಶಿಸದಿದ್ದರೆ ಬಹುಶಃ ಆತ ಹುಚ್ಚನೇ ಆಗುತ್ತಿದ್ದನೆಂದು ಬಹಳಷ್ಟು ಕಡೆ ಹೇಳಿದ್ದಾನೆ. ಡಾಲಿಯ ಅತಿರೇಕಗಳನ್ನು,

ಹುಚ್ಚಾಟಗಳನ್ನು ಹಿಡಿತದಲ್ಲಿರಿಸಿದ ಆ ಹುಚ್ಚಾಟ ಅತಿರೇಕ ಎನಿಸುವ ವರ್ತನೆಯನ್ನು ಕಲಾಕೃತಿಯಾಗಿ ಮಾಡಲು ಕಾರಣ ಗಾಲಾ. ಗಾಲಾ ಅವನಿಗೆ ಜೀವನ ಸಂಗಾತಿಯಷ್ಟೆ ಅಲ್ಲದೆ ಅತನನ್ನು ಸಂದರ್ಭಕ್ಕೆ ತಕ್ಕ ಹಾಗೆ ಕೈಹಿಡಿದು ನಡೆಸಿದ ತಾಯಿ, ಹಾಗೂ ಅವನನ್ನು ಶ್ರೀಮಂತ ಕಲಾವಿದನನ್ನಾಗಿ ಮಾಡಿದ ತಂದೆಯೂ ಸಹ ಆಗಿದ್ದಳು. ಇವಳ ಮಾನಸಿಕ ಸಹಕಾರದಿಂದ ಡಾಲಿಯು ಇಂದು ಕಲಾಜಗತ್ತಿನಲ್ಲಿ ತನ್ನದೆ ಆದ ಸ್ಥಾನ ಪಡೆದುಕೊಂಡಿದ್ದಾನೆ ಎಂದರೆ ಸುಳ್ಳಾಗಲಾರದು. "Behind every successfull man there will be woman" ಎನ್ನುವುದು ಡಾಲಿಯ ಜೀವನದಲ್ಲಿ ಸತ್ಯವಾದ ಮಾತಾಗಿತ್ತು ಹಾಗೂ ಅದನ್ನೇ ನಂಬಿದವನು ಸಹ ಡಾಲಿ.

ಗಾಲಾಳ ಬಗ್ಗೆ ಡಾಲಿಯೇ ಹೇಳುವಂತೆ ಗಾಲಾ ಒಬ್ಬ ಅದ್ಭುತ ಮಹಿಳೆ, ಕತ್ತಲಲ್ಲಿನ ಮಹಿಳೆ ಎಂದಿದ್ದಾನೆ. ಗಾಲಾ ಆತನ ಪತ್ನಿಯಾಗಿರದೇ ಆತನ ವ್ಯವಹಾರವನ್ನು ಅಂದರೆ ಸರಿಯಾಲಿಸ್ಟ್ ಪಂಥದಲ್ಲಿ ಆತನ ವ್ಯವಹಾರ ಎಷ್ಟು ಪ್ರಮಾಣದಿಂದಿರಬೇಕು. ಯಾರೊಡನೆ ವ್ಯವಹರಿಸಬೇಕು. ಯಾರೊಂದಿಗೆ ಸಂಪರ್ಕ ಇರಬೇಕು. ಎಂಬುದನ್ನು ಗಾಲಾಳೆ ನಿರ್ಧರಿಸುತ್ತಿದ್ದಳು. ಡಾಲಿಯ ಕೆಲವೊಂದು ಪ್ರಬಂಧ ಹಾಗೂ ಕವನಗಳನ್ನು ಪ್ರಕಟಣೆ ಮಾಡಿ ಅದನ್ನು ಗಾಲಾಳಿಗಾಗಿಯೇ ಅರ್ಪಿಸಿದ್ದುದು ಆಕೆಯ ಮೇಲಿನ ಪ್ರೀತಿಯನ್ನು ಎತ್ತಿ ತೋರಿಸುತ್ತದೆ. ತಮ್ಮಿಬ್ಬರಿಗಾಗಿ ಕ್ಯಾಡಕೂಸ ಹತ್ತಿರದ ಫೋರ್ಟ್ಲಿಗಾರ್ಟನಲ್ಲಿ ಒಂದು ಮನೆಯನ್ನು ಕೊಂಡು ಅಲ್ಲಿಯೇ ವಾಸಿಸತೊಡಗಿದರು. ನಂತರದಲ್ಲಿ ಡಾಲಿಯು ಸಾಕಷ್ಟು ಕೃತಿಗಳನ್ನು ರಚಿಸಿದ್ದು, ಅವುಗಳನ್ನು ಅನೇಕ ಕಡೆ ಹಾರ್ಡ್‌ಫೋರ್ಡ್, ನ್ಯೂಯಾರ್ಕ್, ಪ್ಯಾರಿಸ್ ಮುಂತಾದ ದೊಡ್ಡ ದೊಡ್ಡ ನಗರಗಳಲ್ಲಿ ಪ್ರದರ್ಶನಗಳನ್ನು ಮಾಡಿ ಅನೇಕ ಜನಮನ್ನಣೆ ಪಡೆದಿದ್ದನು. ನಡುವಲ್ಲೇ ನಾಟಕ ಕ್ಷೇತ್ರದಲ್ಲೂ ಸಾಕಷ್ಟು ವ್ಯವಸಾಯ ಮಾಡಿ ಅದರಲ್ಲಿ ಯಶಸ್ವಿಯಾಗಿದ್ದನು. ಕಲಾವಿದ ಕೇವಲ ಕಲಾಕೃತಿಗಳನ್ನು ರಚಿಸುವುದಲ್ಲದೆ ವಿವಿಧ ರಂಗಗಳಲ್ಲಿ ತೊಡಗಿಸಬಹುದು ಎಂಬುದನ್ನು ಪ್ರತ್ಯಕ್ಷ ತೋರಿಸಿದವನೆಂದರೆ ಈ ಡಾಲಿಯೇ.

೧೯೫೫ರಲ್ಲಿ ಪುನಃ ಪ್ರಸಿದ್ಧ ಕಲಾವಿದರ ಕೃತಿಗಳನ್ನು ಮರುಕೃತಿ ಮಾಡತೊಡಗಿದ. ಅದರಲ್ಲೂ ವರ್ಮಿರನ್ ಕೃತಿಗಳನ್ನು ಸಾಕಷ್ಟು ಮರುಕೃತಿ ಮಾಡಿದ್ದಾನೆ. ಅಲ್ಲದೆ "My cultural revolution" ಎಂಬ ಪುಸ್ತಕವನ್ನು ಸಹ ಬರೆದನು. ಅನೇಕ ಕಡೆ ಸೀಲಿಂಗ್ ಪ್ರಿಂಟಿಂಗ್‌ಗಳನ್ನು ಸಹ ಮಾಡಿದ್ದು ಅವುಗಳು ನೋಡುಗರಿಗೆ ವಿಶಿಷ್ಟ ಅನುಭವವನ್ನು ಕೊಡುವಂತಹವಾಗಿವೆ. ರೋಲೋಗ್ರಾಫಿ ಯಲ್ಲಿಯೂ ಸಹ ಕೃತಿ ನಿರ್ಮಾಣ ಮಾಡಿದ್ದು ಸೃಜನಶೀಲತೆಗೆ ಹೆಸರಾಗಿದ್ದನಾಗಿದ್ದನು. ಈತನ ಪ್ರತಿಭೆಗೆ ತಕ್ಕಂತೆ ಈ ಅನೇಕ ಕಲಾಕೃತಿಗಳು ಕೋಟ್ಯಾಂತರ ರೂಪಾಯಿಗಳಿಗೆ ಮಾರಾಟವಾಗಿದ್ದು ಕಲಾವಿದನಾಗಿಯೂ ಶ್ರೀಮಂತವಾಗಿ ಬದುಕಿದ ಕಥೆ ಡಾಲಿಯದಾಗಿದೆ.

೧೯೮೦ ಸುಮಾರಿಗೆ ಡಾಲಿಯ ಬಗ್ಗೆ ಅನೇಕ ಗಾಸಿಪ್‌ಗಳು ಕಾಣಿಸಿಕೊಂಡಿದ್ದು ಆತ ಮಾನಸಿಕ ತೊಂದರೆಯಿಂದಾಗಿ ಆಸ್ಪತ್ರೆಗೆ ಸೇರಿದ್ದಾಗಿ ಸಾರಿದ್ದವು. ಈ ಅವಧಿಯಲ್ಲಿಯೇ ಅವನಿಗೆ ಖಿನ್ನತೆ ಕಾಡಿತೆಂದು ಹೇಳಲಾಗಿದೆ. ಖಿನ್ನತೆಯ ತೀವ್ರತೆಗೆ ಡಾಲಿ "ನಾನು ಬಸವನ ಹುಳು, ವೇಗವಿಲ್ಲದವನು" ಎಂದು ಹೇಳಿಕೊಂಡಿದ್ದ. ಎಷ್ಟೇ ಅದುಮಿಟ್ಟರೂ ಮಾನಸಿಕ ಸ್ಥೀಮಿತ ಕೆಲವೊಮ್ಮೆ ಸೋತು ಈ ರೀತಿಯಾಗಿ ಕೆಲವೊಮ್ಮೆ ಸ್ಫೋಟಗೊಂಡಿದ್ದುಂಟು. ೧೯೮೨ರಲ್ಲಿ ಗಾಲಾ ಸತ್ತಾಗ ಸ್ವತಃ ಡಾಲಿಯೇ ಉಡುಗೋರೆಯಾಗಿ ನೀಡಿದಂತಹ ಶವಪೆಟ್ಟಿಗೆಯಲ್ಲಿ ಆಕೆಯನ್ನು ಮಲಗಿಸಲಾಗಿತ್ತು. ಈ ಸಮಯದಲ್ಲಿ ಮಾನಸಿಕವಾಗಿ ಡಾಲಿ ಕುಗ್ಗಿದ್ದು ನಿಜ. ಆದರೆ ಕೆಲಕಾಲದ ನಂತರ ಡಾಲಿ ಮತ್ತೆ ಕೃತಿ ನಿರ್ವಹಣೆಗೆ ತೊಡಗಿ ಹಲವಾರು ಕೆಲಸಗಳನ್ನು ಮಾಡಿದನು. ಒಂದು ಪರ್‌ಫ್ಯೂಮ್

ಕಂಪನಿಗೆ ಬಾಟಲ್ ಡಿಸೈನ್ ಸಹ ಮಾಡಿಕೊಟ್ಟಿದ್ದನು. ಇದರಿಂದ ಡಾಲಿಗೆ ಹೇರಳ ಹಣ ದೊರೆತಿತ್ತು. ಅಲ್ಲದೆ ತನ್ನ ೧೯೧೪-೮೩ರವರೆಗಿನ ಜೀವಿತಾವಧಿಯಲ್ಲಿ ರಚಿಸಿದ ಸುಮಾರು ೪೦೦ರಷ್ಟು ಕಲಾಕೃತಿಗಳನ್ನು ಎರಡು ಪ್ರದರ್ಶನಗಳಲ್ಲಿ ಪ್ರದರ್ಶಿಸಿದನು. ಪ್ರದರ್ಶನಗಳು ಬಾರ್ಸಿಲೋನ್ ಹಾಗೂ ಮ್ಯಾಡ್ರಿನ್‌ಗಳಲ್ಲಿ ನಡೆದವು. ಡಾಲಿ ಒಬ್ಬ ಶ್ರೀಮಂತ ಕಲಾವಿದನಾಗಿದ್ದು ವರ್ಣಕಲಾಕೃತಿಗಳನ್ನಲ್ಲದೇ ಶಿಲ್ಪ ಕಲಾಕೃತಿಗಳನ್ನು ಮಾಡಿದ್ದನು. ಶಿಲ್ಪಕ್ಕೆ ಅವನು ಉಪಯೋಗಿಸುತ್ತಿದ್ದ ಮಾಧ್ಯಮ ಚಿನ್ನ ಹಾಗೂ ಬೆಳ್ಳಿ.

೧೯೮೪ರಲ್ಲಿ ನಡೆದ ಒಂದು ಬೆಂಕಿದುರಂತದಲ್ಲಿ ಆತನ ಬೆಡ್‌ರೂಮ್ ಸುಟ್ಟುಹೋಗಿದ್ದು, ಆತನನ್ನು ಬಾರ್ಸಿಲೋನಾದ ಪಿಲಾರ್ ಆಸ್ಪತ್ರೆಗೆ ಸೇರಿಸಿದಾಗ ಆತನಿಗೆ ಅನೇಕ ಕಾಯಿಲೆಗಳು ಇದ್ದವೆಂದು ತಿಳಿಯುತ್ತದೆ. ಬಹುಕಾಲ ಆಸ್ಪತ್ರೆಯಲ್ಲಿ ಡಾಲಿಯನ್ನು ಇರಿಸಿದ್ದು ಆತನನ್ನು ಅವನ ಸಂಬಂಧಿಕರು ಹೊರಗಿನ  ಪ್ರಪಂಚದಿಂದ ದೂರವಿಟ್ಟಿದ್ದರು. ನಂತರದ ಎರಡು ವರ್ಷಗಳ ಅವಧಿಯಲ್ಲಿ ಡಾಲಿಯು ಏಕಾಂಗಿಯಾಗಿದ್ದ. ಆದರೆ ಆತನ ಕಲಾಕೃತಿಗಳಿಗೆ ಮಾತ್ರ ಬೇಡಿಕೆ ಹೆಚ್ಚುತ್ತಲೇ ಇತ್ತು. ಇದೇ ಸಂದರ್ಭದಲ್ಲಿ ಜಪಾನಿನ ಒಬ್ಬ ಖರೀದಿಗಾರ ಡಾಲಿಯ "ಗಾಲಾ ಲುಕ್ಕಿಂಗ್ ಔಟ್ ತೊ ಸೀ" ಎಂಬ ಕೃತಿಯನ್ನುದಾಖಲೆ ಮೊತ್ತಕ್ಕೆ ಅಂದರೆ  ೨,೩೦೦,೦೦೦ಕ್ಕೆ ಖರೀದಿಸಿದ.

೧೯೮೮ಕ್ಕೆ ಡಾಲಿಗೆ ಮಾರುಕಟ್ಟೆಯಲ್ಲಿ ಬೇಡಿಕೆಯುಂಟಾಗಿ ಆತನ ಕಲಾಕೃತಿಗಳ ಪ್ರದರ್ಶನಗಳು ಮಾಸ್ಕೋದಲ್ಲಿ ನಡೆಯಿತು. ಇಂಡೋನೇಷಿಯಾಲ್ಲಿ ಡಾಲಿಯು ಕಾರ್ಡಿಕ್ ತೊಂದರೆಯಿಂದ ಫಿಗರಸ್‌ನ ಆಸ್ಪತ್ರೆಗೆ ಸೇರಿಸಿದರೂ ಚೇತರಿಸಿಕೊಳ್ಳದ, ನವೆಂಬರ್ ೧೦ರಂದು ಬಾರ್ಸಿಲೋನಾದ ಸೆಂಟ್ರಲ್ ಆಸ್ಪತ್ರೆಯಲ್ಲಿ ತೀವ್ರ ನಿಗಾಘಟಕದಲ್ಲಿ ಇಡಲಾಯಿತು. ಆದರೆ ಡಾಲಿಯು ೧೯೮೯ರ ಜೂನ್ ೨೩ ಸೋಮವಾರ ಇಹಲೋಕವನ್ನು ತ್ಯಜಿಸಿದನು.

ಕೇವಲ ಕನಸು ಕಲ್ಪನೆಗಳನ್ನೇ ಕೃತಿಗಳನ್ನಾಗಿಸಿದ ಕಲಾವಿದ ಅಂದು ಇಲ್ಲವಾದ. ಆತನ ನೆನಪು ಇರುವು ಶಾಶ್ವತ ಎನ್ನುವಂತೆ ಆತನ ಕಲಾಕೃತಿಗಳು ಆತನನ್ನು ಜೀವಂತವಾಗಿರಿಸಿವೆ. ಕೃತಿಗಳಲ್ಲಿ, ಜೀವನದಲ್ಲಿ ತನ್ನ ನಡೆಶೈಲಿಯಲ್ಲಿ, ವಿಭಿನ್ನತೆಯಿಂದ ರಾಜನಾಗಿ ಮೆರೆದ ಡಾಲಿಯು ಇಂದಿಗೂ ಕಲಾವಲಯದಲ್ಲಿ ಚಿರಪರಿಚಿತ.

ಈತನ ಕೆಲ ಕಲಾಕೃತಿಗಳೆಂದರೆ Protrait of Gala, The battle of Tetvan, The Chirist of Elvallers, Portrait of dead Brother, The battle of Tetvan, Gala made seen from behind, The dream of  venus, Angels of Gala, Old age of william tell ಮುಂತಾದ ನೂರಾರು ಜನಪ್ರಿಯ ಕಲಾಕೃತಿಗಳು ನಮಗೆ ನೋಡಲು ಸಿಗುತ್ತವೆ. ಈತನಿಗೆ ಗೌರವಪೂರ್ವಕವಾಗಿ ಈತನ ಕಲಾಕೃತಿಗಳು ಜಗತ್ತಿನ ಹತ್ತು ಹಲವು ಪ್ರಖ್ಯಾತ ಗ್ಯಾಲರಿಯಲ್ಲಿ ಶೇಖರಣೆಗೊಂಡಿವೆ. ವ್ಯಕ್ತಿತ್ವದಲ್ಲಿ ಏನೇ ವಿಭಿನ್ನತೆಯಿದ್ದರೂ ಈ ಕಲಾಜಗತ್ತಿನಲ್ಲಿ ತನ್ನನ್ನು ಹಾಗೂ ತನ್ನ ಕಲಾಕೃತಿಗಳನ್ನು ಜೀವಂತವಾಗಿರಿಸಿಕೊಂಡ ಖ್ಯಾತಿಯನ್ನು ನಾವು ಡಾಲಿಗೆ ಅರ್ಪಿಸಬೇಕು.

□

---

ಪೂರ್ಣಿಮಾದೇವಿ ಜಿ.
ಉಪನ್ಯಾಸಕರು, ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಶಾಖೆ
ಬನಶಂಕರಿ, ಬಾದಾಮಿ

# ಓಕುಳಿ

ಅನುಪಮಾ

ಕಾಮನ ಕೋಲಿಗೆ
ಮುಟ್ಟಿನ ಮೂರು ಬಣ್ಣ
ಬೇಡಿ ಬಂದವನು ಜಂಗಮನಲ್ಲ
ಪ್ರೀತಿಗಾಗಿ ಮೊರೆದು
ಪ್ರೀತಿಯೇ ಆಗಿ ಮೆರೆದವಳ
ಎದೆಯಗ್ನಿಕುಂಡದಲ್ಲಿ ಬೆಂದು
ಪುತ್ಥಳಿಯಾಗಿ
ಬಾಗಿಲೊದ್ದು ಬಂದು ಜೋಗಿಗೇಕೆ
ಶಿಷ್ಟಾಚಾರ?
'ಬೆಟ್ಟಕ್ಕೆ ಗರ್ಭ ಕಟ್ಟು' ಎಂದವನು
ಕರೆದದ್ದು ಓಕುಳಿಯಾಟಕ್ಕೆ
ಝುಲ್ಲನೆ ಮೆಲ್ಲನೆ ಬೆವೆತಳು ಬಾಲೆ
ಕೊರಳ ಸೆರೆಯುಬ್ಬರವ ಕಡಿದು
ತುಟಿಕಚ್ಚಿ ಬೇಡಿದ್ದು
ಬಾಯಾರಿಕೆಗಾಗಿ
ಮೊಲೆಯೂಡಿಸಿ ಬದುಕು ಕೊಟ್ಟು
ಪಡೆದವಳ ಕಣ್ಣಲ್ಲಿ

ಸುಖದ ಪಸೆ
ಕನ್ನೆನೆಲದ ತವಕಗಳ ಕಟ್ಟಿ
ಕೊಂದು ಹೋಗಲೇ
ಬಂದವನು
ಕಿಚ್ಚು ಕೇಳಿ ಪಡೆದದ್ದು
ತಂಪು
ದಣಿದು ತಣಿದು ಹೆಣ್ಣಾದಳು
ಬಾಲೆ,
ಮೈದುಂಬಿ ಭೂಮಿಯಾದಳು
ಗರ್ಭ ಸೇರಿದ ಬೆಟ್ಟಕ್ಕೆ
ಬೂರಗದ ಕೆಂಪು
ರಕ್ತ ನೈವೇದ್ಯ

□

ಅನುಪಮಾ
ಗಣೇಶ ನಿವಾಸ, ಎ.ಪಿ.ಕೆ. ಬಡಾವಣೆ, ಹೊಳೇನರಸೀಪುರ, ಹಾಸನ ಜಿಲ್ಲೆ

# ಜನಪದ ರಾಮಾಯಣ ಮತ್ತು ಮಹಾಭಾರತ

ಡಾ. ಪುಟ್ಟಸ್ವಾಮಿ

ಭಾರತೀಯ ಮಹಾಕಾವ್ಯಗಳಾದ ರಾಮಾಯಣ ಮಹಾಭಾರತ ಮೂಲದಲ್ಲಿ ಜನಪದ ಕತೆಗಳೋ, ಪುರಾಣಗಳೋ ಆಗಿದ್ದವೆಂಬ ಊಹೆ ಕೂಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ ಅಂಶಗಳ ಅಧ್ಯಯನಕ್ಕೆ ಮುಖ್ಯ ಕಾರಣವಾಯಿತು.

ಭಾರತ ಬಹುಭಾಷೆಗಳ ದೇಶವಾಗಿದ್ದು ಎಲ್ಲಾ ದೇಶಿಯ ಭಾಷೆಗಳಲ್ಲಿ ತಮ್ಮದೇ ಆದ ಜನಪದ ಮಹಾಕಾವ್ಯಗಳ ಭಂಡಾರವನ್ನು ಹೊಂದಿದೆ. ಇಲ್ಲಿನ ವೃತ್ತಿಗಾಯಕರು ಹಾಗೂ ಮತ್ತಿತರರು ಪರಂಪರೆಯಿಂದ ಉಳಿಸಿ ಬೆಳಸಿಕೊಂಡು ಬಂದಿರುವ ಜನಪದ ಮಹಾಕಾವ್ಯಗಳಲ್ಲಿ ಕಂಸಾಳೆಯವರು ಅಥವಾ ದೇವರ ಗುಡ್ಡರ 'ಮಲೆಯ ಮಾದೇಶ್ವರ ಕಾವ್ಯ', ಮಂಟೇದಯ್ಯರು ಅಥವಾ ನೀಲಗಾರರು ಹಾಡುವ 'ಮಂಟೇಸ್ವಾಮಿ ಕಾವ್ಯ' ಕಾಡುಗೊಲ್ಲ ಸಂಪ್ರದಾಯದ ಗೆಣೆಯವರು ಹಾಡುವ 'ಜುಂಜಪ್ಪನ ಕಾವ್ಯ' ಎಲ್ಲಮ್ಮ ಸಂಪ್ರದಾಯದ ಚೌಡಿಕೆಯವರು, ಗೊಂದಲಿಗರು ಹಾಡುವ 'ಎಲ್ಲಮ್ಮ ಕಾವ್ಯ' ಗೊರವರು ಹಾಡುವ 'ಮೈಲಾರಲಿಂಗನ ಕಾವ್ಯ' ತಂಬೂರಿಯವರು ಹಾಗೂ ಕರಪಾಲದವರು ಹಾಡುವ 'ಜನಪದ ಬಸವ ಪುರಾಣ' ತುಳುನಾಡಿನ 'ಕೋಟಿ ಚನ್ನಯ್ಯ' ದಕ್ಷಿಣ ಕನ್ನಡದ 'ಸಿರಿ' ಕೊಡಗಿನ 'ಬಾಯಿನ' ಇವುಗಳಲ್ಲದೆ ಜನಪದ ರಾಮಾಯಣ ಮತ್ತು ಮಹಾಭಾರತಗಳು ಪ್ರಮುಖವಾಗಿ ಗುರುತಿಸಲಾಗಿರುವ ಜನಪದ ಮಹಾಕಾವ್ಯಗಳು.

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ರಾಮಾಯಣ ಮಹಾಭಾರತಗಳು ತಮ್ಮದೇ ಆದ ಅದಿತ್ವೀಯ ಸ್ಥಾನವನ್ನು ಹೊಂದಿವೆ. ಇವು ಈ ಮಣ್ಣಿನ ಸಂಸ್ಕೃತಿಯೊಂದಿಗೆ ಮಿಳಿತವಾಗಿ ಅದರ

ಸತ್ತ್ವವನ್ನು ಹೀರಿ, ದಷ್ಟಪುಷ್ಟವಾಗಿ ಬೆಳೆದ ಈ ಬೃಹತ್ ಕೃತಿಗಳು ಇಡೀ ಭರತಖಂಡದ ಸಂಸ್ಕೃತಿಗೆ ಮೂಲಾಧಾರವಾಗಿ ನಿಂತು ಈ ಸಂಸ್ಕೃತಿಯ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿವೆ.

ಭಾರತೀಯ ಸಂಸ್ಕೃತಿಯ ಪ್ರತೀಕವಾದ ರಾಮಾಯಣ ಮಹಾಭಾರತಗಳಲ್ಲಿ ಭರತಖಂಡದ ಜನಪದರ ಜೀವನ ಮೌಲ್ಯ, ನಂಬಿಕೆ, ರೀತಿ ರಿವಾಜು, ಆಚಾರ-ವಿಚಾರ, ಸಾಹಸ-ಸಾಧನೆ, ನೋವು-ನಲಿವು, ನೀತಿ-ಪ್ರೀತಿಗಳು ಅಭಿವ್ಯಕ್ತವಾಗಿವೆ. ಒಂದು ರೀತಿಯಲ್ಲಿ ಒಟ್ಟು ಸಾಂಸ್ಕೃತಿಕ ಇತಿಹಾಸವೇ ಈ ಮಹಾಕಾವ್ಯಗಳಲ್ಲಿದೆ.

ವಿಶ್ವ ಸಾಹಿತ್ಯದಲ್ಲಿ ಕೆಲವೇ ಶ್ರೇಷ್ಠ ಮಹಾಕಾವ್ಯಗಳ ಸಾಲಿನಲ್ಲಿ ರಾಮಾಯಣ ಮಹಾಭಾರತಗಳೂ ನಿಲ್ಲುತ್ತವೆ. ಕಡಿಮೆ ಎಂದರೆ ಎರಡು ಸಾವಿರ ವರ್ಷಗಳಿಂದಲೂ ಈ ನಾಡಿನ ಸಂಸ್ಕೃತಿಯನ್ನು ಕಟ್ಟಿ ಬೆಳೆಸುವಲ್ಲಿ ಇವೆರಡರ ಪಾತ್ರ ಮಹತ್ವದ್ದು. ಅವುಗಳಲ್ಲಿ ಬಂದಿರುವ ಕಥೆಗಳು ವೈವಿಧ್ಯವೂ, ವಿಸ್ತಾರವೂ ಆಗಿದ್ದು ಭಾರತೀಯರನ್ನು ಶತಶತಮಾನಗಳಿಂದ ರಂಜಿಸಿವೆ. ಇವೆಲ್ಲದರ ಫಲವಾಗಿ ಭಾರತೀಯ ಸಾಹಿತ್ಯಕ್ಕೆ ಇವೆರಡೂ ಉತ್ತಮ ಆಕರಗಳಾದವು. ಭಾರತೀಯ ದೇಶ ಭಾಷೆಗಳಲ್ಲಿ ಮುಂದಿನ ಶತಕಗಳಲ್ಲಿ ಮರುಹುಟ್ಟನ್ನು ಪಡೆದು ತಮ್ಮ ಜೀವಂತಿಕೆಯನ್ನು ತೋರಿದವು.

ರಾಮಾಯಣ ಮಹಾಭಾರತಗಳ ರಾಮ ಮತ್ತು ಕೃಷ್ಣ ಪೂಜೆಗೊಳ್ಳುವುದರ ಮೂಲಕ ಎರಡು ಸಂಸ್ಕೃತಿಗಳ ಬೆಳವಣಿಗೆಗೆ ಕಾರಣರಾಗಿದ್ದಾರೆ. ಆ ಮುಖಾಂತರ ಆರಾಧನಾ ಪದ್ಧತಿಯೊಂದು ಪ್ರಾರಂಭವಾಗಿ ಜನಮಾನಸದಲ್ಲಿ ಬೇರೂರಿತು. ಇಲ್ಲಿ ರಾಮ 'ಆರ್ಯ' ಜನಾಂಗವನ್ನು ಪ್ರತಿನಿಧಿಸಿದರೆ, ಕೃಷ್ಣ 'ದ್ರಾವಿಡ' ಜನಾಂಗವನ್ನು ಪ್ರತಿನಿಧಿಸುವಂತೆ ಕಾಣುತ್ತದೆ. ಅಂದರೆ ಮೇಲುವರ್ಗ ಮತ್ತು ಕೆಳವರ್ಗಗಳ ಸಂಸ್ಕೃತಿಯ ಸಂಘರ್ಷಗಳ ಮಿಳಿತವನ್ನು ತಿಳಿಸುತ್ತವೆ.

ಜನಪದ ರಾಮಾಯಣ ಮಹಾಭಾರತ ಕಥೆಗಳು ಸಾವಿರಾರು ವರ್ಷಗಳಿಂದ ಮೌಖಿಕವಾಗಿ ತಲತಲಾಂತರದಿಂದ ಹರಿದು ಬಂದಿವೆ. ಇವು ಮೊದಲು ಕೌಟುಂಬಿಕ ಕಥೆಗಳಾಗಿ ಕಂಡುಬಂದು ನಂತರ ಪ್ರಾದೇಶಿಕವಾಗಿ ಬೆಳೆದು ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗಿ ಪರಿಸರಕ್ಕನುಗುಣವಾಗಿ ಆಗಾಗ ಹಿಗ್ಗುತ್ತ ಕುಗ್ಗುತ್ತಾ, ಕೆಲವೊಂದು ಬಾರಿ ಸ್ಮೃತಿ ಪಟಲದಿಂದ ಜಾರಿಹೋದ ಭಾಗಗಳಿಗೆ ಬದಲಾಗಿ ಮರುಸೃಷ್ಟಿ ಪಡೆಯುತ್ತವೆ. ಹಾಗೆಯೇ ಆಯಾಯ ಸಂಸ್ಕೃತಿ ಸಮಾಜಕ್ಕನುಗುಣವಾಗಿ ಬದಲಾವಣೆ ಹೊಂದಿ, ರೂಪಾಂತರವಾಗಿ ಭಿನ್ನ ಸಂಪ್ರದಾಯಗಳಲ್ಲಿ ಭಿನ್ನ ಪಾಠಾಂತರಗಳಾಗಿ ಬೆಳೆದು ಶಿಷ್ಟ ಭಾಷೆಯ ಕವಿಗಳಾದ ವೈದಿಕ, ಬೌದ್ಧ, ಜೈನ ಸಂಪ್ರದಾಯದ ಕಾವ್ಯಗಳಿಗೆ ಇವು ಕಥಾ ವಸ್ತುಗಳ ದಾನ ಮಾಡಿದರೂ, ಅನಕ್ಷರಸ್ಥ ಅನಾಮಧೇಯ ಜನಪದರ ಹೃದಯಾಂತರಾಳದಲ್ಲಿ ಪುನರ್ ಸೃಷ್ಟಿಗೊಳ್ಳುತ್ತಾ, ವಿಸ್ತಾರವಾಗಿ ಬೆಳೆಯುತ್ತಾ ಬಂದ ಈ ಜನಪದ ರಾಮಾಯಣ ಮಹಾಭಾರತ ಮಹಾಭಾರತ ಕಾವ್ಯಗಳು ಇಂದು ಹೆಮ್ಮರವಾಗಿ ಬೆಳೆದು ನಿಂತಿವೆ.

ರಾಮಾಯಣ ಮಹಾಭಾರತ ಕಥೆಗಳು ಬೆಳೆದ ಕಾಲಕ್ಕೂ ವಾಲ್ಮೀಕಿ ವ್ಯಾಸರಿಗೂ ಯಾವುದೇ ವೈಯುಕ್ತಿಕವಾದ ಸಂಬಂಧವಿಲ್ಲ ಎಂಬುದನ್ನು ಮೊದಲು ಮನಗಾಣಬೇಕಾಗುತ್ತದೆ. ಅಂದರೆ ವಾಲ್ಮೀಕಿ-ವ್ಯಾಸರು ರಾಮಾಯಣ ಮಹಾಭಾರತ ಕಥೆಗಳ ಮೊಟ್ಟಮೊದಲ ಸೃಷ್ಟಿಕರ್ತರಲ್ಲ. ಈ ಕಾವ್ಯಗಳು ವ್ಯಕ್ತಿಯೊಬ್ಬನಿಂದ ಯಾವುದೋ ಒಂದು ಪರಿಸರದಲ್ಲಿ ಹುಟ್ಟಿದ್ದು ನಂತರ ಪರಿಸರದಿಂದ

ಪರಿಸರಕ್ಕೆ ವಹನಿಸುವಾಗ ಅದು ವ್ಯಕ್ತಿಯೊಬ್ಬನ ವಾಣಿಯಾಗಿರದೆ ಸಮಗ್ರ ರಾಷ್ಟ್ರದ ಮತ್ತು ಜನಾಂಗದ ಸಾಮೂಹಿಕ ಸಂಸ್ಕೃತಿಯ ವಾಣಿಯಾಗಿದೆ. ಇಲ್ಲಿ ಮೂಲ ಕರ್ತೃ ಯಾರು ಎಂದು ಇಂದು ತಿಳಿಯದಿರಬಹುದು. ಆದರೆ ಯಾವುದೂ ಶೂನ್ಯದಿಂದ ಉದ್ಭವಿಸುವುದಿಲ್ಲ ಎಂದ ಮೇಲೆ ಕಥೆಗೆ ಮೂಲ ಕರ್ತೃ ಇದ್ದೇ ಇರಬೇಕು. ರಾಮಾಯಣ ಮಹಾಭಾರತದ ಕಥೆಗಳಿಗೆ ಮೂಲವಸ್ತು ಜನಪದ ಮೂಲದಿಂದಲೇ ಬಂದಿರಬೇಕು. ಮಣ್ಣು ಮೊದಲು ನಂತರ ಮಡಿಕೆ. ಮಣ್ಣೇ ಇಲ್ಲದೆ ಮಡಿಕೆ ಮಾಡಲು ಹೇಗೆ ಸಾಧ್ಯ ? ಹಾಗಾಗಿ ಯಾವುದೇ ಶಿಷ್ಟ ಕಾವ್ಯ ಪ್ರಕಾರಗಳಿಗೆ ಜನಪದವೇ ಮೂಲ ಎಂಬುದು ವಿದ್ವಾಂಸರ ಅಭಿಮತ. ಮೂಲವಸ್ತು ಕಾಲಚಕ್ರದಲ್ಲಿ ಸೇರಿಕೊಂಡು ಕಾಲಮಾನ, ಪರಿಸರ, ಜನಾಂಗಗಳಿಗೆ ಅನುಗುಣವಾಗಿ ವೈವಿಧ್ಯ, ವೈಶಿಷ್ಟ್ಯಗಳನ್ನು ಅನೇಕ ರೂಪಗಳನ್ನು ಪಡೆದುಕೊಳ್ಳುತ್ತಾ ಹೋಗುತ್ತದೆ.

ಈ ಕಾವ್ಯಗಳು ಜನಪದರ ಮೇಲೆ ಎಷ್ಟು ಪ್ರಭಾವವನ್ನು ಬೀರಿವೆ ಎಂದರೆ ಅವು ವ್ಯಕ್ತಿನಾಮಗಳಾಗಿ, ಊರು ಕೇರಿಗಳ ಸ್ಥಳನಾಮಗಳಾಗಿ ಹಾಗೆಯೇ ನಂಬಿಕೆ, ಆಚರಣೆಗಳಲ್ಲಿ, ಗಾದೆ-ಒಗಟುಗಳಲ್ಲಿ, ಬೈಗುಳ-ನುಡಿಗಟ್ಟುಗಳಲೆಲ್ಲಾ ಹಾಸುಹೊಕ್ಕಾಗಿ ಜನರೊಂದಿಗೆ ಮಿಳಿತಗೊಂಡಿವೆ. ಅಷ್ಟೇ ಅಲ್ಲ ಗ್ರಾಮ-ನಗರಗಳಲ್ಲಿ ದೇವಾಲಯಗಳನ್ನು ಕಟ್ಟಿಸಿ ಅವರನ್ನು ದಿನನಿತ್ಯವು ಆರಾಧಿಸುತ್ತಾ ಬಂದಿರುವ ಜನಪದರ ನರನಾಡಿಗಳಲ್ಲಿ, ರಕ್ತದ ಕಣಕಣಗಳಲ್ಲಿ ಸೇರಿಕೊಂಡು ಬಂದಿರುವ ರಾಮಾಯಣ ಮಹಾಭಾರತ ಕಾವ್ಯಗಳ ಗಾಢವಾದ ಪರಿಣಾಮ ಬಹುಶಃ ಮತ್ತಾವ ಕಾವ್ಯಗಳು ಇಷ್ಟು ಪ್ರಭಾವ ಬೀರಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಈ ಎರಡೂ ಕಾವ್ಯಗಳು ಗ್ರಾಮೀಣರ ಮೇಲೆ ಬೀರಿದ ಪ್ರಭಾವದಿಂದಾಗಿ ಅವರ ಮಕ್ಕಳು, ಮೊಮ್ಮಕ್ಕಳುಗಳಿಗೆ ರಾಮ, ಕೃಷ್ಣ, ಅರ್ಜುನ, ಭೀಮ, ಸೀತೆ, ಕೌಸಲ್ಯ ಮುಂತಾದ ಹೆಸರುಗಳನ್ನು ಕಟ್ಟಿ ಕರೆಯುವ ಮುಖೇನ ಅವರನ್ನು ಸದಾ ಸ್ಮರಿಸುತ್ತಾರೆ.

ಈ ವ್ಯಕ್ತಿಗಳ ಬಗೆಗೆ ಇಟ್ಟಿರುವ ಪ್ರೀತಿಯನ್ನು ಊರು-ಕೇರಿಗಳ ಸ್ಥಳನಾಮಗಳಲ್ಲಿ ಕಾಣಬಹುದು. ಅಂದರೆ ವನವಾಸ ಸಂದರ್ಭದಲ್ಲಿ ರಾಮನ ಹಿಂದೆ ಬರುತ್ತಿದ್ದ ಲಕ್ಷ್ಮಣ ಇಬ್ಬರ ಬಿಲ್ಲು ಬಾಣಗಳನ್ನು ಹೊತ್ತುಕೊಂಡು ನಡೆಯುತ್ತಿರುವಾಗ ಸುಸ್ತಾದ ಲಕ್ಷ್ಮಣ ಅವನ್ನು ಸ್ವಲ್ಪ ದೂರು ಹೊತ್ತುಕೊಳ್ಳಲು ರಾಮನಿಗೆ ಹೇಳಿದನಂತೆ. ರಾಮ ನಿರಾಕರಿಸಿದನಂತೆ. ಆಗ ಅವನು ಬಾಣ ಬತ್ತಳಿಕೆಗಳನ್ನು ಅಲ್ಲೇ ನೆಲಕ್ಕೆ ಊರಿದನಂತೆ. ಅದೇ 'ಬಾಣ ಊರು' ಆಗಿ ಜನರ ಬಾಯಲ್ಲಿ 'ಬಾಣಾವರ'ವಾಗಿ ಚಾಲ್ತಿಗೆ ಬಂದಿದೆ. ಹಾಗೆಯೇ ಪಾಂಡವರು ಉಪವಾಸವಿದ್ದ ಊರು 'ಧರ್ಮಪುರಿ'ಯಾಗಿದೆ. ಅವರ ಕಣ್ಣಿಗೆ ಕಂಡ ಹಣ್ಣು ರಾಮಫಲ, ಸೀತಾಫಲ ಬೆಟ್ಟ ಗುಡ್ಡಗಳು 'ಕುಂತಿ ಬೆಟ್ಟ', 'ಭೀಮನ ಗುಡ್ಡ'ಗಳಾಗಿವೆ. ಬಂಡೆ ಕಲ್ಲುಗಳ ಮೇಲಿನ ಗೆರೆಗಳು 'ಸೀತಾಸೆರಗಾಗಿವೆ' ಅಲ್ಲದೆ ಬಂಡೆಗಳ ಮೇಲಿನ ಗುರುತುಗಳು 'ಸೀತಾಪಾದ', 'ಭೀಮಪಾದ', 'ರಾಮಪಾದ' ಎಂದು ತೋರಿಸುವುದುಂಟು. ಹಾಗೂ ಯಾರೇ ಆಡಳಿತ ನಡೆಸಿದರೂ ದುಡಿಯುವುದು ತಪ್ಪುವುದಿಲ್ಲ ಎನ್ನುವಾಗ 'ರಾಮ ರಾಜ್ಯವಾಳಿದರೂ ರಾಗಿ ಬೀಸೋದ್ ತಪ್ಪಿಲ್ಲ' 'ಹೆಣ್ಣಿನಿಂದ ರಾವಣ ಕೆಟ್ಟ ಮಣ್ಣಿನಿಂದ ಕೌರವ ಕೆಟ್ಟ' 'ಅಂತು ಇಂತು ಕುಂತಿ ಮಕ್ಕಳಿಗೆ ರಾಜ್ಯವಿಲ್ಲ' ಎಂಬ ಗಾದೆಗಳನ್ನು ನೋಡಬಹುದು. ಇದಲ್ಲದೆ ತಮ್ಮ ಊರು ಕೇರಿಗಳಿಗೂ ರಾಮ ಸೀತೆಯರ ಮತ್ತು ಪಾಂಡವರ ಹೆಸರುಗಳನ್ನು ಭಕ್ತಿ

ಭಾವಗಳಿಂದ ಕಟ್ಟಿ ಕರೆಯುವುದುಂಟು. ಉದಾ : ಪಾಂಡವಪುರ, ಸೀತಾಪುರ, ಶ್ರೀರಾಮಪುರ, ಧರ್ಮರಾಯನಪುರ, ರಾಮನಗರ ಮುಂತಾದ ಹೆಸರುಗಳು ಪ್ರಚಲಿತದಲ್ಲಿವೆ.

ರಾಮಾಯಣಕ್ಕೆ ಸಂಬಂಧಿಸಿದಂತೆ ಈವರೆಗೆ ಪ್ರಕಟವಾಗಿರುವ ಜನಪದ ಕಾವ್ಯಗಳಲ್ಲಿ-ರಾಗೌ, ಪಿ.ಕೆ. ರಾಜಶೇಖರ, ಎಸ್. ಬಸವಯ್ಯ-ಈ ಮೂವರು ಸಂಗ್ರಹಿಸಿರುವ 'ಜನಪದ ರಾಮಾಯಣ' (೧೫೩೨) ಒಂದು ಸುದೀರ್ಘ ಕಾವ್ಯವಾಗಿದ್ದು 'ಸಂಪೂರ್ಣ ರಾಮಾಯಣ'ವಾಗಿದೆ. ಇದರಲ್ಲಿ ಹೊನ್ನಾಜಮ್ಮ ಹೇಳಿರುವ ಸೀತೆಯ ಜನನ ಹಾಗೂ ಸೀತೆಯ ಅಗ್ನಿಪರೀಕ್ಷೆ ವಿವರದ ಜೊತೆಗೆ 'ಲವಕುಶರ' ಕಥೆ, 'ಸುಬ್ಬುಮಾರನ ಕಥೆ'ಯನ್ನೂ ಒಳಗೊಂಡಿದೆ. ಇವರ ನಂತರ ಸಮಗ್ರವಾಗಿ ಬಂದಿರುವ ಮತ್ತೊಂದು ಕೃತಿ ಆನಂದ ಉಪಾಧ್ಯ ಅವರ 'ಯಕ್ಷಗಾನ ರಾಮಾಯಣ ಪ್ರಸಂಗಗಳು' (೧೯೮೦) ಅನಂತರದಲ್ಲಿ ನಮ್ಮ ಜನಪದರ ಮನ-ಮನೆಗಳಲ್ಲಿ ತುಂಬಿಕೊಂಡಿರುವ ರಾಮಾಯಣವನ್ನು ಸಮಗ್ರ ಕಾವ್ಯಗಳ ಜೊತೆಗೆ ಕೆಲವು ತ್ರಿಪದಿ, ಬಿಡಿಹಾಡುಗಳು ಕೆಲವರ ಕೃತಿಗಳಲ್ಲಿ ದೊರೆಯುತ್ತವೆ. ಜೀಶಂಪ ಅವರ 'ಭಾಗವಂತಿಕೆ ಮೇಳ' ಮತ್ತು ಮೇಟಿಕೆರೆ ಹಿರಿಯಣ್ಣನವರ 'ಭಾಗವಂತಿಕೆ ಪದಗಳು' ವಿಷ್ಣು ಪಾರಮ್ಯವನ್ನು ಮೆರೆವ ಪದ್ಯಗಳಾಗಿವೆ. ಅಲ್ಲದೆ ಕೆ. ಶಿವರಾಮ ಐತಾಳರ 'ದಕ್ಷಿಣ ಕನ್ನಡದ ಜನಪದ ಸಾಹಿತ್ಯ' (೧೯೭೧) ಇದು ರಾಮಾಯಣದ ಪ್ರತಿಯೊಂದು ಘಟನೆಗಳನ್ನು ಒಂದೊಂದೇ ಸಾಲಿನಲ್ಲಿ ಹೇಳಿದ್ದಾರೆ. ಕಾಳೇಗೌಡ ನಾಗವಾರ ಅವರ 'ಬಯಲು ಸೀಮೆಯ ಲಾವಣಿಗಳು' (೧೯೭೩) ಇದರಲ್ಲಿ ಲವಕುಶರ ಕಥೆಯನ್ನು ನೋಡಬಹುದು. ಮತಿಘಟ್ಟ ಕೃಷ್ಣಮೂರ್ತಿ ಅವರ 'ಕನ್ನಡ ಜನಪದ ಸಾಹಿತ್ಯ ಭಂಡಾರ' (೧೯೭೫)ರಲ್ಲಿ ರಾಮಾಯಣಕ್ಕೆ ಸಂಬಂಧಿಸಿದ ಎರಡು ಕಥೆಗಳಿವೆ. ಪ್ರೊ. ಟಿ. ಕೇಶವಭಟ್ಟರ 'ಹವ್ಯಕರ ಶೋಭಾನೆಗಳು' (೧೯೮೬) ಇವರಲ್ಲಿ 'ರಾವಣ ಮಂಡೋದರಿ ಸಂವಾದ' ಎಂಬ ಒಂದು ಕಾವ್ಯಭಾಗ ಇದೆ. ಹಾಗೆಯೇ ಎನ್.ಆರ್. ನಾಯಕ ಅವರ 'ಹೇಳುತೇವ್ರೋ ಗುಮ್ಟೆಪದನಾವಾ'ದಲ್ಲಿ ದಶರಥನಿಗೆ ಮಕ್ಕಳಿಲ್ಲದ ವ್ಯಥೆಯನ್ನು ತಿಳಿಸುವ ಗೀತೆಯೊಂದಿದೆ. ಹೀಗೆ ಇನ್ನೂ ಅನೇಕ ಬಿಡಿ ಗೀತೆಗಳು ರಾಮಾಯಣಕ್ಕೆ ಸಂಬಂಧಿಸಿದಂತೆ ದೊರೆಯುತ್ತವೆ.

ಲಭ್ಯ ಕೃತಿಗಳ ವಿಚಾರದಲ್ಲಿ ರಾಮಾಯಣ ಕಾವ್ಯಕ್ಕಿಂತ ಮಹಾಭಾರತದ ಕೃತಿಗಳು ಹೆಚ್ಚು ದೊರೆಯುತ್ತವೆ. ಇತ್ತೀಚೆಗೆ ಡಾ. ಪಿ.ಕೆ. ರಾಜಶೇಖರ ಅವರು 'ಬೆಟ್ಟದ ಬೀಡು ಸಿದ್ದಶೆಟ್ಟಿ' ಯೊಬ್ಬನಿಂದಲೇ ಸಂಗ್ರಹಿಸಿರುವ, ೧೫೫ ಪರ್ವಗಳನ್ನೊಳಗೊಂಡಿರುವ ಬಹು ಅಮೂಲ್ಯ ವಿಚಾರಗಳನ್ನೊಳಗೊಂಡಿರುವ ಬೃಹದ್ಗಾತ್ರದ ಸಮಗ್ರ ಕೃತಿ 'ಜನಪದ ಮಹಾಭಾರತ' (೨೦೦೫) ಇವರಲ್ಲಿ ಶಿಷ್ಟ ಮಹಾಭಾರತದಲ್ಲಿಲ್ಲದ ಅನೇಕ ವಿವರಗಳು ದೊರೆಯುತ್ತವೆ. ಅಲ್ಲದೆ ಬೇರೆಲ್ಲೂ ದೊರೆಯದ ವಿಚಾರಗಳು ಇಲ್ಲಿ ಸಿಗುತ್ತವೆ. ಹಾಗೆಯೇ ಶಿಷ್ಟ ಮಹಾಭಾರತದ ಅನೇಕ ಜಟಿಲ ಪ್ರಶ್ನೆಗಳಿಗೆ ಇಲ್ಲಿ ಉತ್ತರವಿದೆ. ಒಟ್ಟಿನಲ್ಲಿ ಕನ್ನಡ ಜಾನಪದ ಕ್ಷೇತ್ರದಲ್ಲಿ ಇದೊಂದು ಮಹತ್ವದ ಸಾಧನೆ.

ಜನಪದ ಮಹಾಭಾರತಕ್ಕೆ ಸಂಬಂಧಿಸಿದಂತೆ ಮೊದಲ ಕೃತಿ 'ಕರಾಕೃ' ಅವರ 'ಜನಪದ ಗೀತೆಗಳಲ್ಲಿ ಮಹಾಭಾರತ' (೧೯೬೩) ಬಿಡಿ ಕಥನಗಳ ಗ್ರಂಥವಾಗಿದೆ. ಇವರ ಇನ್ನೊಂದು ಕೃತಿ 'ಹಣತಿ ಉರಿಯುತಿದೆ' (೧೯೬೩) ಹಾಗೂ ಗದ್ದಗೀಮಠ ಅವರ 'ಕನ್ನಡ ಜಾನಪದ ಗೀತೆಗಳು'

(೧೯೬೩) ಇದು ಅವರ ಪಿಎಚ್.ಡಿ. ಮಹಾಪ್ರಬಂಧ. ಇಲ್ಲಿ 'ಜೋಗಿ ಹಾಡು' ತುಂಬ ಸೊಗಸಾಗಿ ಚಿತ್ರಣಗೊಂಡಿದೆ. ಮತ್ತೆ ಡಿ. ಲಿಂಗಯ್ಯ ಅವರ 'ಕೊಂಡಿ ಪೂಜೆ' (೧೬೬೩) ಹಾಗೂ ಕ್ಯಾತನಹಳ್ಳಿ ರಾಮಣ್ಣರ 'ಕೊಂತಿ ಪೂಜೆ' (೧೯೮೫) ಇವುಗಳಲ್ಲಿ ಕುಂತಿ ಪೂಜೆಯ ಸಂಪ್ರದಾಯಗಳನ್ನು ಒಳಗೊಂಡ ವಿವರವಿದೆ. ಎಲ್.ಆರ್. ಹೆಗಡೆ ಅವರು ಸಂಗ್ರಹಿಸಿರುವ 'ಬೆಳಿಯಮ್ಮನ ಹಾಡುಗಳು' (೧೯೭೩) ಅಭಿಮನ್ಯು ಕನಕಾಂಗಿಯನ್ನು ಮದುವೆಯಾದ ಅಂಶಗಳನ್ನೊಳಗೊಂಡಿದೆ. ಅಲ್ಲದೆ ಗುಡ್ಮಿ ಚಂದ್ರಶೇಖರ ಐತಾಳರ 'ಕೈಲಿಯೆ ಕರೆದ ನೊರೆ ಹಾಲು' (೧೯೭೦) ಸಂಕಲನ ನಾಲ್ಕು ಭಾಗಗಳಲ್ಲಿ 'ಕುಂತಿ ಕರ್ಣನನ್ನು ಪಡೆದ ಸಂದರ್ಭ' ದ್ರೌಪದೀ ದೇವಿಯ ಕಥೆ, ದ್ರೌಪತಿಯನ್ನು ಕಣ್ಣು ಕಟ್ಟಿ ಕಾಡಿಗೆ ಬಿಟ್ಟ ಕಥೆ, ಸೌಭದ್ರಿ ಹಾಡುಗಳನ್ನು ಒಳಗೊಂಡಿದೆ. ಇವರ ಮತ್ತೊಂದು ಕೃತಿ 'ಮದ್ದುಂಟೆ ಜನನ-ಮರಣ'ಕ್ಕೆ ಇದೂ ಕೂಡ ಉಪಯುಕ್ತ ಕೃತಿಯಾಗಿದೆ.

ಸೋಮಶೇಖರ ಇಮ್ರಾಪುರ ಅವರ 'ಜನಪದ ಮಹಾಭಾರತ' ಕೂಡ ಗಮನಿಸಬೇಕಾದ ಕೃತಿ. ಹಾಗೆಯೇ ನಿಂಗಣ್ಣ ಸಣ್ಣಕ್ಕಿ ಅವರ 'ಬಾಳಗೋಪಾಳನ ಲಾವಣಿಗಳು' (೧೯೭೪) ಇದರಲ್ಲಿ 'ದ್ರೌಪದಿ ವಸ್ತ್ರಾಪಹರಣ' ಮತ್ತು 'ಭೀಷ್ಮ ಪ್ರತಿಜ್ಞೆ' ಎಂಬ ಎರಡು ಲಾವಣಿಗಳಿವೆ. ಕಾವ್ಯಜೀವಿ ಅವರ 'ಹಾಡ್ವೇಳೆ ತಂಗಿ ದನಿಯೆತ್ತಿ' (೧೯೭೯) ಸಂಕಲನದಲ್ಲಿ ಸುಭದ್ರೆಯ ಬಯಕೆಯ ಹಾಡು ಹಾಗೂ ದ್ರೌಪದಿ ಕಥೆಯ ಹಾಡುಗಳಿವೆ. ಎನ್.ಆರ್. ನಾಯಕ್ ಅವರ 'ಗಾಮೊಕ್ಕಲ ಮಹಾಭಾರತ' ಅತ್ಯಂತ ದೀರ್ಘವಾದ ಸಂಕಲನ. ಸುಶೀಲಾ ಸೊಂಡೂರ್ ಅವರು 'ಸುವ್ವಿ ಸುವ್ವಮ್ಮ ಸುವ್ವಿಲಾಲಿ' (೧೯೮೧) ಸಂಕಲನದಲ್ಲಿ ಪಾಂಡವರು ಕೌರವರು ಜೂಜಾಡಿದ್ರು, ದ್ರೌಪದಿದೇವಿ, ಪ್ರಸಂಗ ಗಮನಾರ್ಹ ಭಾಗಗಳಿಂದ ಕೂಡಿದ ವಿನೂತನ ಕಲ್ಪನೆಯಿಂದ ಕೂಡಿದ್ದಾಗಿದೆ. ಜಿ.ವಿ. ಖಾಡೆ ಅವರು ಸಂಗ್ರಹಿಸಿರುವ 'ಹಳ್ಳಿ ಹಬ್ಬಿಸಿದ ಹೂಬಳ್ಳಿ' (೧೯೮೧) ಹಿಂದೂ-ಮುಸ್ಲಿಮ್ ಬಾಂಧವರು ಸೌಹಾರ್ದತೆಯ ಸಂಕೇತವಾಗಿ 'ಮೋಹರಂ ಹಬ್ಬದ' ಸಂದರ್ಭದಲ್ಲಿ ಹಾಡುವ ಹಾಡುಗಳು ಈ ಕೃತಿಯಲ್ಲಿವೆ.

ಒಟ್ಟಿನಲ್ಲಿ ಜನಪದ ರಾಮಾಯಣ ಮತ್ತು ಮಹಾಭಾರತಗಳು ಕೇವಲ ಗತಿಸಿದ ಜನರ ಬದುಕು ಬವಣೆಗಳನ್ನು, ಜೀವನ ದೃಷ್ಟಿಗಳನ್ನು ಹೇಳುವುದಷ್ಟೇ ಅಲ್ಲ, ಬದುಕಿರುವವರ ಜನಜೀವನದ ಮೇಲು ಪರಿಣಾಮ ಬೀರುತ್ತಿವೆ. ಹಾಗೆಯೇ ಇವು ತಮ್ಮ ಒಡಲಲ್ಲಿ ಅನೇಕ ನಂಬಿಕೆ, ಸಂಪ್ರದಾಯ, ಆಶಯಗಳನ್ನು ಸ್ವೀಕರಿಸಿಕೊಂಡು ಹೊಸ ಆಯಾಮ ಪಡೆದಿರುವುದನ್ನು ನೋಡಬಹುದು.

□

---

ಡಾ. ಪುಟ್ಟಸ್ವಾಮಿ
ಕನ್ನಡ ಅಧ್ಯಾಪಕ
ಸ್ನಾತಕೋತ್ತರ ಕೇಂದ್ರ
ಹೇಮಗಂಗೋತ್ರಿ, ಹಾಸನ

# ಯಶವಂತ ಚಿತ್ತಾಲರ 'ಓಡಿ ಹೋದಾ ಮುಟ್ಟಿ ಬಂದಾ'

ಹಂಗರವಳ್ಳಿ ಪ್ರಭಾಕರ್

ಕನ್ನಡ ಕಥಾ ಜಗತ್ತನ್ನು ಶ್ರೀಮಂತಗೊಳಿಸಿದ ಕೆಲವೇ ಮಂದಿ ಕತೆಗಾರರಲ್ಲಿ ಯಶವಂತ ಚಿತ್ತಾಲರು ಪ್ರಮುಖರು. ಕಳೆದ ಶತಮಾನದ ಐವತ್ತರ ದಶಕದಿಂದಲೂ ಇವರ ಸೃಜನಯೋಶೀಲತೆಯ ಓಘ ಮುಂದುವರೆದಿದೆ. ಇವರ ಸ್ವಚ್ಛಂದ ಸೃಜನಶೀಲಧಾರೆ ಉಕ್ಕಿ ಹರಿಯುತ್ತಿರುವುದು ಕನ್ನಡ ಸಾಹಿತ್ಯಾಭಿಮಾನಿಗಳಿಗೆ ಸಂತೋಷದ ಸಂಗತಿ. ಕನ್ನಡ ನಾಡಿನೊಂದಿಗಿನ ಚಿತ್ತಾಲರ ಸಾಹಿತ್ಯಕ ಸಂಬಂಧ ಅನನ್ಯವಾದುದು. ತಮ್ಮ ಸಂಬಂಧದ ಬೇರುಗಳನ್ನು ಕಳೆದುಕೊಂಡು ದೂರದ ಮುಂಬೈನಲ್ಲಿ ನೆಲೆಸಿದ್ದರೂ, ಈ ಮಣ್ಣಿನ ತಾಜಾ ಸಂವೇದನೆಯಿಂದ ರೂಪುಗೊಂಡಿರುವ ಮನಸ್ಸು ಇಲ್ಲಿನ ಸಂಸ್ಕೃತಿಯೊಂದಿಗಿನ ಮುಖಾಮುಖಿ ಹೊಸ ಹುರುಪಿನೊಂದಿಗೆ ಇಳಿಯವಂತೆ ಮಾಡಿದೆ. ಯಶವಂತ ಚಿತ್ತಾಲರದು ಶ್ರೀಮಂತವಾದ ಸಾಹಿತ್ಯ ಜಗತ್ತು. ಇವರ ಕತೆ-ಕಾದಂಬರಿಗಳು ಕನ್ನಡ ಸಾಹಿತ್ಯದಲ್ಲಿ ಚಿರಸ್ಥಾನವನ್ನು ಇವರಿಗೆ ತಂದುಕೊಟ್ಟಿವೆ.

ಚಿತ್ತಾಲರ ಮೊದಲ ತಲೆಮಾರಿನ ಕತೆಗಳಿಗೂ ತೀರಾ ಇತ್ತೀಚಿನ ಕತೆಗಳ ಬೆಳವಣಿಗೆಯನ್ನು ಗಮನಿಸಿ ಹೇಳುವುದಾದರೆ ಕತೆಗಾರಿಕೆಯ ಕಸುವು ಒಂದಿಷ್ಟು ಮಾಗಿಯೇ ಇಲ್ಲ. ವಸ್ತುವಿನ ವೈವಿಧ್ಯತೆಯ ಹರಹು ಮಾತ್ರ ಇಂದಿನ ಸಂವೇದನೆಗಳಿಗೆ ರೂಪ ಕೊಟ್ಟವು ಎನಿಸುತ್ತದೆ. ಆಧುನಿಕತೆಯ ಇಂದಿನ ಭರಾಟೆಯಲ್ಲೂ ಮನುಷ್ಯ ಜಗತ್ತಿನ ಬಗ್ಗೆ ಕುತೂಹಲವಿರಿಸಿಕೊಂಡೇ ಸಾಗುವ ಇವರ ಅನುಭವ ಜಗತ್ತು ನಿಜಕ್ಕೂ ವಿಸ್ಮಯ ಮೂಡಿಸುತ್ತದೆ. ಇತ್ತೀಚೆಗೆ ಪ್ರಕಟಗೊಂಡಿರುವ 'ಓಡಿಹೋದಾ ಮುಟ್ಟಿ ಬಂದಾ' ಕಥಾ ಸಂಕಲನವು ಮನುಷ್ಯ ಜಗತ್ತಿನ ಬಗ್ಗೆ ಚಿತ್ತಾಲರಿಗಿರುವ ಕುತೂಹಲವನ್ನು ಇನ್ನಷ್ಟು ವಿಸ್ತಾರಗೊಳಿಸಿದೆ. 'ಕುಮಟೆಗೆ ಬಂದಾ ಕಿಂದರಿ ಜೋಗಿ' ಕಥಾ ಸಂಕಲನದ ಪ್ರಕಟಣೆಯ ನಂತರ,

ಪ್ರಿಸಮ್ ಕಥಾ ಮಾಲಿಕೆ-೧೨ರಲ್ಲಿ ಪ್ರಕಟಗೊಂಡಿರುವ 'ಓಡಿಹೋದಾ ಮುಟ್ಟಿಬಂದಾ' ಕಥಾಸಂಕಲನವು ಮಹತ್ವದ ಹತ್ತು ಕತೆಗಳನ್ನೊಳಗೊಂಡಿದೆ. ಗ್ರಾಮೀಣ ಮತ್ತು ನಗರ ಕೇಂದ್ರಿತ ವಸ್ತು ವೈವಿಧ್ಯವುಳ್ಳ ಇಲ್ಲಿನ ಕತೆಗಳು ಮನುಷ್ಯ ಜಗತ್ತು ವರ್ತಿಸುವ ಹಾಗೂ ಮನಸ್ಸಿನೊಳಗೆ ಮೂಡವಂತಹ ನಿಗೂಢ ಜಗತ್ತಿನ ಪರಿಕಲ್ಪನೆಯನ್ನು ಬಿಚ್ಚಿಡುತ್ತವೆ. ಈ ಮನುಷ್ಯ ಸೃಷ್ಟಿಯ ಬಗ್ಗೆ ನಿಜಕ್ಕೂ ಕುತೂಹಲವನ್ನು ಇನ್ನಷ್ಟು ವಿಸತಾರಗೊಳಿಸಿದೆ. 'ಕುಮಟೆಗೆ ಬಂದಾ ಕಿಂದರಿ ಜೋಗಿ' ಕಥಾ ಸಂಕಲನದ ಪ್ರಕಟಣೆಯ ನಂತರ, ಪ್ರಿಸಮ್ ಕಥಾ ಮಾಲಿಕೆ-೧೨ರಲ್ಲಿ ಪ್ರಕಟಗೊಂಡಿರುವ 'ಓಡಿಹೋದಾ ಮುಟ್ಟಿಬಂದಾ' ಕಥಾಸಂಕಲನವು ಮಹತ್ವದ ಹತ್ತು ಕತೆಗಳನ್ನೊಳಗೊಂಡಿದೆ. ಗ್ರಾಮೀಣ ಮತ್ತು ನಗರ ಕೇಂದ್ರಿತ ವಸ್ತು ವೈವಿಧ್ಯವುಳ್ಳ ಇಲ್ಲಿನ ಕತೆಗಳು ಮನುಷ್ಯ ಜಗತ್ತು ವರ್ತಿಸುವ ಹಾಗೂ ಮನಸ್ಸಿನೊಳಗೆ ಮೂಡುವಂತಹ ನಿಗೂಢ ಜಗತ್ತಿನ ಪರಿಕಲ್ಪನೆಯನ್ನು ಬಿಚ್ಚಿಡುತ್ತವೆ. ಈ ಮನುಷ್ಯ ಸೃಷ್ಟಿಯ ಬಗ್ಗೆ ನಿಜಕ್ಕೂ ಕುತೂಹಲವಿರಿಸಿಕೊಂಡಿರುವ ಚಿತ್ತಾಲರು ಪ್ರತಿಯೊಂದು ಘಟನೆಯಲ್ಲೂ ಅಚ್ಚರಿಪಡುತ್ತಾರೆ. ಇವರು ಬಿಡಿಸುವ ಮನುಷ್ಯ ಜೀವಿಯ ಚಿತ್ತಾರ ಓದುಗನನ್ನು ಬೆರಗುಗೊಳಿಸುತ್ತದೆ. ಯಶವಂತ ಚಿತ್ತಾಲರನ್ನು ಉದ್ದಕ್ಕೂ ಕಾಡಿರುವುದು ಸಾವು ಮತ್ತು ಕಾಮ. ಈ ವಿಷಯಗಳತ್ತಲೇ ಕೇಂದ್ರೀಕೃತವಾಗಿರುವ ಚಿತ್ತಾಲರ ಮನಸ್ಸು ಆತ್ಮಶೋಧಕ್ಕೂ ತೊಡಗುತ್ತದೆ. ಮನಸ್ಸಿನ ಸೂಕ್ಷ್ಮಪಟಲವನ್ನು ಕಂಗೆಡಿಸುವಂತಹ ಪರಿಧಿಗಳು ಇಲ್ಲಿನ ಸಾಮಾಜಿಕ ಪ್ರಪಂಚದಲ್ಲಿ ನಿರ್ಮಿತವಾಗಿರುವುದರಿಂದ ಇವುಗಳಲ್ಲಾಗುವ ವ್ಯತ್ಯಾಸ ಮನುಷ್ಯ ಬದುಕನ್ನು ಅಲ್ಲೋಲ ಕಲ್ಲೋಲಗೊಳಿಸುತ್ತವೆ. ಇಂತಹ ವಿವಿಧ ನಮೂನೆಯ ನೋವುಗಳಿಂದ ನರಳುವಂತ ಜೀವಜಗತ್ತು ಪರಿಸ್ಥಿತಿಯನ್ನು ನಿಭಾಯಿಸುವ ಶಕ್ತಿಯಿಲ್ಲದೆ ತೀವ್ರವಾಗಿ ಕುಸಿಯುತ್ತದೆ. ಹಾಗೆಂದು ಇಲ್ಲಿನ ವಸ್ತುವಿನಲ್ಲಿ ಜೀವನ್ಮುಖತೆಯಿಲ್ಲವೆಂದು ಭಾವಿಸಬಾರದು. ಸೂಕ್ಷ್ಮವಾಗಿ ಹುಡುಕುತ್ತಾ ಹೋದರೆ ಒಳಗಿನಿಂದಲೇ ಗಟ್ಟಿಗೊಳ್ಳುತ್ತಿರುವ ಜೀವನಾಶಯದ ಚೇತನವೊಂದನ್ನು ಕಾಣಲು ಸಾಧ್ಯ. ಈ ಅನನ್ಯತೆಯೇ ಇವರ ಕತೆಗಾರಿಕೆಗೆ ನೈಜತೆಯ ಕಸುವನ್ನು, ಸೊಗಸುಗಾರಿಕೆಯನ್ನು ತಂದುಕೊಟ್ಟಿದೆ.

೨

ಕಥಾಸಂಕಲನದ ಮೊದಲ ಕಥೆ 'ತಪರಾಕಿ'ಯ ವಸ್ತು ಕಾಮದ ಸುತ್ತ ಹೆಣೆದುಕೊಂಡಿದೆ. ಮುಂಬೈ ಜಗತ್ತಿನಲ್ಲಿ ನಡೆಯುವ ಕತೆ ಇದಾದರು ಇಲ್ಲಿನ ವ್ಯಾವಹಾರಿಕ ಜಗತ್ತಿಗೆ ಸಂಬಂಧಪಟ್ಟಂತಹ ವಸ್ತುವಲ್ಲ. ಮನುಷ್ಯ ಜೀವಿಯಲ್ಲಿ ಬೆಳವಣಿಗೆ ಹೊಂದುವ ಲೈಂಗಿಕ ಪ್ರಜ್ಞೆಯ ಬಗ್ಗೆ ತೀವ್ರ ಕುತೂಹಲಕರವಾದ ವಸ್ತುವ್ಯಾಪಿಯನ್ನೊಳಗೊಂಡಿದೆ. ಮುಖವಾಡಗಳಲ್ಲಿ ಬಂಧಿಸಿಡಲ್ಪಟ್ಟಿರುವ ಕಾಮ ಆಗಾಗ ವ್ಯಕ್ತವಾಗುವುದುಂಟು. ಮನುಷ್ಯನಲ್ಲಂತೂ ಸಮಯ, ಸನ್ನಿವೇಶ, ಸಂದರ್ಭಗಳ ಪರಿವೇ ಇಲ್ಲದೆ ಪ್ರಕಟಗೊಳ್ಳುತ್ತಿರುತ್ತದೆ. ಕಾಮವನ್ನು ಅತಿ ಮರ್ಯಾದೆ ಕಲ್ಪನೆಯಲ್ಲಿ ಬಂಧಿಸಿಟ್ಟಿರುವುದು ಅನೇಕ ದುರಂತಗಳಿಗೆ ಕಾರಣ. 'ತಪರಾಕಿ'ಯ ಘಟನೆಯಿಂದ ತೆರೆದುಕೊಳ್ಳುವ ಕತೆ, "ಯಾವ ಯಾವ ಕಾರಣಕ್ಕೋ ನಡೆದುಹೋದ ಘಟನೆಯೊಂದು ಯಾರೆಲ್ಲರನ್ನು ಒಳಗೊಳ್ಳುವ ಮೂಲಕ ಸನ್ನಿವೇಶವೊಂದು ಹುಟ್ಟಿಕೊಳ್ಳುತ್ತದೆಯೆಂದೂ, ಘಟನೆಯ ಕಾರಣಗಳನ್ನು, ಸನ್ನಿವೇಶದ ಪರಿಣಾಮಗಳನ್ನು ಊಹಿಸುವುದು ಮನುಷ್ಯ ಸಹಜ ಕುತೂಹಲವೆನ್ನುವುದು ಕತೆಗೆ ತಂದುಕೊಡುವ ಸಾತತ್ಯತೆ. ಒಂದೇ ಕಟ್ಟಡದ ಹಲವು ಮಜಲೆಯಲ್ಲಿರುವ ಜನರಲ್ಲಿಯೇ ಪ್ರಖ್ಯಾತರಾದ ಪ್ರೊ. ಸೋಲೋಮನ್‌ರ ಮನೆಯಲ್ಲಿ ನಡೆಯಿತೆನ್ನಲಾದ 'ತಪರಾಕಿ' ಘಟನೆಯ ಹಿಂದೆ ಇರುವಂಥ

ರಹಸ್ಯವನ್ನು ಭೇದಿಸಲು ಹೊರಟ ಇಲ್ಲಿನ ಕಥಾನಾಯಕ ತಾನು ಒಳಗೊಳ್ಳುವ, ತನ್ನ ತಂದೆಯೂ ನೇರವಾಗಿ ಒಳಗೊಳ್ಳುವ ವಿಷಯದಿಂದ ತಲ್ಲಣಿಸುತ್ತಾನೆ. ಸೋಲೋಸಮನ್‌ರ ಮನೆಗೆಲಸದವಳಾದ ಪಾರ್ವತಿಗೆ ಇರುವ ಅನೈತಿಕ ಸಂಬಂಧವನ್ನು ಗುರುತಿಸುವಲ್ಲಿ ತನ್ನ ತಂದೆಗೆ ಜಾನಕಿಯ ಜೊತೆಯಿದ್ದಿರಬಹುದಾದ ಸಂಬಂಧವನ್ನು ಗ್ರಹಿಸಿಕೊಂಡು ತೀವ್ರ ಕುಸಿತಕ್ಕೆ ಒಳಗಾಗುತ್ತಾನೆ. ಲೈಂಗಿಕಾಪೇಕ್ಷೆಗೆ ನೈತಿಕ-ಅನೈತಿಕ ಪಟ್ಟವಿರುವುದರಿಂದ ತನ್ನ ತಂದೆ ಯಾವುದನ್ನು ಒಳಗೊಳ್ಳಬೇಕಾಗುತ್ತದೆ ಎಂಬುದರಲ್ಲಿ ತೀವ್ರ ಕುತೂಹಲಿಯಾಗುತ್ತಾನೆ. "ಐನ್‌ಸ್ಟೈನ್ ಬೆಳಕಿನ ಬಗ್ಗೆ ತನ್ನ ಪ್ರಖ್ಯಾತ ಹೇಳಿಕೆಯನ್ನು ಮಾಡಿದಾಗ, ಬೆಳಕು ಕಣವೂ ಹೌದು, ಅಲೆಯೂ ಹೌದು-ಎಂದು ಸರಳವಾಗಿ ತಿಳಿಸಿದಾಗ ಅವನು ಕೇವಲ ಬೆಳಕಿನ ಬಗ್ಗೆ ಹೇಳಲಿಲ್ಲ. ವಾಸ್ತವವನ್ನು ನೋಡುವ ನಮ್ಮ ದೃಷ್ಟಿಕೋನವನ್ನು ಬದಲಾಯಿಸಿದ" ಎನ್ನುವ ಆತನ ಮಾತಿನ ಲಹರಿಯೇ ಇಡೀ ಕತೆಗೆ ತಂದು ಕೊಡುವ ಅನನ್ಯತೆ. ವಯಸ್ಸಿನ ಪಕ್ವತೆಯ ಜೊತೆಯಲ್ಲಿಯೇ ಮಾನಸಿಕ, ದೈಹಿಕ ಸಂವೇದನೆಗಳು ಪ್ರಬಲವಾಗುವಂತಹ ಸಂದರ್ಭದಲ್ಲಿ ಕುತೂಹಲ ಮೂಡುವಂತಾಗುವುದೇ ಇಲ್ಲಿನ ಪಾತ್ರಕುಸಿತ ಪರಿಣಾಮವನ್ನು ತಡೆಗಟ್ಟಿದೆ. ಬೌದ್ಧಿಕ ವಿಕಾಸ ಕ್ರಮ ವಾಸ್ತವಿಕ ಜಗತ್ತಿನೊಂದಿಗೆ ಸ್ಪಂದಿಸುವಾಗಿನ ಸಂಘರ್ಷವೇ ಈ ಕತೆಯ ಒಟ್ಟು ತಿರುಳು.

'ಬಂದು ಹೋದವನು' ಕತೆಗೆ 'ತಪರಾಕಿ' ಕತೆಯಷ್ಟು ವಸ್ತುವಿನ ಐಕ್ಯತೆಯಿಲ್ಲದಿದ್ದರೂ ಕತೆಯ ವಸ್ತು ಪಡೆದುಕೊಳ್ಳುವ ವಿಪರೀತ ತಿರುವಿನಿಂದಾಗಿ ಕುತೂಹಲ ಮೂಡಿಸುತ್ತದೆ. ಕತೆ ಪೂರ್ತಿಯಾಗಿ ನಡೆಯುವುದು 'ಕುಮಟೆ' ಎಂಬ ಗ್ರಾಮದಲ್ಲಿ. ವಾಸ್ತವವಾಗಿ ಇದು ಎಲ್ಲಿಯು ನಡೆಯುವಂತಹದು. ಕುಮಟೆಗೆ ಬಂದ ಅಪರಿಚಿತ ವ್ಯಕ್ತಿಯೊಬ್ಬ ಹುಲಿದೇವರ ಗುತ್ತದ ಮಗ್ಗುಲಲ್ಲಿದ್ದ ಅಶ್ವತ್ಥಕಟ್ಟೆಯ ಮೇಲೆ ಒಂದಷ್ಟು ದಿನ ಕಳೆದು ಇದ್ದಕ್ಕಿದ್ದಂತೆ ಪರಾರಿಯಾಗುತ್ತಾನೆ. ಬಾವಾಜಿಯ ವೇಷದಲ್ಲಿದ್ದ ಆತ ಯಾರು? ಬಂದ ಉದ್ದೇಶವೇನು? ಎಲ್ಲಿಂದ ಬಂದ? ಎಲ್ಲಿಗೆ ಹೋದ? ಎಂಬ ಸಂಶಯಕ್ಕೆ ಕಾರಣವಾಗಿ ಅದೃಶ್ಯನಾಗಿದ್ದ. ಪ್ರಶ್ನೆಗಳಿಗ ಕುಮಟೆಯಲ್ಲಿದ್ದ ಜನರೆಲ್ಲರೂ ಒಂದೊಂದು ರೀತಿಯ ಊಹಾತ್ಮಕ ಉತ್ತರವನ್ನು ಕಂಡುಕೊಳ್ಳುತ್ತ, ಒಂದರ ವಿಷಯದಲ್ಲಿ ಇನ್ನೊಂದನ್ನು ತೊಡಿಸುತ್ತಲೇ ಸಮಸ್ಯೆಯ ತೀವ್ರತೆಗೆ ಕಾರಣರಾದರೆ ವಿನಃ ಅವನ ಪೂರ್ಣ ಮಾಹಿತಿಯನ್ನು ಒದಗಿಸಲಾಗಲಿಲ್ಲ. ದೇವರಾಯ, ನೀಲಕಂಠ ತಾವು ಉತ್ತರ ಕಂಡುಕೊಳ್ಳಲು ಹೋಗಿ ತಾವೇ ಅದರೊಳಗೆ ಸಿಕ್ಕಿಹಾಕಿಕೊಳ್ಳುವಾಗಲೇ ಅರಿವಾದದ್ದು ಇದು ತೆಗೆದುಕೊಳ್ಳುತ್ತಿರುವ ತಿರುವು ಯಾರಾರನ್ನೋ ಸೇರಿಸಿಕೊಳ್ಳುತ್ತಿದೆಯೆಂದು. ಕ್ರಮೇಣ ವರ್ಷಗಳು ಕಳೆದಂತೆ ಜನ ತಾವು ಕಂಡುಕೊಂಡ, ಹಬ್ಬಿಸಿದ ಊಹಾತ್ಮಕ ಉತ್ತರಗಳಿಗೆ ತೃಪ್ತರಾಗಬೇಕಾಯಿತೇ ವಿನಃ 'ಬಂದು ಹೋದವನು' ಯಾರೆಂಬುದು ಕೊನೆಗೂ ಗೊತ್ತಾಗಲಿಲ್ಲ. ಸಂಕೀರ್ಣ ವಸ್ತುವೊಂದನ್ನು ಕತೆಯಾಗಿಸುವಲ್ಲಿ ಚಿತ್ತಾಲರಿಗೆ ಒದಗಿರುವ ಕಲಾ ನೈಪುಣ್ಯತೆ ಮೆಚ್ಚುವಂತಹದು. ಈ ಕತೆಯ ಸುತ್ತಲೂ ಕಾಮಕ್ಕೆ ಸಂಬಂಧಿಸಿದ ನೈತಿಕ-ಅನೈತಿಕ ಪ್ರಶ್ನೆಯೇ ಪ್ರಧಾನ ಪಾತ್ರವಹಿಸುತ್ತದೆ. ದೇವರಾಯನ ಅತ್ತೆ, ಭಟ್ಟರ ಹೆಂಡತಿ, ಸಾವಿತ್ರಿ ಹಾಗೂ ನೆಲ್ಲಿಕೇರಿಯ ವಿಗಡವಿಮ್ಮಿ, ಕಾವೇರಿ ಇವರಿಗೂ ಬಂದು ಹೋದ ಬಾವಾಜಿಗೂ ಏನಾದರೂ ಸಂಬಂಧವಿರಲೇಬೇಕೆಂದು ಊಹಿಸುವ ಜನ ತಾವು ಕಂಡುಕೊಳ್ಳುತ್ತಿರುವ ಉತ್ತರ ಅನೈತಿಕತೆಗ ಸಂಬಂಧಿಸಿದ್ದರಿಂದ ತೀವ್ರ ಕುತೂಹಲವನ್ನು ಉಳಿಸಿಕೊಂಡೇ ಸಾಗುತ್ತಾರೆ. ಕತೆಗೆ ಮುಕ್ತಾಯವಿಲ್ಲ. ಹೀಗೆ ಒಂದರ ಹಿಂದೆ ಇನ್ನೊಂದು ವಿಚಿತ್ರ ತಿರವನ್ನು ಪಡೆದುಕೊಳ್ಳುತ್ತಲೇ

ಸಾಗುತ್ತದೆ. ವಸ್ತು ವೈಶಾಲ್ಯದಿಂದ ಕೂಡಿದ್ದರೂ ಕತೆಯ ಬಂಧಕ್ಕೆ ಒಂದಿಷ್ಟು ಚ್ಯುತಿ ಬಾರದಂತೆ ನಿರ್ಮಾಣಗೊಂಡಿರುವ ಅಪೂರ್ವ ಕತೆಗಾರಿಕೆಗೆ ಕತೆ ಸಾಕ್ಷಿ. ಗ್ರಾಮೀಣ ಬದುಕಿನ ವಸ್ತು ವೈವಿಧ್ಯತೆಯನ್ನು ಕೇಂದ್ರವಾಗಿರಿಸಿಕೊಂಡಿರುವ ಕತೆ ಬದುಕಿನ ಕ್ರಮದತ್ತ ಒಲವನ್ನು ಹೊಂದಿಲ್ಲ. ಬದಲಾಗಿ ಮುಗ್ಧ ಗ್ರಾಮವೊಂದರ ಮನಸ್ಥಿತಿಯನ್ನು ದೂರ ನಿಂತು ವಿಶ್ಲೇಷಿಸುತ್ತದೆ.

'ಹೊಸಾ ಗೆಂಡೆ ನಮ್ಮಾಟ' ಕತೆಯಲ್ಲಿ ಪ್ರಭಾಕರ ಮತ್ತು ನಾಗವೇಣಿ ತಮಗೆ ಅರಿವಿಲ್ಲದೆ ಬೆಳೆದ ಆಕರ್ಷಣೆ ಪ್ರೀತಿಯಾಗಿ ಬಲಿಯುವ ಮುನ್ನ ಎದ್ದ ಕುತೂಹಲದಿಂದಾಗಿ ವಿಚಲಿತರಾಗುತ್ತಾರೆ. ಆದರೆ ಈ ವಿಕ್ಷಿಪ್ತ ಘಟನೆಯೇ ಪ್ರೀತಿಯ ಅಂಕುರ ಬಲವಾಗಲು ಕಾರಣವಾಗಿ ಹೊಸ ಜೀವನದ ಆರಂಭವನ್ನು ಕಾಣುವ ತುಡಿತಕ್ಕೆ ಒಳಗಾಗುತ್ತಾರೆ. ಇಡೀ ಕತೆಯ ಅನನ್ಯತೆಯಿರುವುದು ಈ ಕತೆ ನಿರ್ಮಿಸಿಕೊಡುವ ಭಾವನಾ ವಿಕಾಸ ಕ್ರಮದಲ್ಲಿ. ಮನದಲ್ಲಿ ಮೂಡುವ ಸ್ವಚ್ಛ ಭಾವನೆಗಳಿಗೆ ರೆಕ್ಕೆ ಪುಕ್ಕ ಮೂಡಿಸಿ ಗರಿಗೆದರಿ ಹಾರಾಡಲು ಬಿಡುವಂತಹ ವಾತಾವರಣ ಇಂದಿನ ದಿನಗಳಲ್ಲಿ ನಿರ್ಮಿತವಾಗುತ್ತಿರುವುದು ಈ ಕತೆಯಲ್ಲಿ ಸೂಚಿತವಾಗಿದೆ. ಮಾನವನ ಬೌದ್ಧಿಕ ವಿಕಾಸವನ್ನು ಬೆರಗುಗಣ್ಣಿನಿಂದಲೇ ನೋಡುವ ಚಿತ್ತಾಲರ ಕಣ್ಣಿಗೆ ಇಂದಿನ ಬೆಳವಣಿಗೆಯೂ ಪ್ರೀತಿಯಿಂದಲೇ ಕೂಡಿದೆ. ಜೀವನ ಪ್ರೀತಿಯನ್ನು ಉಳಿಸಿಕೊಳ್ಳುವ ತುಡಿತ ಇವರ ಕತೆಗಳಲ್ಲಿ ಮತ್ತೆ ಮತ್ತೆ ಕಾಣುತ್ತದೆ.

ಚಿತ್ತಾಲರು ಬರೆದ ಮೊದಲ ತಲೆಮಾರಿನ ಕತೆಗಳಿಗೂ ಇತ್ತೀಚಿಗಿನ ಕತೆಗಳ ಬೆಳವಣಿಗೆಯನ್ನು ಗಮನಿಸುವುದಾದರೆ ಈ ಕಥಾಸಂಕಲನದ 'ಅಪ್ಪ' ಕತೆಯನ್ನು ನೋಡಬೇಕು. ಕಥಾಸಂಕಲನದ ಮಹತ್ವದ ಕತೆ ಇದಾಗಿದೆ. ಚಿತ್ತಾಲರ ಕತೆಗಳಲ್ಲಿ ಪ್ರಧಾನ ಪಾತ್ರಗಳು ತಾವು ಅನುಭವಿಸುವ ಮಾನಸಿಕ ಯಾತನೆಯಿಂದ ತೀವ್ರವಾಗಿ ಕುಸಿಯುತ್ತವೆ ಎಂಬುದು ಮೊದಲ ತಲೆಮಾರಿನ ಕತೆಗಳಿನ ಅನ್ವಯಿಸುವ ಸಾಮಾನ್ಯ ಮಾತಾಗಿತ್ತು. ಈ ವಿಷಯದಲ್ಲಿಯೇ ಹಲವಾರು ಚರ್ಚೆಗಳು ನಡೆದದ್ದೂ ಉಂಟು. ಚಿತ್ತಾಲರ ಕತೆಗಳಲ್ಲಿ ತಳದಿಂದ ಗಟ್ಟಿಗೊಳ್ಳುವ ಜೀವನ್ಮುಖಿ ಬೇರನ್ನು ಈಗಾಗಲೇ ಗಮನಿಸಿದ್ದೇವೆ. ಈ ಮಾತಿಗೆ ಪೂರಕವಾಗಿ 'ಹೊಸಾಗೆಂಡೆ ನಮ್ಮಾಟ', 'ತಪರಾಕಿ', 'ಅಪ್ಪ' ಕತೆಗಳಲ್ಲಿ ಪಾತ್ರ ತಾನು ಅನುಭವಿಸುವ ಯಾತನೆಯಿಂದ ತೀವ್ರ ಕುಸಿತಕ್ಕೊಳಗಾಗದೆ ಬೆಳೆಯುತ್ತವೆ ಎಂಬುದೇ ನಾವು ಗಮನಿಸಬೇಕಾದ ಸಂಗತಿ. ಹರಳುಗಟ್ಟಿದ, ಎಂತದನ್ನು ಎದುರಿಸಲು ಸಿದ್ಧವಾದ ಪ್ರಧಾನ ಪಾತ್ರಗಳು ಇಲ್ಲಿ ಗೋಚರಿಸುತ್ತವೆ. ತಮ್ಮ ಬೇರುಗಳಲ್ಲಿ ಆಗಿರುವ ಅನಾಹುತ, ದುರಂತ, ಅವಮಾನಗಳಿಗೆ ತಾವು ಪಡಬೇಕಾದಂತಹ ಸಂಕಟಕ್ಕೆ ಇಲ್ಲಿ ಜಾಗವೇ ಇಲ್ಲ. 'ಅಪ್ಪ' ಯಾರೆಂಬುದರ ರಹಸ್ಯವನ್ನು ತಾಯಿಯಿಂದ ತುಂಬಿಕೊಳ್ಳುವ ಭರತ, ತಾನು ಹುಟ್ಟಿ ಬಂದುದರ ಹಿನ್ನೆಲೆಯ ಬಗ್ಗೆ ಸ್ವಲ್ಪವೂ ವಿಚಲತನಾಗದೆ ದೃಢ ಮನಸ್ಕನಾಗಿ ಕಾಣುತ್ತಾನೆ. ತಾನು ಅನುಭವಿಸಬೇಕಾದಂತಹ ಕಿಂಚಿತ್ತೂ ಜಾಗ ಕೊಡದೆ ಹೊಸ ಚೈತನ್ಯವೊಂದರ ಕುರುಹಾಗಿ ಕಾಣಿಸಿಕೊಳ್ಳುತ್ತಾನೆ. ಕತೆಯನ್ನು ಕೇಳುತ್ತಿರುವಂತೆಯೇ ಬೆಳೆಯುತ್ತಾ ಹೋಗುವ ಪಾತ್ರ ಜೀವನದ ಸಾಧ್ಯತೆಯನ್ನು ಅರಸುವುದು ಹೊಸ ಹೊಸ ಹುಟ್ಟಿನಲ್ಲಿ ಈ ಮರುಹುಟ್ಟಿನ ಸಾಧ್ಯತೆಯಲ್ಲಿಯೇ ಬದುಕನ್ನು ಅರಸುವುದು ಚಿತ್ತಾಲರಿಗೆ ಹೆಚ್ಚು ಪ್ರಿಯವೆನಿಸುತ್ತದೆ.

ಜೀವನೋತ್ಸಾಹವನ್ನು ಇಮ್ಮಡಿಗೊಳಿಸುವ ಇನ್ನೊಂದು ಕತೆ 'ಗೆಳೆಯ' ಚಿತ್ತಾಲರ ಕಥನ ಕಲೆಗೆ ಅತ್ಯುತ್ತಮ ಉದಾಹರಣೆ. ಐವತ್ತೊಂದು ವರ್ಷಗಳ ಬಳಿಕ ಗೆಳೆಯನನ್ನು ಕಾಣುವ

ಹಂಬಲದಿಂದ ಮುಂಬೈಗೆ ಬಂದ ಪುರುಷೋತ್ತಮ ತಾನು ದೈಹಿಕವಾಗಿ ಯಾತನೆಯನ್ನನುಭವಿಸುವಾಗಲೂ ಅದಮ್ಯ ಜೀವನೋತ್ಸಾಹವನ್ನು ಪ್ರಕಟಿಸುತ್ತಾನೆ. ಬಾಲ್ಯದ ಸ್ನೇಹಿತರಾಗಿದ್ದ ನೀಲಕಂಠ ಮತ್ತು ಪುರುಷೋತ್ತಮರಿಬ್ಬರೂ ಐವತ್ತೊಂದು ವರ್ಷಗಳ ದೀರ್ಘ ವಿರಾಮದ ನಂತರ ಒಬ್ಬರನ್ನೊಬ್ಬರು ಸಂಧಿಸುವ ಕಾಲದಲ್ಲಿ ಉಂಟಾದ ಗೊಂದಲ ಕತೆಗೆ ಆಕರ. ಪುರುಷೋತ್ತಮನ ದಿಢೀರ್ ಭೇಟಿಯಿಂದಾಗಿ ನೀಲಕಂಠ ಗೊಂದಲಕ್ಕೊಳಗಾಗುತ್ತಾನೆ. ಪುರುಷೋತ್ತಮ ಹೇಳುವ ವಿಚಾರಗಳಂತೂ ಮತ್ತಷ್ಟು ಗೊಂದಲದ ಗೂಡಾಗಿ ಪರಿಣಮಿಸುತ್ತವೆ. ಜೀವನವನ್ನು ಸವಾಲಾಗಿ ಸ್ವೀಕರಿಸಿರುವ ಪುರುಷೋತ್ತಮ ದೈಹಿಕ ಕಾಯಿಲೆಯಿಂದ ಊನವಾಗಿದ್ದರೂ ಜೀವಿಸುವ ಹಕ್ಕನ್ನು ಕಳೆದುಕೊಳ್ಳಲಾರ. 'ಬಿಂದು ಬಿಂದುವಾಗಿ ಒಳಗೆ ಹೀರಿದ್ದು ಬಿಂದು ಬಿಂದುವಾಗಿಯೇ ಮಹಾ ಆದದ್ದು! ಬದುಕು ಅನುಭವವಾಗುವ ಪರಿಯೇನೋ ಇದು'! ಎನ್ನುವ ಪುರುಷೋತ್ತಮ ಜೀವನ ಪ್ರೀತಿಯ ಸಂಕೇತ. ಇಡೀ ಕತೆ ಗಮನಸೆಳೆಯುವುದು ಅದರ ನಿರೂಪಣಾ ಕ್ರಮದಿಂದ. ವಿಷಯವನ್ನು ಕಥಿಸುವ ಕಲೆ ಚಿತ್ತಾಲರಿಗೆ ಗುಣವಾಗಿ ಪರಿಣಮಿಸಿದೆ. ಕೊನೆಯವರೆಗೂ ಕುತೂಹಲವನ್ನು ಉಳಿಸಿಕೊಡುವ ಕತೆಗೆ ಮನೋವೈಜ್ಞಾನಿಕ ತಂತ್ರದ ಲೇಪನವಿದೆ. ಕತೆ ಸಾಗುವ ಕ್ರಿಯೆಯಲ್ಲಿಯೇ ಚಿತ್ತಾಲರ ಕೇಂದ್ರಪ್ರಜ್ಞೆ ಜಾಗೃತವಾಗುತ್ತದೆ.

'ಗೆಳೆಯ' ಕತೆಗೆ ಒದಗಿದ ಜೀವಕೇಂದ್ರಿತ ಪ್ರಜ್ಞೆಯ ಮಹತ್ವ 'ಸಾವಿತ್ರಿಯ ಮದುವೆ' ಕತೆಗೂ ವಿಸ್ತರಿಸಿದೆ. 'ಸಾವಿತ್ರಿಯ ಮದುವೆ' ಕತೆ ಹಲವು ಮನುಷ್ಯ ಕೇಂದ್ರಿತ ಪ್ರಜ್ಞೆಗಳು ಸೃಷ್ಟಿಸಿರುವ ಹಾಗೂ ನಿಜ ಜೀವನವನ್ನು ಅರಸುವ ಮನಸ್ಸಿನ ನಡುವೆ ನಡೆಯುವ ಹೊಯ್ದಾಟವನ್ನು ಪ್ರಜ್ಞೆಯಾಗಿರಿಸಿಕೊಂಡಿದೆ. ತನಗೆ ಹತ್ತಿದ ವಿಚಿತ್ರ ಕಾಯಿಲೆಯ ಕೀಳರಿಮೆಯಿಂದ ಇಪ್ಪತ್ತು ಲಕ್ಷಗಳೊಂದಿಗೆ ಹೆಂಡತಿ, ಮಗುವೊಂದನ್ನು ಬಿಟ್ಟು ಪರಾರಿಯಾಗಿದ್ದಾತ ಸಮಾಜದ ಕಣ್ಣಿನಲ್ಲಿ ಹಲವು ಊಹೆಯ ಉತ್ತರಗಳಿಗೆ ವಸ್ತುವಾಗಿದ್ದ. ಇಪ್ಪತ್ತು ವರ್ಷಗಳಿಂದಲೂ ಆತನ ಹಾದಿ ಕಾಯುತ್ತಿರುವ ಹೆಂಡತಿ  ತನ್ನ ಮಗಳ ಮದುವೆಯ ಸಂದರ್ಭದಲ್ಲೂ ಬರದಿರುವ ಗಂಡನ ಹಾದಿಯನ್ನೇ ಕಾಯುತ್ತಾಳೆ. ಆಕೆಯದು ಆಶಾವಾದಿತನದ ನಿರೀಕ್ಷೆ. ತಾನು ಕಾಣೆಯಾದ ಬಗ್ಗೆ ನಿಜಸಂಗತಿ ತನ್ನ ಕುಟುಂಬದವರಿಗೆ ಗೊತ್ತಾಗಲಿ ಎಂದು ಪರಿತಪಿಸುವ ವ್ಯಕ್ತಿ, ತಾನು ಮೊದಲಿನಂತಾಗುವ ಹಂಬಲವಿದ್ದರೂ ಅತೀವ ಕೀಳರಿಮೆಯಿಂದ ನರಳುತ್ತಾನೆ. ತಾನು ಪ್ರತ್ಯಕ್ಷವಾಗುವುದರಿಂದ ಕುಟುಂಬದಲ್ಲಿ ತಲೆದೋರಬಹುದಾದ ಅನಾಹುತಗಳ ಅರಿವಿನಿಂದ ಕುಸಿತದ ತೀವ್ರತೆ ತಪ್ಪಿ ಪಾತ್ರ ಊರ್ಧ್ವಮುಖಿಯಾಗುತ್ತದೆ. ಕತೆಯಲ್ಲಿ ಅತಿಯೆನ್ನಿಸುವಂತಹ ವಿವರಗಳು ತೀರಾ ಅಸಹಜವೆನ್ನುವಂತಹ ಘಟನೆಗಳು ಕತೆಯ ಮಹತ್ತಿಗೆ ಚ್ಯುತಿ ತಂದಿವೆಯೆನ್ನದೆ ವಿಧಿಯಿಲ್ಲ.

ಯಶವಂತ ಚಿತ್ತಾಲರ ಮಹತ್ವಾಕಾಂಕ್ಷೆಯ ಕತೆಗಳಲ್ಲೊಂದಾದ 'ಓಡಿಹೋದಾ ಮುಟ್ಟಬಂದಾ' ಕತೆ ಅನೇಕ ದೃಷ್ಟಿಗಳಿಂದ ಕನ್ನಡದ ಮಹತ್ವದ ಕತೆಯೂ ಹೌದು. ಕತೆಯನ್ನು ಓದಿದ ಮೇಲೆ ಕತೆಯೊಂದಿಗಿನ ಓದುಗನ ಆತ್ಮೀಯ ಸಂಬಂಧ, ಅರ್ಪಣಾ ಮನೋಭಾವ ನಿಜಕ್ಕೂ ಅಚ್ಚರಿ ಮೂಡಿಸುತ್ತದೆ. ಚಿತ್ತಾಲರ ಕತೆಗಳಿಗೆ ಮಹತ್ವದ ಆಕರವಾಗಿರುವ ಉತ್ತರ ಕನ್ನಡ, ಕುಮಟ, ಹೆರವಟ್ಟೆ, ಹನೇಹಳ್ಳಿಯೇ ಈ ಕತೆಗೆ ಕೇಂದ್ರಬಿಂದು. 'ತುಂಗಕ್ಕ' ಚಿತ್ತಾಲರ ಕತೆ-ಕಾದಂಬರಿಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ ಅಪೂರ್ವ ಪ್ರತಿಮೆ. ಇಲ್ಲಿನ ಕತೆಯೂ ಕೂಡ ತುಂಗಕ್ಕನ ಸುತ್ತಲೇ ಕೇಂದ್ರೀಕರಣಗೊಂಡಿದೆ. ಈ ಕತೆ ಮಾರು ತಲೆಮಾರುಗಳ ಮಧ್ಯೆ ನಡೆಯುತ್ತದೆ. ಕತೆ ಬಿಚ್ಚಿಕೊಳ್ಳುವುದು

ತುಂಗಕ್ಕ ಸಾಯುವಾಗ ಹೇಳಿದ 'ಓಡಿ ಹೋದಾ ಮುಟ್ಟಿ ಬಂದಾ' ಎನ್ನುವ ಗಾದೆಯಿಂದ. ತುಂಗಕ್ಕ ಮತ್ತು ಆಕೆಯ ಗಂಡ, ಮುದುಕ ಮೊದಲಿನ ತಲೆಮಾರಿನವರಾದರೆ, ಬೀರಣ್ಣನಾಯ್ಕ, ಸಾಂತಯ್ಯ, ಗಣಪಯ್ಯ, ಸೋದರತ್ತೆ ಇವರು ಎರಡನೇ ತಲೆಮಾರಿನವರು. ಗಾದೆಯ ಅರ್ಥ ಬಿಡಿಸಲು ಹೊರಟವರು ಮಾತ್ರ ಎಳೆಯವರಾದ ವೆಂಕಟ್ರಾಮ ವಿಠ್ಠಲ, ಪೊಕ್ಕ ಹಾಗು ನಿರೂಪಕ ಮೂರನೇ ತಲೆಮಾರಿನವರು. ಕತೆ ಸಂಬಂಧಿಸಿದ್ದು ಮೊದಲನೆ ತಲೆಮಾರಿಗೆ. ಮದುವೆಯಾಗಿ ಐದನೇ ವರ್ಷದಲ್ಲಿಯೇ ಗಂಡನನ್ನು ಕಳೆದುಕೊಂಡ ತುಂಗಕ್ಕ ಮಕ್ಕಳಿಲ್ಲದೆಯೇ ಇಡೀ ಜೀವನವನ್ನು ಕಳೆದವಳು. ಗಾದೆ, ಕತೆ, ಒಗಟುಗಳ ಮೂಲಕ ಸುತ್ತಮುತ್ತಲಿನ ಜನರಿಗೆಲ್ಲ ಪ್ರಿಯಳಾಗಿದ್ದವಳು. ಆಕೆ ಸಾಯುವಾಗ 'ಓಡಿ ಹೋದಾ ಮುಟ್ಟಿ ಬಂದಾ' ಎಂದು ಹೇಳಿದ ಗಾದೆಯನ್ನು ಕೇಳಿದ ಮುದುಕನೊಬ್ಬ 'ಖಿಕ್' ಎಂದು ನಕ್ಕಿದ್ದೇ ಕಾರಣವಾಗಿ, ಅರ್ಥದ ಶೋಧಕ್ಕೆ ತೊಡಗಿದ ಮೂರನೇ ತಲೆಮಾರಿನವರು ಆಕೆಯ ಗಂಡನ ಸಾವಿನ ನಿಜವಾದ ಕಾರಣ ಶೋಧಿಸುತ್ತಾರೆ. ಎಲ್ಲರೂ ತಿಳಿದಂತೆ ತುಂಗಕ್ಕನ ಗಂಡ ಸತ್ತಿದ್ದು ಆತ್ಮಹತ್ಯೆಯಿಂದ. ತಾನು 'ಖೊಜ್ಜ'ನಾಗಿದ್ದುದರಿಂದ ಹೆಂಡತಿಯನ್ನು ತೃಪ್ತಿಪಡಸಲಾಗದೆ ಜೀವನವನ್ನು ಕಳೆದುಕೊಂಡಿದ್ದ. ವಿಷಯ ಮೊದಲ ಎರಡೂ ತಲೆಮಾರಿಗೂ ಗೊತ್ತು. ಈ ವಿಷಯವನ್ನು ಸಂಗ್ರಹಿಸಿದ ಮೂರನೇ ತಲೆಮಾರಿನ ಎಳೆಯ ಹುಡುಗರೇ ಇಡೀ ಕತೆಯ ಸೂತ್ರದಾರರು. ಕತೆಯ ತುಂಬೆಲ್ಲ ಆವರಿಸಿರುವುದು 'ಸುಪ್ತಕಾಮ ಪ್ರಜ್ಞೆ' ವಯಸ್ಸಿನ ಪಕ್ವತೆಯಿಂದ ಜಾಗೃತವಾಗುವ ಕಾಮಪ್ರಜ್ಞೆ, ಸಹಜವಾಗಿಯೆ ಮುಚ್ಚಿಟ್ಟಿರುವ ವಿಷಯದ ಬಗ್ಗೆ ಕುತೂಹಲಿಗಳಾಗುವಂತೆ ಮಾಡುತ್ತದೆ. ಆಗ ತಾನೆ ತಮ್ಮಲ್ಲಿ ಜಾಗೃತವಾಗುತ್ತಿರುವ ಕುತೂಹಲದ ವಿಷಯವನ್ನು ಉಳಿಸಿಕೊಳ್ಳುವುದು ದಮನಿಸಲ್ಪಟ್ಟಿರುವ ಸುಪ್ತ ಕಾಸಕ್ಕೆ. ಕತೆಯ ಹೊರಮೈ ನವಿರಾದ ಸಂಭಾಷಣೆಯಿಂದ ಕೂಡಿದೆ. ತಮಗರಿವಿಲ್ಲದೆಯೇ ತಮಗೆ ಜಾಗೃತವಾಗುತ್ತಿರುವ ಲೈಂಗಿಕ ಪ್ರಜ್ಞೆಗೆ ತೀವ್ರ ಸ್ಪಂದಿಸುವಂತಹ ಮನಸ್ಸಿನ ಬಗ್ಗೆ ಸೂಕ್ಷ್ಮ ಒಳನೋಟವನ್ನು ನೀಡುವಲ್ಲಿ ಕತೆಯ ಯಶಸ್ಸಿದೆ.

'ಒಬ್ಬ ಮುದುಕ ಮತ್ತು ಆತನ ಸೇವಕ' ಹಾಗು 'ಹುಳಿಮಜ್ಜಿಗೆ ಸಾರೂ ರಾಜಕಾರಣವೂ' ತುಂಬ ಉತ್ತಮವಾದ ಕತೆಗಳೇನಲ್ಲ. ಇವೆರಡು ಕತೆಗಳ ಹಂದರ ಮುಂಬೈನ ವ್ಯಾವಹಾರಿಕ ಜಗತ್ತಿಗೆ ಸಂಬಂಧಪಟ್ಟದ್ದು. ಸಾಧು, ಸಜ್ಜನಿಕೆಯ ಮನುಷ್ಯನೊಬ್ಬನ ಮೇಲೆ ಈ ಕೃತಕ ಜಗತ್ತು ನಡೆಸುವ ಆತ್ಮಹತ್ಯಾ ಪ್ರವೃತ್ತಿ 'ಒಬ್ಬ ಮುದುಕ ಮತ್ತು ಆತನ ಸೇವಕ' ಕತೆಯ ವಸ್ತು. ತೀರ ಸಿನಿಮಾ ಕತೆಯೊಂದರ ಜಾಡನ್ನು ಹಿಡಿದು ನಿರೂಪಿತವಾಗಿರುವುದು ಬೇಸರದ ಸಂಗತಿ. ತಾನು ಊಹಿಸಿದ್ದಕ್ಕಿಂತಲೂ ಅತಿ ಘೋರ ಕೃತ್ಯ ತನ್ನ ಕಡೆಯವರಿಂದಲೇ ನಡೆಯುವಾಗಲೂ ತಾನು ಅಳವಡಿಸಿಕೊಂಡು ಬಂದಿರುವ ತತ್ವಗಳಿಗೆ ಬದ್ಧನಾಗುವ 'ಮಾನೇಕ್‌ಜೀದಾರೂವಾಲ' ಮತ್ತು ಮನೆಗೆಲಸದವನಾದ 'ಪಾಂಡೂ' ಪ್ರಪಂಚದಲ್ಲಿ ಆಗುತ್ತಿರುವ ಮುಗ್ಧಹತ್ಯೆಗೆ ಉದಾಹರಣೆಯಂತಿದ್ದಾರೆ. 'ಹುಳಿಮಜ್ಜಿಗೆ ಸಾರೂ ರಾಜಕಾರಣವೂ' ಒಂದು ವೈನೋಧಿಕ ಕತೆ. ಕತೆಯನ್ನು ಆವರಿಸಿಕೊಂಡಿರುವ ನವಿರಾದ ಹಾಸ್ಯ ಗಂಭೀರತೆಯನ್ನು ಒಳಗೊಂಡಿದೆ. 'ಮೂಲೆ ಮನುಷ್ಯ'ನೆಂದು ಆಫೀಸಿನಲ್ಲಿ ಕರೆಯಿಸಿಕೊಳ್ಳುವ ಶ್ರೀನಿವಾಸ ರಾಮಚಂದ್ರಗಡಮ್ 'ಫೈಲಿಂಗ್ ಅಂಡ್ ಡಿಸ್ಪ್ಯಾಚಿಂಗ್ ಕ್ಲಾರ್ಕ್'. ಈತನ ಕೆಲಸಗಳು ಮೊದಲಿನ ಹಾಗೇ ಇದ್ದರೂ 'ಫೈಲಿಂಗ್ ಅಂಡ್ ಡಿಸ್ಪ್ಯಾಚಿಂಗ್ ಅಸಿಸ್ಟೆಂಟ್' ಎಂದು ಮ್ಯಾನೇಜರ್ ನಾಮಕರಣ ಮಾಡಿದದು ಆತನಿಗೆ ಕೋಡುಮೂಡಿಸಿ ತಾನು ಉನ್ನತ ಹುದ್ದೆಗೆ ಬಡ್ತಿ ಹೊಂದಿದ್ದೇನೆಂಬುದನ್ನೇ ಕೊನೆತನಕ ಸಾಧಿಸುತ್ತಾ ಬಂದವನು. ಈತನು ಒಮ್ಮೆ

ಹೆಂಡತಿ ಮಾಡಿದ ಹುಳಿಮಜ್ಜಿಗೆ ಸಾರನ್ನು ತಿಂದು ಆಫೀಸಿನಲ್ಲಿ ನಿದ್ದೆ ಹೊಡೆದು ಇಡೀ ಆಫೀಸಿನ ಸಿಬ್ಬಂದಿಯವರಲ್ಲಿ ಅಪಹಾಸ್ಯಕ್ಕೆ ಈಡಾಗುತ್ತಾನೆ. ಕತೆಯ ತುಂಬೆಲ್ಲ ಇಂತಹ ನವಿರಾದ ಹಾಸ್ಯ ಸನ್ನಿವೇಶಗಳು ತುಂಬಿದದರೂ ಮುಂಬೈ ಜಗತ್ತಿನಲ್ಲಿ ಪೇಚಿನ ಪ್ರಸಂಗಗಳು ಜೀವಹತ್ಯಾ ಪ್ರವೃತ್ತಿಯನ್ನು ತಂದಿರಿಸುವುದು ಈ ಕತೆಯಲ್ಲಿ ಸೂಚ್ಯವಾಗಿ ಕಾಣಿಸಿಕೊಳ್ಳುತ್ತದೆ. 'ಹೀಗೊಂದು ದಂತ ಕಥೆ'ಗೆ ಇನ್ನಿತರ ಕತೆಗಳಿಗೆ ಇರುವ ವಸ್ತು ವೈಶಾಲ್ಯಕ್ಕಿಂತ ಭಿನ್ನವಾದ, ವೈಚಾರಿಕದಂತಹ ಚೌಕಟ್ಟಿದೆ. ಕತೆಯ ನಾಯಕ ಎಂ.ಎಸ್ಸಿಯಲ್ಲಿ ಚಿನ್ನದ ಪದಕದೊಂದಿಗೆ ಪ್ರಥಮ ರ್‍ಯಾಂಕ್ ಪಡೆದಿದ್ದರೂ ತನಗೆ ಜಾತಿ ಇಲ್ಲದ್ದರಿಂದ ಕೆಲಸ ತಪ್ಪಿಹೋಗುವ ಪೇಚಿನ ಪ್ರಸಂಗವಿದೆ. ಕತೆಯ ತುಂಬೆಲ್ಲ ಯುನಿವರ್ಸಿಟಿ, ರಾಜಕೀಯ, ಸರ್ಕಾರ ಇನ್ನಿತರ ವಲಯಗಳಲ್ಲಿ ನಡೆಯುತ್ತಿರುವ ಅನ್ಯಾಯಗಳ ಬಗ್ಗೆ ಪ್ರತಿಭಟನೆ ವ್ಯಕ್ತವಾಗುತ್ತದೆ. ನಿಜವಾದ ಮನುಷ್ಯಪ್ರಜ್ಞೆ ಈ ದೇಶದಲ್ಲಿ ಜಾಗೃತವಾಗಿ ಆಚರಣೆಗೆ ಬರಲು ಇನ್ನೂ ಶತಮಾನಗಳೇ ಬೇಕಿದೆ. ಕಥಾನಾಯಕನ ಮಾನವತೆಯ ಯೋಚನೆಯೇ ನಾವು ಕಂಡುಕೊಳ್ಳಬೇಕಾದ ಬಹುಮುಖ್ಯ ವಿಷಯವಾಗಿದೆ.

ಯಶವಂತ ಚಿತ್ತಾಲರ ಕಥಾಸಾಹಿತ್ಯ ಕನ್ನಡದ ಮಟ್ಟಿಗಂತೂ ಶ್ರೀಮಂತವಾದ ಕೊಡುಗೆ. ಚಿತ್ತಾಲರಿಗೆ ಮಾತ್ರ ಸಾಧ್ಯವಾಗಿರುವಂತಹ ಕಥಾಶೈಲಿ ಎಲ್ಲೆಲ್ಲೂ ಚಿತ್ತಾಲತನದ ಮುದ್ರೆಯೊತ್ತಿರುತ್ತದೆ. "ಮೊದಲಿನಿಂದಲೂ ತಮ್ಮದೇ ಆದ ಆಸಕ್ತಿಗಳು ಮತ್ತು ಜೀವನ ದೃಷ್ಟಿಯನ್ನು ಹೊಂದಿರುವ ಚಿತ್ತಾಲರು, ಸಮಕಾಲೀನ ಸಾಹಿತ್ಯಕ ಸನ್ನಿವೇಶದ ತುಡಿತಗಳಿಗೆ ಸ್ಪಂದಿಸತ್ತಾ ಬಂದಿದ್ದಾರೆ. ಆದರೆ ಅವುಗಳ ಒತ್ತಡಕ್ಕೆ ಬಾಗದೆ ತಮ್ಮದೇ ಆದ ರೀತಿಯಲ್ಲಿ ಹೊಸ ಆಯಾಮಗಳನ್ನು ಸೇರಿಸಿದ್ದಾರೆ. ಸಾಹಿತ್ಯವು ಕ್ರಾಂತಿಯನ್ನು ಮಾಡಲಾರದೆಂದು ಅರಿತಾಗಲೇ ಸಾಹಿತ್ಯ ಮಾತ್ರ ಮಾಡಬಹುದಾದ್ದನ್ನು ಮಾಡಲು ಸಾಧ್ಯವೆಂದು ಅವರ ನಿಲುವು"[೧]

□

೧. ಎಚ್.ಎಸ್. ರಾಘವೇಂದ್ರರಾವ್, ಸಾಲುದೀಪಗಳು.

ಹಂಗರವಳ್ಳಿ ಪ್ರಭಾಕರ್
ಸಂಶೋಧಕ, ಕು.ಕ.ಅ. ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು

# ಲೇಖಕರಿಗೆ ವಿನಂತಿ

ಅಕಾಡೆಮಿಯ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ದ ಸ್ವರೂಪದಲ್ಲಿ ರಚನಾತ್ಮಕ ಬದಲಾವಣೆಗಳನ್ನು ತರಬೇಕೆಂಬ ಹಂಬಲವನ್ನು ತಾವು ಇದುವರೆಗಿನ ಸಂಚಿಕೆಗಳ ಮೂಲಕ ಗಮನಿಸಬಹುದಾಗಿದೆ. ಕನ್ನಡದ ಶ್ರೇಷ್ಠ ಲೇಖಕರನ್ನೆಲ್ಲ ಒಳಗೊಳ್ಳುವಂತೆಯೂ ಹಾಗೂ ಹೊಸ ಸಂವಾದ, ಸಂವೇದನೆಗಳ ಶಕ್ತ ವೇದಿಕೆಯಾಗಿ ಪತ್ರಿಕೆ ಗಂಭೀರ ಸಾಹಿತ್ಯ ಚಿಂತನೆಗಳ ಅಭಿವ್ಯಕ್ತಿಯಾಗಿ ರೂಪುಗೊಳ್ಳಬೇಕೆಂಬುದೂ ನಮ್ಮ ಆಶಯವಾಗಿದೆ. ಕನ್ನಡದ ಹಿರಿಯ ಹಾಗೂ ಭರವಸೆಯ ಹೊಸ ಪೀಳಿಗೆಯ ಲೇಖಕರೆಲ್ಲರ ಭಾಗವಹಿಸುವಿಕೆಯೇ ಪತ್ರಿಕೆಗೆ ಜೀವದ್ರವ್ಯವಾದ್ದರಿಂದ ತಮ್ಮ ಅಮೂಲ್ಯ ಸಹಕಾರ ಅತ್ಯಗತ್ಯ.

ಅನ್ಯಭಾಷೆಯ ಶ್ರೇಷ್ಠ ಬರಹಗಳ ಅನುವಾದದೊಂದಿಗೆ, ಸ್ವತಂತ್ರ ಬರಹಗಳನ್ನು ಆಹ್ವಾನಿಸುತ್ತಿದ್ದೇವೆ. 'ಅನಿಕೇತನ'ಕ್ಕಾಗಿ ಕವಿತೆ / ಕಥೆ / ಕಿರುನಾಟಕ / ವಿಮರ್ಶಾತ್ಮಕ / ವೈಚಾರಿಕ ಲೇಖನ / ಪ್ರಬಂಧ / ಸಾಂಸ್ಕೃತಿಕ ಚಿಂತನೆ ಹಾಗೂ ಅನುವಾದಗಳನ್ನು ಕಳುಹಿಸಿ ಕೊಡುವುದರ ಮೂಲಕ ನಮ್ಮ ಪ್ರಯತ್ನಕ್ಕೆ ಸಹಕರಿಸಬೇಕೆಂದು ಕೋರುತ್ತಿದ್ದೇವೆ. ದಯವಿಟ್ಟು ಬರೆಯಿರಿ. ಪತ್ರಿಕೆಗೆ ಹೊಸ ರೂಪ ಕೊಡಬೇಕೆಂಬ ಪ್ರಯತ್ನಗಳ ನಮ್ಮೊಂದಿಗೆ ಸದಾ ನೀವಿರುತ್ತೀರೆಂಬುದೇ ನಮ್ಮ ಧೈರ್ಯ ಹಾಗೂ ವಿಶ್ವಾಸ.

ಅನುವಾದಗಳಾದರೆ ಮೂಲ ಲೇಖಕರ ಹೆಸರು, ವಿಳಾಸ, ಮೂಲ ಬರಹದ ಭಾಷೆಯ ವಿವರ ಅಗತ್ಯ. ಅನುಮತಿ ಪತ್ರದ ಜೆರಾಕ್ಸ್ ಪ್ರತಿ ಜೊತೆಯಲ್ಲಿರುವುದು ಅಪೇಕ್ಷಣೀಯ. ಬರವಣಿಗೆ ಹಾಳೆಯ ಒಂದೇ ಮಗ್ಗುಲಲ್ಲಿದ್ದು, ಸ್ಫುಟವಾಗಿ ಓದಲು ಅನುಕೂಲವಾಗುವಂತಿರಲಿ.

ಬರಹಗಳನ್ನು ಕಳುಹಿಸಬೇಕಾದ ವಿಳಾಸ :
**ಸಂಪಾದಕರು, 'ಅನಿಕೇತನ', ಕರ್ನಾಟಕ ಸಾಹಿತ್ಯ ಅಕಾಡೆಮಿ**
**ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨**

**-ಸಂಪಾದಕರು**

# ನನ್ನುಡುಕುವ ಅಪ್ಪನಿಗೆ ಒಂದು ಪತ್ರ

ಅಪ್ಪ
ನನಗೆ ಅಂದು ಬಂದಿದ್ದ ಇಂಟ್ರುವಿಗೆ
ಒಂದು ಕೆಲಸ ಸಿಕ್ಕಿದೆ ಇಂದು
ಇನ್ನು ಹುಡುಕಬೇಡಿ ನನ್ನ ಸುಮ್ಮನೆ
ಗೌಡನ ಕೈಯಲ್ಲಿ ಪೇಪರಲ್ಲಿ
"ಕಾಣೆಯಾಗಿದ್ದಾನೆ" ಎಂದು ಬರೆಸಬೇಡಿ
ಅವ್ವನಿಗೂ ಹೇಳು ಅಳಬೇಡವೆಂದು
ಇನ್ನೇನೊ ಇಷ್ಟರಲ್ಲೇ....
ಬಂದು ಬಿಡುತ್ತಾನೆಂದು

ಕೆಲಸ ನಮ್ಮೂರಲ್ಲೆ
ನಮ್ಮಕ್ಕಪಕ್ಕದೂರುಗಳಲ್ಲೆ (ಟೆಂಪೊರರಿ ಅಲ್ಲ)
ಅಲ್ಲಿಯತನಕ ಇಲ್ಲಿ ಬಾರಿಯ ಕೆಲಸ
ಅಣೆಕಟ್ಟು ಕಟ್ಟುವ ಕೆಲಸ
ವಿದ್ಯುತ್ ತಯಾರಿಸಬೇಕು
ನಮ್ಮೂರಿಗೂ ಹರಿಸಬೇಕೆಂದಿದ್ದೇವೆ
ಸಂಬಳ ಒಂದೇ ಸಾರಿ
ಕೊನೆಗೆ ಕೆಲಸ ಮುಗಿದ ಮೇಲೆ

ಅವ್ವ ಹಾಸಿಗೆ ಹಿಡಿದಿದ್ದಾಗ
ನನ್ನ ಕರಿಯ ಕೈಕಾಲ ದುರುದುರು ನೋಡಿ
ಕೊಟ್ಟ ಸಾಲಕ್ಕೆ ಗೌಡ
ಜೀತಕ್ಕೆ ಬರಬೇಕೆಂದು ಹಟ ಹಿಡಿದಿದ್ದರೆ
ನನ್ನ ತಮ್ಮನಿಗೇಳು
ಅವರ ಮನೆಗೋಗಲು ರೆಡಿಯಾಗೆಂದು

ನಾನೂ ಬರುತ್ತೇನೆ
ಗೌಡನಿಗೆ ಹೇಳು...ಅಪ್ಪ....
ಮರೆಯದೇ ಹೇಳು....
.........................................
....ಬಂದು ತೀರಿಸುತ್ತಾರೆಂದು

ಪ್ರೊ. ಎಚ್. ಗೋವಿಂದಯ್ಯ

---

Reg. No. 45646/88 Price : 30/-